# ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ
ಬೀದರ - ೫೮೫೪೦೧

# "ದಲಿತ - ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು"

(ಡಾಕ್ಟರ್ ಆಫ್ ಫಿಲಾಸಫಿ (ಪಿಹೆಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು
ಅನುಪ್ರಿಯಾ ನೀಲಕಂಠರಾವ

ಮಾರ್ಗದರ್ಶಕರು
ಡಾ. ಈಶ್ವರಯ್ಯ ಮಠ
ಎಂ.ಎ. ಎಂ.ಫಿಲ್. ಪಿಹೆಚ್.ಡಿ
ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ, ಬೀದರ -೫೮೫೪೦೧





ಕನ್ನಡ ಸಾಹಿತ್ಯ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ೫೮೩೨೭೬
೨೦೧೭

# ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ
## ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ

ಬೀದರ – ೫೮೫೪೦೧

# "ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು"

(ಡಾಕ್ಟರ್ ಆಫ್ ಫಿಲಾಸಫಿ (ಪಿಹೆಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ಅನುಪ್ರಿಯಾ ನೀಲಕಂಠರಾವ**

ಮಾರ್ಗದರ್ಶಕರು

**ಡಾ. ಈಶ್ವರಯ್ಯ ಮಠ**

ಎಂ.ಎ., ಎಂ.ಫಿಲ್., ಪಿಹೆಚ್.ಡಿ.

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ

ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ, ಬೀದರ – ೫೮೫೪೦೧



ಕನ್ನಡ ಸಾಹಿತ್ಯ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ೫೮೩೨೭೬

೨೦೧೭

# ಮಾರ್ಗದರ್ಶಕರ ಪ್ರಮಾಣ ಪತ್ರ

"ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು" ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಅನುಪ್ರಿಯಾ ನೀಲಕಂಠರಾವ ಅವರು ನನ್ನ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ, ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: ೭-೮-೧೭

ಮಾರ್ಗದರ್ಶಕರು
**ಡಾ. ಈಶ್ವರಯ್ಯ ಮಠ**
ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ,
ಬೀದರ — ೫೮೫೪೦೧

ಸಂಶೋಧನಾ ಮಾರ್ಗದರ್ಶಕರು
ಡಾ॥ ಈಶ್ವರಯ್ಯ ಮಠ
ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆ
ಕನ್ನಡ ಸಂಶೋಧನಾ ಕೇಂದ್ರ, ಬೀದರ

# ಪ್ರಮಾಣ ಪತ್ರ

"**ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು**" ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಡಾ. ಈಶ್ವರಯ್ಯ ಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾ ನಿಕಾಯ ಸಾಹಿತ್ಯ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಈ ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಅನುಪ್ರಿಯಾ

ಸಂಶೋಧಕರು

ಸ್ಥಳ : ವಿದ್ಯಾರಣ್ಯ

ದಿನಾಂಕ: 2-8-12

**ಅನುಪ್ರಿಯಾ ನೀಲಕಂಠರಾವ**

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ

ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ,

ಬೀದರ — ೫೮೫೪೦೧

## ಪರಿವಿಡಿ

ಅಧ್ಯಾಯ-೧

# ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ವೈಧಾನಿಕತೆ

# ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ವೈಧಾನಿಕತೆ

## ೧.೧ ಪ್ರಸ್ತಾವನೆ :

ಕನ್ನಡ ಕಾವ್ಯ ಪರಂಪರೆಯು ಜೀವನದಿಯಂತೆ ಕಾಲದಿಂದ ಕಾಲಕ್ಕೆ ನಿತ್ಯನೂತನವಾಗಿ ಹರಿದು ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ನಿರ್ಮಾಣದಲ್ಲಿ ತನ್ನದೆ ಆದ ಪಾತ್ರವನ್ನು ನಿರ್ವಹಿಸುತ್ತಿದೆ.ಈ ಕಾವ್ಯಪರಂಪರೆಯ ಹರಿಯುವಿಕೆಯಲ್ಲಿ ಹಲವು ತಿರುವುಗಳು ಅಥವಾ ಪರಿವರ್ತನೆಗಳು ಪ್ರಭಾವ ಬೀರಿ ಕಾವ್ಯ ರಚನೆಯ ಶೈಲಿ, ವಸ್ತು, ಭಾಷೆ, ಆಶಯ ಮುಂತಾದವುಗಳಲ್ಲಿ ಸ್ಥಿತ್ಯಂತರಗಳನ್ನು ಕಂಡಿದೆ. ಈ ಪ್ರತಿಯೊಂದು ತಿರುವು ಅಥವಾ ಪರಿವರ್ತನೆಗೆ ಆ ಕಾಲದ ಸಾಂಸ್ಕೃತಿಕ ಒತ್ತಡಗಳು ಪ್ರಧಾನವಾಗಿ ಕಾರಣವಾಗಿವೆ. ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯಲ್ಲಿನ ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಸಾಹಿತ್ಯಗಳಿಗೂ ಈ ಮಾತು ಅನ್ವಯವಾಗುತ್ತದೆ.ಅದರಲ್ಲಿಯೂ ವಿಶೇಷವಾಗಿ ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಸಮಾನತೆಯ ತತ್ವದ ಅಡಿಯಲ್ಲಿ ಬಂಡಾಯದ ಧ್ವನಿಯೊಂದಿಗೆ ಜೊತೆ ಜೊತೆಯಾಗಿ ಬಂದ ದಲಿತ-ಬಂಡಾಯ ಸಾಹಿತ್ಯ ಶೋಷಿತರ ಬದುಕಿನ ದನಿಯಾಗಿ ದಮನಿತರ ಪರವಾಗಿ ನಿಂತಿತು.ದಲಿತ-ಬಂಡಾಯ ಸಾಹಿತ್ಯ ಅಖಂಡ ಕನ್ನಡ ಸಂಸ್ಕೃತಿಗೆ ನೀಡಿದ ಕೊಡುಗೆ ಅಪಾರವಾದದ್ದು. ನಿರಂತರವಾಗಿ ದಮನಿತಕ್ಕೆ ಒಳಗಾದ ಸಮುದಾಯಗಳ ಬದುಕಿನ ಶೋಧನೆಯ ವಿಧಾನವಾಗಿ ಮತ್ತು ಅಸ್ತ್ರವಾಗಿ ಹೊಸ ಹೊಸ ಬರಹಗಾರರನ್ನು ಆಕರ್ಷಿಸಿತು. ಈ ಕಾಲಘಟ್ಟದಲ್ಲಿ ಅಖಂಡ ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ, ಎಲ್ಲಾ ಭಾಷಿಕ ಪ್ರಕಾರಗಳಲ್ಲಿನ ಬರಹಗಾರರು ತಮ್ಮ ಜೀವನಾನುಭಗಳನ್ನು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಅಭಿವ್ಯಕ್ತ ಪಡಿಸುತ್ತ, ತಮ್ಮ ಸಾಮಾಜಿಕ ಕಾಳಜಿಯೊಂದಿಗೆ ಜಾಗೃತಿ ಮೂಡಿಸುವ ಕಾರ್ಯಗಳನ್ನು ಮಾಡಿದ್ದು ವಿಶೇಷವಾಗಿದೆ.

ದಲಿತ-ಬಂಡಾಯ ಸಾಹಿತ್ಯ ಘಟ್ಟದ ಕಾವ್ಯ ಪ್ರಕಾರವು ತನ್ನದೇ ಆದ ಹೊಸ ಕನಸು, ಕಲ್ಪನೆ, ಅನುಭವಗಳೊಂದಿಗೆ ಅಭಿವ್ಯಕ್ತಿಯ ರೂಪವನ್ನು ಪಡೆದುಕೊಂಡಿತು. ಆ ಮೂಲಕ ಕನ್ನಡ ಕಾವ್ಯಪರಂಪರೆಯನ್ನು ಮತ್ತಷ್ಟು ಶಿಖರದಾಕಾರದಲ್ಲಿ ಮತ್ತು ಶಿಖರದೆತ್ತರಕ್ಕೆ ತೆಗೆದುಕೊಂಡು ಹೋಯಿತು. ಕಾವ್ಯ ಪ್ರಕಾರದಲ್ಲಿಯೂ ಮುಖ್ಯವಾಗಿ ಕವಿತೆಗಳ ಕೊಡುಗೆ ವಿಶೇಷವಾಗಿದೆ. ಇದರಲ್ಲಿಯೂ ಹೊಸ ಹೊಸ ವಸ್ತು-ಆಶಯಗಳನ್ನಿಟ್ಟುಕೊಂಡು ಹೊಸ ಪ್ರಯೋಗಾತ್ಮಕ

ರಚನೆಗಳು ಬಂದವು. ಅದರಲ್ಲಿಯೂ ಮಹಿಳಾ ಬರಹಗಾರರಿಗೆ ಇದು ಒಂದು ಉತ್ತಮ ಅಭಿವ್ಯಕ್ತಿಯ ಮಾಧ್ಯಮವಾಯಿತು. ಇದರಿಂದ ಚಳವಳಿ ಮತ್ತು ಸಾಹಿತ್ಯದ ದಾರಿಯಲ್ಲಿ ಹೊಸ ಹೆಜ್ಜೆಗಳನ್ನು ಮಹಿಳಾ ಸಾಹಿತ್ಯ ಇಟ್ಟಿತ್ತು. ಈ ಮೂಲಕ ದಲಿತ-ಬಂಡಾಯ ಸಾಹಿತ್ಯದ ವಿಶೇಷತೆಗಳಿಗೆ ಹಾಗೂ ಮಹಿಳಾ ಅಸ್ತಿತ್ವದ ನೆಲೆಗಳಿಗೆ ಹಲವು ಆಯಾಮಗಳು ಪ್ರಾಪ್ತವಾದವು. ಆದುದರಿಂದ **'ದಲಿತ ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು'** ಎಂಬ ಶೀರ್ಷಿಕೆಯನ್ನು ಇಟ್ಟುಕೊಂಡು ಈ ಸಂಶೋಧನಾ ಅಧ್ಯಯನವನ್ನು ಮಾಡುತ್ತಿದ್ದೇನೆ.

## ೧.೨ ಅಧ್ಯಯನದ ಉದ್ದೇಶ :

ದಲಿತ-ಬಂಡಾಯ ಸಾಹಿತ್ಯದ ಕಾಲಘಟ್ಟ ಹಲವಾರು ಕಾರಣಗಳಿಂದ ವಿಶೇಷತೆಯನ್ನು ಪಡೆದುಕೊಂಡಿದೆ. ಈ ಕಾಲಘಟ್ಟದ ಪ್ರತಿಯೊಂದು ಬದಲಾವಣೆಗೆ ದೇಶಿಯ ಚಿಂತನೆಗಳು ಮತ್ತು ಜಾಗತಿಕ ವಿದ್ಯಾಮಾನಗಳು ಕಾರಣವಾಗಿವೆ. ಕಾರಣಗಳು ಹಲವಾರು ಇದ್ದರೂ ನಮ್ಮ ಬದುಕಿನಲ್ಲಾದ ಸ್ಥಿತ್ಯಂತರಗಳು ಕೆಲವರಿಗೆ ಸಂತೋಷದಾಯಕವಾಗಿ ಸ್ವೀಕರಾರ್ಹವಾದರೆ ಮತ್ತೆ ಕೆಲವರಿಗೆ ಸ್ವೀಕರಾರ್ಹವಾಗದೆ ಇರಬಹುದು. ಅದರಲ್ಲಿಯೂ ಮಹಿಳಾ ಬದುಕಿನಲ್ಲಾದ ಸ್ಥಿತ್ಯಂತರ ಈ ಕಾಲಘಟ್ಟದ ಒಂದು ಮುಖ್ಯ ವಿಶೇಷ.

ಅದುವರೆಗೂ ನಮ್ಮ ಸಾಹಿತ್ಯ-ಸಂಸ್ಕೃತಿ ಚರಿತ್ರೆಯಲ್ಲಿ ಮಹಿಳೆಯರನ್ನು ಅಜಾಗೃತ ನೆಲೆಯಲ್ಲಿ ಇರುವಂತೆ ವ್ಯವಸ್ಥಿತವಾದ ತಂತ್ರವನ್ನು ಹಲವು ಮಾರ್ಗಗಳಲ್ಲಿ ರೂಪಿಸಲಾಗಿತ್ತು. ಅದರಲ್ಲಿಯೂ ದಲಿತ ಮಹಿಳೆಯರ ಬದುಕು ಪುರುಷ ಪ್ರಧಾನ ವ್ಯವಸ್ಥೆ ಮತ್ತು ಪುರೋಹಿತಶಾಹಿ ವ್ಯವಸ್ಥೆಗಳೆರಡರಿಂದ ಶೋಷಣೆಗೆ ಒಳಗಾಗುತ್ತಿತ್ತು. ಇದರ ವಿರುದ್ಧ ಧ್ವನಿ ಎತ್ತಿದ್ದ ಸಂದರ್ಭಗಳು ದಲಿತ ಬಂಡಾಯ ಸಾಹಿತ್ಯದ ಪೂರ್ವದಲ್ಲಿ ಕಂಡು ಬಂದರೂ; ದೊಡ್ಡಮಟ್ಟದ ಪ್ರತಿಭಟನೆಯ ಧ್ವನಿ ಕಂಡುಬರಲಿಲ್ಲ. ಹಾಗೂ ಪರಿವರ್ತನೆಯ ಸ್ವರೂಪ ದೊಡ್ಡ ಪ್ರಮಾಣದಲ್ಲಿ ಇರಲಿಲ್ಲ. ವಚನ ಸಾಹಿತ್ಯವನ್ನು ಹೊರತುಪಡಿಸಿದರೆ, ಈ ಮಾತು ಅಕ್ಷರಶಃ ನಿಜವಾಗಿದೆ. ಆದರೆ ದಲಿತ ಬಂಡಾಯ ಸಾಹಿತ್ಯದಲ್ಲಿ ಪ್ರತಿಭಟನೆ ಮತ್ತು ಬಂಡಾಯದ ಧ್ವನಿ ವಿಭಿನ್ನವಾಗಿ ಕವಿತೆಗಳಲ್ಲಿ ಮೂಡಿವೆ. ಆ ಕಾಲಘಟ್ಟದ ಮಹಿಳಾ ಸಮುದಾಯ ತನ್ನ ನೋವನ್ನು, ಮಾನಸಿಕ ತೊಳಲಾಟ-ವೇದನೆಯನ್ನು ತಮ್ಮ ಕವಿತೆಯ ಮೂಲಕ ಪ್ರಕಟಪಡಿಸುತ್ತ ತಮ್ಮ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಂಡು, ಅವುಗಳ ಮೇಲಿನ ಮೇಲ್ವರ್ಗದವರ ಮತ್ತು ಪಿತೃಪ್ರಧಾನ ವ್ಯವಸ್ಥೆಯ ದೌರ್ಜನ್ಯಗಳನ್ನು ಬೆಟ್ಟುಮಾಡಿ ತೋರಿಸಿ ಅವುಗಳನ್ನು ಸರಿಪಡಿಸುವ

ಕಾರ್ಯದಲ್ಲಿ ತಮ್ಮ ಕವಿತೆಗಳನ್ನು ಸಾಧನವಾಗಿ ಬಳಸಿಕೊಂಡಿದ್ದಾರೆ. ಕೇವಲ ಮಹಿಳೆಯರಷ್ಟೇ ದಮನಿತ ಮಹಿಳೆಯರ ಬಗ್ಗೆ ಮಾತನಾಡದೆ ಪುರುಷ ಬರಹಗಾರರು ಕೂಡ ಮಹಿಳಾ ಸಮುದಾಯವನ್ನು ಕುರಿತು ಮಾತನಾಡುತ್ತ ಅವರ ಅಸ್ತಿತ್ವದ ನೆಲೆಗಳ ಬಗ್ಗೆ ಯಾವ ರೀತಿಯ ಧೋರಣೆಗಳನ್ನು ಹೊಂದಿದ್ದರು ಎಂಬುದು ಕುತೂಹಲದ ವಿಷಯವಾಗಿದೆ. ಅದನ್ನು ಈ 'ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು' ಎಂಬ ಶೀರ್ಷಿಕೆಯೊಡನೆ ಇದುವರೆಗಿನ ಅಧ್ಯಯನದ ಸಮೀಕ್ಷೆ, ಕನ್ನಡ ಸಾಹಿತ್ಯ ಅಭಿವ್ಯಕ್ತಿಸಿದ ಮಹಿಳಾ ಅಸ್ತಿತ್ವದ ತಾತ್ವಿಕ ನೆಲೆಗಳು ಈ ಕುರಿತು ಸವಿಸ್ತಾರವಾಗಿ ಅಧ್ಯಯನ ಮಾಡುವುದು ಈ ಸಂಶೋಧನಾ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಇದರ ಇನ್ನೂ ಜೊತೆಗೆ ಈ ಕೆಳಕಂಡ ಕೆಲವು ಉದ್ದೇಶಗಳನ್ನು ಪ್ರಸ್ತುತ ಸಂಶೋಧನಾಧ್ಯಯನದಲ್ಲಿ ಅಳವಡಿಸಲು ನಾನು ಆಸಕ್ತಳಾಗಿದ್ದೇನೆ.

೧. ದಲಿತ-ಬಂಡಾಯ ಸಾಹಿತ್ಯದ ಸೃಜನಶೀಲ ಬರಹಗಾರರು ಮಹಿಳಾ ಅಸ್ತಿತ್ವದ ನೆಲೆಗಳನ್ನು ಹೇಗೆ ಚಿತ್ರಿಸಿದ್ದಾರೆ. ಆ ಚಿತ್ರಣದಲ್ಲಿ ಕಂಡುಬರುವ ಬರಹಗಾರರ ತಾತ್ವಿಕ ಮನೋಭಾವವೇನು? ಎಂಬುದನ್ನು ಅರ್ಥಮಾಡಿಕೊಳ್ಳುವುದು.

೨. ದಲಿತ-ಬಂಡಾಯ ಸಾಹಿತ್ಯ ಕಾಲಘಟ್ಟದ ಮಹಿಳಾ ಬರಹಗಾರರು ತಮ್ಮದೆ ಆದ ಚಹರೆಯನ್ನು ಗುರುತಿಸಿಕೊಳ್ಳುವ ನಿಟ್ಟಿನಲ್ಲಿ ನಡೆಸಿದ ಸಾಹಿತ್ಯಕ ಪ್ರಯತ್ನಗಳನ್ನು ಗುರುತಿಸಿಕೊಳ್ಳವುದು.

೩. ಆ ಮೂಲಕ ಅವರ ಪ್ರಯತ್ನ ಎಷ್ಟರ್ ಮಟ್ಟಿಗೆ ಸಫಲ ಮತ್ತು ವಿಫಲವಾಗಿದೆ ಎಂಬುದನ್ನು ಗ್ರಹಿಸಿಕೊಳ್ಳಬಹುದು. ಅನಂತರ ಆ ಸಫಲತೆ ಮತ್ತು ವಿಫಲಗಳಿಗೆ ಕಾರಣಗಳನ್ನು ಕಂಡುಕೊಳ್ಳುವುದು.

೪. ದಲಿತ ಬಂಡಾಯ ಸಾಹಿತ್ಯದ ಬರಹಗಾರರು ಯಾವ ಅಂಶಗಳನ್ನು ಮಹಿಳಾ ಅಸ್ತಿತ್ವದ ನೆಲೆಯಲ್ಲಿ ಹೆಚ್ಚಾಗಿ ಚಿತ್ರಿಸಿದ್ದಾರೆ. ಆ ಮೂಲಕ ಅವರ ಮನೋಧರ್ಮ ಮತ್ತು ಧೋರಣೆಗಳೇನು ಎಂಬುದನ್ನು ಗ್ರಹಿಸುವುದು.

## ೧.೩. ಅಧ್ಯಯನದ ವ್ಯಾಪ್ತಿ :

ಈ ಅಧ್ಯಯನವನ್ನು ದಲಿತ-ಬಂಡಾಯದ ಬರಹಗಾರರು ಅಂದರೆ ಪುರುಷ ಮತ್ತು ಮಹಿಳೆಯರ ಕವಿತೆಗಳನ್ನು ಮುಖ್ಯ ಆಕರವಾಗಿಟ್ಟುಕೊಂಡು ಮಾಡಲಾಗಿದೆ. ಅದರಲ್ಲಿಯೂ

ಮಹಿಳಾ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಳ್ಳುವುದಕ್ಕೆ ಮುಖ್ಯವೆನಿಸಿದ ಕವಿತೆಗಳನ್ನು ಮಾತ್ರ ಇಲ್ಲಿ ಕಾಲಾನುಕ್ರಮದಲ್ಲಿ ಆಯ್ದುಕೊಳ್ಳಲಾಗಿದೆ.

ಸ್ತ್ರೀವಾದ ಅಥವಾ "ಫೆಮಿನಿಸಂ" ಎಂಬುದು ಒಂದು ರಾಜಕೀಯ ಸಿದ್ಧಾಂತ. ಸಿಮೊನ್ ದ ಬೊವಾ ಅವರು ಹೇಳುವಂತೆ – "ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ ಅವಳನ್ನು ಸಮಾಜ ಮತ್ತು ಸಂಸ್ಕೃತಿ ಸಂರಚಿಸುತ್ತದೆ ಅಥವಾ ಕಟ್ಟುತ್ತದೆ".'ಸ್ತ್ರೀಯೆಂದರೆ ಲತೆ' 'ಗಂಡು ಮಾಮರ' ಈ ರೀತಿಯ ವರ್ಣನೆಗಳು ಕನ್ನಡದಲ್ಲಿ ಹೇರಳವಾಗಿವೆ. ಅದಕ್ಕೆ ನ್ಯಾನ್ಸಿ ಸಿ.ಯಂ.ಹಾರ್ಟ್ ಸಾಕ್ ರವರು "ಹೆಣ್ಣನ್ನು ಪೂರ್ತಿ ನೈಸರ್ಗಿಕವೆಂದೋ ಸಾಮಾಜಿಕವೆಂದೋ ಕರೆಯುವಂತಿಲ್ಲ" ಎಂದು ಹೇಳುತ್ತಾರೆ. ಸ್ತ್ರೀವಾದವನ್ನು ಅಭ್ಯಾಸಿಸಿದಾಗ ಹೆಣ್ಣಿನ ಶತ್ರು ಪುರುಷನಲ್ಲ ಸಮಾಜದಲ್ಲಿ ಪುರುಷನಿಗೆ ಇರುವಷ್ಟು ನೆಲೆಗಳು ಮಹಿಳೆಗೆ ದೊರಕುವುದಿಲ್ಲ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದರೂ ಮಹಿಳೆಗೆ ಸಂಪೂರ್ಣವಾಗಿ ದೊರೆತಿಲ್ಲ. ಪ್ರತಿಯೊಂದು ಹಂತದಲ್ಲಿ ಶೋಷಣೆ ದಬ್ಬಾಳಿಕೆಯನ್ನು ಅನುಭವಿಸುತ್ತಿದ್ದಾಳೆ. ದಲಿತ-ಬಂಡಾಯ ಸಾಹಿತ್ಯದಲ್ಲಿ ಇಂತಹ ಶೋಷಣೆ ದಬ್ಬಾಳಿಕೆಗಳು ವಿವಿಧ ಹಂತದಲ್ಲಿ ಅಭಿವ್ಯಕ್ತಗೊಂಡಿರುವುದು ಕಾಣಸಿಗುತ್ತವೆ. ದಲಿತರು ಸಾಹಿತ್ಯದ ಮುಖಾಂತರ ಸಿಡಿದೆದ್ದು ಅಲ್ಲಿಯ ಶೋಷಣೆ, ಅತ್ಯಾಚಾರ, ಅನ್ಯಾಯ, ಇವೆಲ್ಲವನ್ನು ಸಾಹಿತ್ಯದ ಮುಖಾಂತರ ಹೊರಹಾಕಿದರು. ಇದನ್ನರಿತ ಬಂಡಾಯ ಸಾಹಿತಿಗಳು ಕಾವ್ಯ ಎನ್ನುವುದು 'ಖಡ್ಗವಾಗಿ' ಹೊರ ಹೊಮ್ಮಲೆಂದು ಆಶಿಸಿದರು.ಬಂಡಾಯದ ಸಂದರ್ಭದಲ್ಲಿ ದಲಿತರು, ದಲಿತೇತರರು ಎಲ್ಲರೂ ಸೇರಿಕೊಂಡೇ ಸಾಹಿತ್ಯ ರಚನೆಯನ್ನು ಮಾಡಿದರು.ಈ ಹಿನ್ನೆಲೆಯಲ್ಲಿ ಈ ಕಾಲ ಘಟ್ಟದ ದಲಿತ ಸಾಹಿತ್ಯದಲ್ಲಿ ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿ, ಎಲ್, ಹನುಮಂತಯ್ಯ, ಗಂಗಾರಾಂ ಚಾಂಡಾಳ, ಸತ್ಯಾನಂದ ಪಾತ್ರೋಟ, ಮುಳ್ಳೂರು ನಾಗರಾಜ, ಹೊಸೂರ ಮುನಿಶಾಮಪ್ಪ, ಕೆ.ಬಿ.ಸಿದ್ಧಯ್ಯ, ವಿ.ಮುನಿವೆಂಕಟಪ್ಪ, ಸುಕನ್ಯಾ ಮಾರುತಿ, ದು.ಸರಸ್ವತಿ, ಮೊಗಳ್ಳಿ ಗಣೇಶ ಸೇರಿದಂತೆ ಹಲವಾರು ಖ್ಯಾತ ಸಾಹಿತಿಗಳ ಕವಿತೆಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಬಂಡಾಯ ಸಾಹಿತ್ಯದಲ್ಲಿ ವಿಜಯಾ ದಬ್ಬೆ, ವಿಜಯಶ್ರೀ ಸಬರದ, ಎಚ್. ಎಸ್. ಮುಕ್ತಾಯಕ್ಕ, ಶಶಿಕಲಾ ವೀರಯ್ಯಾಸ್ವಾಮಿ, ಲತಾ ಗುತ್ತಿ, ಕೆ. ಶರೀಫಾ, ಮಾಲತಿ ಪಟ್ಟಣಶೆಟ್ಟಿ, ಮಲ್ಲಿಕಾ ಘಂಟಿ, ಸ.ಉಷಾ, ಡಿ.ಬಿ.ರಜಿಯಾ, ಚೆನ್ನಣ್ಣ ವಾಲೀಕಾರ, ಕಾಶಿನಾಥ ಅಂಬಲಗಿ, ಸೂಗಯ್ಯ ಹಿರೇಮಠ, ಬಸವರಾಜ ಸಬರದ, ಅಲ್ಲಮಪ್ರಭು ಬೆಟ್ಟದೂರು, ರಂಜಾನ ದರ್ಗಾ

ಅವರ ಕವಿತೆಗಳನ್ನು ಈ ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳಲಾಗಿದೆ. ಈ ವ್ಯಾಪ್ತಿಯ ಚೌಕಟ್ಟಿನಲ್ಲಿ ನನ್ನ ಅಧ್ಯಯನವು ನಡೆದಿದೆ.

## ೧.೩ ಅಧ್ಯಯನದ ವೈಧಾನಿಕತೆ :

"ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು" ಎಂಬ ವಿಷಯದ ಈ ಮಹಾಪ್ರಬಂಧದ ರಚನೆಯಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಮೂಲಾಧಾರಗಳನ್ನು ಬಳಸಿಕೊಳ್ಳಲಾಗಿದೆ.

**ಪ್ರಾಥಮಿಕ ಆಕರಗಳು** : ವ್ಯಕ್ತಿ ಸಂದರ್ಶನ, ಅವಲೋಕನ, ವಿದ್ವಾಂಸರಾದ ಡಾ.ಪ್ರೇಮಾ ಸಿರ್ಸೆ, ಡಾ.ಮೀನಾಕ್ಷಿ ಬಾಳಿ, ಡಾ. ಶಾಂತಾ ಅಷ್ಟಿಗೆ, ಇಂದುಮತಿ ಪಾಟೀಲ ಹಾಗೂ ಕೆ.ನೀಲಾ ಗುಲಬರ್ಗಾ ವಿಶ್ವವಿದ್ಯಾಲಯ ಪ್ರಾಧ್ಯಾಪಕರಾದ ಡಾ.ಪಿ.ಕೆ ಖಂಡೋಬಾ, ಡಾ.ಎಸ್.ಎಮ್. ಹಿರೇಮಠ, ಡಾ. ಚಂದ್ರಕಲಾ ಬಿದರಿ ಇವರೊಂದಿಗೆ ಚರ್ಚಿಸಲಾಗಿದೆ. "ಹೈದ್ರಾಬಾದ್ ಕರ್ನಾಟಕ ಚೇಂಬರ್ ಆಫ್ ಕಾಮರ್ಸ್" ಕಲಬುರಗಿಯಲ್ಲಿ ನಡೆದ "ಜಾಗತಿಕ ಮಟ್ಟದಲ್ಲಿ ಮಹಿಳಾ ಸಬಲೀಕರಣ" ಎಂಬ ವಿಷಯದ ಕುರಿತು ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣದಲ್ಲಿ ಪಾಲ್ಗೊಂಡು ನನ್ನ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸಿಕೊಂಡಿರುವೆ.

**ಆನುಷಂಗಿಕ ಆಕರಗಳು** : ಬಿಡಿ ಪತ್ರಿಕೆಗಳು ಅಂದರೆ ಪ್ರಜಾವಾಣಿ, ವಿಜಯ ವಾಣಿ, ವಿಜಯ ಕರ್ನಾಟಕದಂತಹ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳನ್ನು ಪರಿಶೀಲಿಸಿದ್ದೇನೆ. ಇವಲ್ಲದೆ ಗುಲಬರ್ಗಾ, ಹಂಪಿ, ವಿಜಯಪುರ, ಧಾರವಾಡ ವಿಶ್ವವಿದ್ಯಾಲಯಗಳಿಗೆ ಭೇಟಿ ನೀಡಿ, ಅಲ್ಲಿಯ ಗ್ರಂಥಾಲಯಗಳ ಸಹಾಯವನ್ನು ಪಡೆದಿದ್ದೇನೆ. ಪ್ರಸ್ತುತ ಅಧ್ಯಯನಕ್ಕೆ ಅವಶ್ಯವೆನಿಸಿದ ಮಾಹಿತಿ, ಕವಿತೆಗಳು ಹಾಗೂ ತಾತ್ವಿಕ ಅಂಶಗಳನ್ನು ಸಂಗ್ರಹಿಸಿಕೊಂಡಿರುವೆನು.

ಅಧ್ಯಯನದ ಅನುಕೂಲಕ್ಕೆ ತಕ್ಕಂತೆ ಮಹಾಪ್ರಬಂಧವನ್ನು ಆರು ಅಧ್ಯಾಯಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ.ಮಹಿಳಾ ಅಸ್ತಿತ್ವದ ನೆಲೆಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಹಾಗೂ ನನ್ನ ಅಧ್ಯಯನದ ಉದ್ದೇಶಕ್ಕೆ ಅನುಗುಣವಾಗಿ ಅಧ್ಯಯನವನ್ನು ಮಾಡಲು ಅಗತ್ಯವಾದ ಸ್ತ್ರೀವಾದಿ ಸಿದ್ಧಾಂತಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಳ್ಳಲಾಗಿದೆ. ಇದುವರೆಗಿನ ಸ್ತ್ರೀವಾದಿ ವಿಮರ್ಶೆಯ ನೆಲೆಯಲ್ಲಿ ದಲಿತ ಬಂಡಾಯ ಸಾಹಿತ್ಯದಲ್ಲಿನ ಕವಿತೆಗಳನ್ನು ವಿವರಣಾತ್ಮಕವಾಗಿ.

ವಿಮರ್ಶಾತ್ಮಕವಾಗಿ ವಿಶ್ಲೇಷಿಸಿಕೊಂಡು; ಮಹಿಳಾ ಅಸ್ತಿತ್ವದ ನೆಲೆಗಳನ್ನು ಸ್ತ್ರೀವಾದಿ ಸಿದ್ಧಾಂತದೊಂದಿಗೆ ಗುರುತಿಸಿಕೊಳ್ಳುವ ಪ್ರಯತ್ನವನ್ನು ಮಾಡಿದ್ದೇನೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆಯೊಂದಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ, ಪ್ರಕಟಿತ ಮತ್ತು ಅಪ್ರಕಟಿತ ಆಕರ ಗ್ರಂಥಗಳನ್ನು ಸ್ಪಷ್ಟಪಡಿಸಲಾಗಿದೆ. ಜೊತೆಗೆ ಈವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಯನ್ನು ಹಾಗೂ ಪ್ರಸ್ತುತ ಅಧ್ಯಯನದ ಅವಶ್ಯಕತೆಯನ್ನು ಸ್ಪಷ್ಟಪಡಿಸಲಾಗಿದೆ. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವದ ಹಿನ್ನೆಲೆಯಲ್ಲಿ ಈ ಕೆಳಕಂಡ ರೀತಿಯಲ್ಲಿ ಅಧ್ಯಾಯಗಳನ್ನು ರಚಿಸಿಕೊಂಡು ಪ್ರಸ್ತುತ ಅಧ್ಯಯನವನ್ನು ಮಾಡಲಾಗಿದೆ.

| | | |
|---|---|---|
| ಅಧ್ಯಾಯ ೧ | : | ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ವೈಧಾನಿಕತೆ |
| ಅಧ್ಯಾಯ ೨ | : | ದಲಿತ – ಬಂಡಾಯದ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು : ಇದುವರೆಗಿನ ಅಧ್ಯಯನಗಳ ಸಮೀಕ್ಷೆ. |
| ಅಧ್ಯಾಯ ೩ | : | ಕನ್ನಡ ಸಾಹಿತ್ಯ ಅಭಿವ್ಯಕ್ತಿಸಿದ ಮಹಿಳಾ ಅಸ್ತಿತ್ವದ ತಾತ್ವಿಕ ನೆಲೆಗಳು. |
| ಅಧ್ಯಾಯ ೪ | : | ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು |
| ಅಧ್ಯಾಯ ೫ | : | ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು |
| ಅಧಾಯ ೬ | : | ಸಮಾರೋಪ |

**'ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು : ಇದುವರೆಗಿನ ಅಧ್ಯಯನಗಳ ಸಮೀಕ್ಷೆ'** ಎಂಬ ಎರಡನೆಯ ಅಧ್ಯಾಯದಲ್ಲಿ ದಲಿತ-ಬಂಡಾಯ ಸಾಹಿತ್ಯದ ಸ್ವರೂಪವನ್ನು ಕುರಿತು ಪ್ರಮುಖ ವಿದ್ವಾಂಸರು ಮಂಡಿಸಿದ ಕೆಲ ಮಹತ್ವದ ವಿಚಾರಗಳ ಚರ್ಚೆ, ವಿಶ್ಲೇಷಣೆ, ಮಹತ್ವದ ಕವಿ ಕಾವ್ಯ, ಕೃತಿಗಳು ಹಾಗೂ ಅವುಗಳಲ್ಲಿ ವ್ಯಕ್ತವಾದ ಮಹಿಳಾ ಅಸ್ತಿತ್ವದ ನೆಲೆಗಳ ಇದುವರೆಗಿನ ಸಮೀಕ್ಷೆಯನ್ನು ಮಾಡಲಾಗಿದೆ. ದಲಿತ-ಬಂಡಾಯ ಸಾಹಿತ್ಯದ ಪ್ರಧಾನ ವಾಹಿನಿಯಾದ ಮಹಿಳಾ ಕಾವ್ಯದಲ್ಲಿ ಮೂಲ ವಿಷಯವಾದ ಮಹಿಳಾ ಅಸ್ತಿತ್ವದ ನೆಲೆಗಳ ಸ್ಥೂಲ ಸಮೀಕ್ಷೆಯನ್ನು ಇದುವರೆಗಿನ ಅಧ್ಯಯನ ಹಿನ್ನೆಲೆಯಲ್ಲಿ ಕೈಗೊಳ್ಳಲಾಗಿದೆ.

**'ಕನ್ನಡ ಸಾಹಿತ್ಯ ಅಭಿವ್ಯಕ್ತಿಸಿದ ಮಹಿಳಾ ಅಸ್ತಿತ್ವದ ತಾತ್ವಿಕ ನೆಲೆಗಳು'** ಮೂರನೆಯ ಅಧ್ಯಾಯದಲ್ಲಿ ಸುಮಾರು ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವನ್ನು ಹೊಂದಿರುವ

ಕನ್ನಡ ಸಾಹಿತ್ಯ ತುಂಬಾ ವಿಶಿಷ್ಟವು ಮತ್ತು ವಿಸ್ತಾರವು ಆಗಿದೆ. ಹಳೆಗನ್ನಡ ಕಾಲದ ಪಂಪ, ಪೊನ್ನ, ರನ್ನ ಮೊದಲಾದ ಕವಿಗಳ ಕಾವ್ಯ ಕೃತಿಗಳಿಂದ ಹಿಡಿದು ವಚನ, ಕೀರ್ತನ, ಸಾಂಗತ್ಯ, ತ್ರಿಪದಿ, ರಗಳೆ, ಷಟ್ಪದಿ ಹಾಗೂ ಹೊಸಗನ್ನಡ ಕಾವ್ಯ ಕೃತಿಗಳಲ್ಲಿ ವ್ಯಕ್ತವಾದ ಮಹಿಳಾ ಅಸ್ತಿತ್ವದ ನೆಲಗಳನ್ನು ಚಿತ್ರಿಸಲಾಗಿದೆ.

ಅನಂತರದಲ್ಲಿ ಇಂದಿನ ಆಧುನಿಕ-ಜಾಗತೀಕರಣದ ಬದುಕಿನಲ್ಲಿ ಪುರುಷನಿಗೆ ಸಮಾನವಾದ ಅವಕಾಶಗಳು ಮಹಿಳೆಗೆ ದೊರೆಯುತ್ತಿವೆಯೋ? ಹೆಣ್ಣು ಭ್ರೂಣ ಹತ್ಯೆ, ಮಹಿಳೆ ಮತ್ತು ಆರೋಗ್ಯ, ಅವಳ ಆರ್ಥಿಕ ನೆಲೆಗಳು, ಉದ್ಯೋಗದ ನೆಲೆಗಳು, ಧಾರ್ಮಿಕವಾಗಿ ಅವಳ ನೆಲೆಗಳು, ಧರ್ಮದ ಹೆಸರಿನಲ್ಲಿ ಹೆಣ್ಣನ್ನು ಭೋಗದ ವಸ್ತುವಾಗಿ ಊರ ಗೌಡ, ಸಾಹುಕಾರ, ಭೋಗಿಸುವುದಕ್ಕಾಗಿ ಅವಳನ್ನು ಜೋಗತಿಯನ್ನಾಗಿ ಮಾಡಿ, ದೇವರ ಹೆಸರಿನ ಮೇಲೆ ಬಸವಿ ಬಿಡುವುದು, ಇವೆಲ್ಲವುಗಳ ಜೊತೆಗೆ ಆಸ್ತಿ ಹಕ್ಕು, ಮಹಿಳಾ ಕಾನೂನು, ಅಸಮಾನತೆ ಕಾನೂನು ಮಹಿಳೆಯನ್ನು ಕುರಿತು ಏನನ್ನು ಪ್ರತಿಪಾದಿಸುತ್ತದೆ? ಸಮಾಜದಲ್ಲಿ ಮಹಿಳಾ ಸಮಾನತೆ ಹೇಗಿದೆ? ಎಂಬ ಮೊದಲಾದ ವಿಚಾರಗಳ ಮೂಲಕ ಮಹಿಳಾ ಅಸ್ತಿತ್ವದ ನೆಲೆಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡು ವಿವರಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

**'ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು'** ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಪ್ರಧಾನವಾಗಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳನ್ನು ಶೋಧಿಸುವ ಕಾರ್ಯವನ್ನು ವಿವರಣಾತ್ಮಕವಾಗಿ ಮತ್ತು ವಿಮರ್ಶಾತ್ಮಕವಾಗಿ ಮಾಡಿದ್ದೇನೆ. ಮಹಿಳಾ ಅಸ್ತಿತ್ವದ ನೆಲೆಗಳನ್ನು ಪುರುಷ ಮತ್ತು ಮಹಿಳೆಯರ ಕವಿತೆಗಳಲ್ಲಿಯೂ ಕೂಡ ಉದ್ದೇಶಪೂರ್ವಕವಾಗಿ ಶೋಧಿಸಿದ್ದೇನೆ. ಈ ಎರಡು ವರ್ಗದ ಅಭಿವ್ಯಕ್ತಿಯ ಶೈಲಿ, ಆಶಯಗಳು, ಸ್ಥಿರ ಮಾದರಿ ಪಾತ್ರಗಳನ್ನು ಎರಡು ವರ್ಗದವರು ಕಲ್ಪಿಸಿಕೊಳ್ಳುವ ಬಗೆ, ಅವುಗಳಿಗೆ ತಮ್ಮ ಕವಿತೆಯ ಮೂಲಕ ನೀಡಿರುವ ವ್ಯಾಖ್ಯಾನಗಳನ್ನು ವಿವರಿಸಿದ್ದೇನೆ. ಮಹಿಳಾ ಶೋಷಣೆಯ ನೆಲೆಗಳನ್ನು ಈ ಬರಹಗಾರರು ವಿವರಿಸಿರುವ ಬಗೆಯನ್ನು ವಿಶ್ಲೇಷಿಸಿದ್ದೇನೆ. ಅಧ್ಯಾಯದ ಕೊನೆಯಲ್ಲಿ ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳನ್ನು ಗುರುತಿಸುತ್ತ, ಬರಹಗಾರರ ತಾತ್ವಿಕ ನೆಲೆಗಳನ್ನು ದಾಖಲಿಸಿದ್ದೇನೆ. ಹಾಗೂ ಈ ಎಲ್ಲಾ ಕವಿತೆಗಳಲ್ಲಿ ದಲಿತ ಸಾಹಿತ್ಯ ಮತ್ತು ಚಳವಳಿಯ ಆಶಯ-ಧೋರಣೆಗಳು ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿ ಹೊಂದಿಕೊಂಡಿವೆ ಎಂಬುದನ್ನು ಸೂಕ್ಷ್ಮವಾಗಿ ವಿಶದ ಪಡಿಸಿದ್ದೇನೆ.

**'ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು'**– ಎಂಬ ಐದನೆಯ ಅಧ್ಯಾಯದಲ್ಲಿ ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಂಡ ಮಾದರಿಯಲ್ಲಿಯೇ ಬಂಡಾಯ ಕವಿತೆಗಳಲ್ಲಿಯೂ ಮಹಿಳಾ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಂಡಿದ್ದೇನೆ.

ಪುರೋಹಿತಶಾಹಿ, ಬಂಡವಾಳಶಾಹಿ, ಶ್ರೀಮಂತರ ದಬ್ಬಾಳಿಕೆ ಇವೆಲ್ಲವುಗಳ ವಿರುದ್ಧ ಸಿಡಿದೇಳುವ ಚಟುವಟಿಕೆ ಬಂಡಾಯ ಸಂದರ್ಭದಲ್ಲಿ ನಡೆಯಿತು.ಈ ಸಂದರ್ಭದಲ್ಲಿಯೇ ಕವಿಗಳು ದೇವಿ, ಅಕ್ಕ, ತಾಯಿ, ಅವ್ವ, ಮುಸ್ಲಿಂರ ಪರದಾ ಪದ್ಧತಿ, ಪರಂಪರೆ, ಶೋಷಣೆ, ಹೋರಾಟ ಎಂಬ ವಸ್ತು ಆಶಯಗಳೊಂದಿಗೆ ಮಹಿಳಾ ಪರ ಕವಿತೆಗಳನ್ನು ಈ ಕಾಲಘಟ್ಟದಲ್ಲಿ ರಚಿಸಿದರು. ಈ ಕವಿತೆಗಳು ಮಹಿಳೆಯನ್ನು ಪುರುಷರು ಹೇಗೆ ತಮ್ಮವಳನ್ನಾಗಿಸಿಕೊಂಡರು ಹಾಗೂ ಕೀರ್ತಿ, ಕಾಮನೆ, ಧರ್ಮ, ಸ್ವಾರ್ಥಗಳಿಗಾಗಿ ಆಕೆಯನ್ನು ಜೀವ ರಹಿತ ಪ್ರಾಣಿಯನ್ನಾಗಿ ಬಳಸಿಕೊಂಡರು ಎಂಬುದನ್ನು ಬಿಚ್ಚಿ ಹೇಳುತ್ತವೆ. ಮಹಿಳೆಯರ ಬದುಕಿನ ವೈರುಧ್ಯಗಳನ್ನು ತನ್ನ ಕಾವ್ಯದ ಮುಖ್ಯ ಭೂಮಿಕೆಯನ್ನಾಗಿಸಿಕೊಂಡು ಕವಯತ್ರಿ ಮಹಿಳೆಯರು ಅನುಭವಿಸಿದ ನೋವು, ಅವಮಾನ, ಆತಂಕ, ಅಸಾಯಕತೆ, ಶೋಷಣೆ ಹಾಗೂ ಅವಳು ಭಾರತೀಯ ಆಧುನಿಕತೆಯೊಂದಿಗೆ ಮುಖಾಮುಖಿಯಾಗಿ, ಸಂಪ್ರದಾಯಿಕತೆಯ ವಿರುದ್ಧ ಪ್ರತಿಭಟನೆಗಿಳಿದು, ತಳೆದ ನಿಲುವುಗಳನ್ನು ಈ ಅಧ್ಯಾಯದಲ್ಲಿ ಮೂಡಿಬಂದ ಕವಿತೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಇವುಗಳನ್ನು ವಿವರಿಸುತ್ತ ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಂಡಿದ್ದೇನೆ. ಅಧ್ಯಾಯದ ಕೊನೆಯಲ್ಲಿ ಅಧ್ಯಯನದ ವ್ಯಾಪ್ತಿಗೆ ಅನುಸಾರವಾಗಿ ಆಯ್ಕೆ ಮಾಡಿದ ಬಂಡಾಯ ಕವಿತೆಗಳಲ್ಲಿ ಬಂಡಾಯ ಸಾಹಿತ್ಯದ ಆಶಯ–ಧೋರಣೆಗಳು ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಂಡಿವೆ ಎಂಬುದನ್ನು ಸೂಕ್ಷ್ಮವಾಗಿ ಗುರುತಿಸಿದ್ದೇನೆ.

ಆರನೇ ಅಧ್ಯಾಯವು ಪ್ರಸ್ತುತ ಸಂಶೋಧನ ಪ್ರಬಂಧದ **ಸಮಾರೋಪ**ವಾಗಿದೆ. ಇದರಲ್ಲಿ ಇಡೀ ಅಧ್ಯಯನದ ಸಂಕ್ಷಿಪ್ತ ಸ್ವರೂಪವನ್ನು ವಿವರಿಸುತ್ತ, ಅಧ್ಯಯನದ ಫಲಿತಗಳನ್ನು ನೀಡಿದ್ದೇನೆ. ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಕಂಡುಕೊಂಡು ದಲಿತ–ಬಂಡಾಯ ಕಾವ್ಯ ಹಾಗೂ ಮಹಿಳೆಯ ಕುರಿತು ಸಂಪೂರ್ಣ ಅಭಿವ್ಯಕ್ತಿಯ ಮಾದರಿಗಳನ್ನು ವಿವರಿಸಿದ್ದೇನೆ. ದಲಿತ ಮತ್ತು ಬಂಡಾಯ ಕವಿತೆಗಳು ಮಹಿಳಾ ಅಸ್ತಿತ್ವದ ನೆಲೆಗಳನ್ನು ಚಿತ್ರಿಸುವಲ್ಲಿ ಹೇಗೆ ವೈರುಧ್ಯತೆ ಮತ್ತು ಸಾಮ್ಯತೆಯನ್ನು ಪಡೆದುಕೊಂಡಿದೆ ಎಂಬುದನ್ನು ವಿಶ್ಲೇಷಿಸಿದ್ದೇನೆ. ಅಲ್ಲದೆ ದಲಿತ–ಬಂಡಾಯ

ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳ ಇದುವರೆಗಿನ ಅಧ್ಯಯನ ಸಮೀಕ್ಷೆಯನ್ನು ಕೈಗೊಳ್ಳುವುದರ ಮೂಲಕ ಕನ್ನಡ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ ಮಹಿಳಾ ಅಸ್ತಿತ್ವದ ತಾತ್ವಿಕ ನೆಲೆಗಳು–ಈ ಕುರಿತು ಉದಾಹರಣೆ ಸಹಿತವಾಗಿ ವಿವರಣೆ ನೀಡಿದ್ದೇನೆ. ಹೀಗೆ ಪ್ರಸ್ತುತ ಪ್ರಬಂಧದಲ್ಲಿ ಕನ್ನಡ ಸಾಹಿತ್ಯ ಅದರಲ್ಲೂ ವಿಶೇಷವಾಗಿ ದಲಿತ–ಬಂಡಾಯ ಕವಿತೆಗಳಲ್ಲಿ ಮಹಿಳೆಯ ಅಸ್ತಿತ್ವದ ವಿಭಿನ್ನ ಮಜಲುಗಳನ್ನು ಮತ್ತು ಅದರ ಸಾಧ್ಯಾ ಸಾಧ್ಯತೆಗಳನ್ನು ಕುರಿತು ಕೂಲಂಕುಷವಾಗಿ, ಪರಿಶೀಲಿಸಿ, ಆಕರ ಸಾಮಾಗ್ರಿ, ಸಂದರ್ಶನ ಇತ್ಯಾದಿ ವಿಧಾನಗಳ ಮೂಲಕ ಪ್ರಬಂಧವನ್ನು ರೂಪಿಸಿದ್ದೇನೆ.

ಅಧ್ಯಾಯ–೨

# ದಲಿತ–ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ - ೨

# ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು: ಇದುವರೆಗಿನ ಅಧ್ಯಯನಗಳ ಸಮೀಕ್ಷೆ

'ಕಲಾತ್ಮಕ ಅಭಿವ್ಯಕ್ತಿಯೇ ಸಾಹಿತ್ಯ'ವಾಗಿರುವಂತೆ ಬದುಕಿನ ಅನುಭವದ ಅಭಿವ್ಯಕ್ತಿಯು ಕೂಡಾ ಸಾಹಿತ್ಯವೇ ಆಗಿದೆ. ಬದುಕಿನ ವಿಭಿನ್ನ ಮಗ್ಗುಲುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಕಾರ್ಯವನ್ನು ಸಾಹಿತ್ಯವು ನಿರಂತರವಾಗಿ ಮಾಡುತ್ತಲೇ ಇರುತ್ತದೆ. ಹೀಗಾಗಿ ಸಾಹಿತ್ಯ ಬೇರೆ-ಬೇರೆ ರೂಪ-ಸ್ವರೂಪವನ್ನು ಪಡೆದು, ತನ್ನ ಆಶಯ-ಧ್ಯೇಯ-ಧೋರಣೆಗಳನ್ನು ಅಭಿವ್ಯಕ್ತಗೊಳಿಸಿದ್ದನ್ನು ಕಾಣುತ್ತೇವೆ. ಹಾಗೆ ನೋಡಿದರೆ, ಯಾವುದೇ ಒಂದು ಸಾಹಿತ್ಯ ಪಂಥವಾಗಲಿ, ಅದು ತನ್ನದೇ ಆದ ಸೈದ್ಧಾಂತಿಕ ಮತ್ತು ತಾತ್ವಿಕ ನೆಲೆಗಳನ್ನು ತನ್ನ ಉದರದಲ್ಲಿ ಗರ್ಭೀಕರಿಸಿಕೊಂಡೇ ಮೊಳಕೆಯೊಡೆಯುತ್ತದೆ, ಬೆಳೆಯುತ್ತದೆ. ಆ ಮೂಲಕ ತನ್ನ ತತ್ವ-ಸಿದ್ಧಾಂತಗಳನ್ನು ಭಾಷಿಕವಾಗಿ ಅಕ್ಷರಶಃ ಅಭಿವ್ಯಕ್ತ ಪಡಿಸಲು ಪ್ರಯತ್ನಿಸುತ್ತದೆ. ಅಲ್ಲದೆ ಸಮಕಾಲೀನ ಸಮಾಜದ, ಸಾಂದರ್ಭಿಕ ವೈರುಧ್ಯಗಳಿಗೆ ಪ್ರಜ್ಞಾ ಪೂರ್ವಕವಾಗಿ ಸ್ಪಂದಿಸಿ, ಪ್ರತಿಕ್ರಿಯಿಸುತ್ತದೆ. ಆ ಮೂಲಕ ತನ್ನ ಜೀವಂತಿಕೆಯನ್ನು ಮೆರೆಯುತ್ತದೆ. ಇಂತಹ ಸೈದ್ಧಾಂತಿಕ-ತಾತ್ವಿಕ ನೆಲೆಗಳೊಂದಿಗೆ ರೂಪು ತಳೆದ ಘಟ್ಟವೇ ದಲಿತ-ಬಂಡಾಯ ಸಾಹಿತ್ಯ. ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡ ಇದನ್ನು ನವ್ಯೋತ್ತರ ಸಾಹಿತ್ಯವೆಂತಲೂ ಕರೆಯಲಾಗುತ್ತದೆ. ಹೊಸಗನ್ನಡ ಸಾಹಿತ್ಯದ ನಾಲ್ಕನೆಯ ಆಯಾಮವಾದ ಇದು, ಅದುವರೆಗೆ ಕನ್ನಡ ಸಾಹಿತ್ಯಕ್ಕೆ ದಕ್ಕದ ಶೋಷಿತ ಸಮುದಾಯದ, ಅಧೋ-ಜಗತ್ತಿನ ಹೊಸಲೋಕವೊಂದನ್ನು ಮೊಟ್ಟ ಮೊದಲ ಬಾರಿಗೆ ಅನಾವರಣಗೊಳಿಸುವಂತಹ ಸಾರ್ಥಕ ಕಾರ್ಯವನ್ನು ಮಾಡಿದೆ. ಹೀಗಾಗಿ ದಲಿತ-ಬಂಡಾಯ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯದಲ್ಲಿ ತುಂಬಾ ಮಹತ್ವದ ಸ್ಥಾನವಿದೆ.

ದಲಿತ-ಬಂಡಾಯ ಈ ಎರಡೂ ಸಾಹಿತ್ಯ ಘಟ್ಟಗಳು ಪರಸ್ಪರ ಜತೆ-ಜತೆಯಾಗಿ, ಅವಳಿ-ಜವಳಿಯೆಂಬಂತೆ ಹುಟ್ಟಿ, ಬೆಳೆದು ಬಂದ ಸಾಹಿತ್ಯ ಪಂಥಗಳಾಗಿದ್ದು, ಮೇಲ್ನೋಟಕ್ಕೆ ಇವೆರಡರ ನಡುವೆ ಪರಸ್ಪರ ಪೂರಕವಾದ ಸಮನ್ವಯತೆಯ ಅಂಶಗಳು ಕಂಡು ಬರುತ್ತವೆ. ಆದರೆ ಅವೆರಡನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಒಡೆದು ಕಾಣುವಷ್ಟು ಭಿನ್ನತೆಗಳಿರುವುದನ್ನು ಕೂಡ ವಿದ್ವಾಂಸರು ಗುರುತಿಸಿದ್ದಾರೆ. "ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ" ಎಂಬ ಧ್ಯೇಯವಾಕ್ಯದಡಿ ಈ ಎರಡೂ ಸಾಹಿತ್ಯ ಪಂಥಗಳು

ಪರಸ್ಪರ ಕೂಡಿ, ಕ್ರಿಯಾಶೀಲವಾಗಿ ಕಾರ್ಯ ಪ್ರವೃತ್ತರಾದರು ಸಹ ಅನುಭವದ ನೆಲೆ ಹಾಗೂ ಅಭಿವ್ಯಕ್ತಿ ಕ್ರಮಗಳನ್ನು ಶೋಧಿಸಿದಾಗ ಅವೆರಡರ ನಡುವೆ ತುಂಬಾ ಭಿನ್ನತೆಗಳಿರುವುದು ತಿಳಿದು ಬರುತ್ತದೆ. ಹಾಗೆಂದು ಇಲ್ಲಿ ಇಡೀ ದಲಿತ-ಬಂಡಾಯ ಸಾಹಿತ್ಯದ ಪದಗಳ ರೂಪ ನಿಷ್ಪತ್ತಿ-ಅರ್ಥ-ಸ್ವರೂಪ-ಉಗಮ-ವಿಕಾಸದ ಕುರಿತಾಗಲಿ, ಪ್ರಭಾವ-ಪ್ರೇರಣೆ, ಸಾಮ್ಯ-ವೈಷಮ್ಯಗಳ ಕುರಿತಾಗಲಿ ವಿಸ್ತೃತವಾಗಿ ವಿವೇಚಿಸುವುದು, ವಿಶ್ಲೇಷಿಸುವುದು ಪ್ರಸ್ತುತ ಉದ್ದೇಶವಲ್ಲ. ಅದಕ್ಕೆ ಪೂರಕವಾಗಿ ದಲಿತ-ಬಂಡಾಯ ಸಾಹಿತ್ಯದ ಕುರಿತು ಕೆಲ ಪ್ರಸಿದ್ಧ ವಿದ್ವಾಂಸರು, ಚಿಂತಕರು ಮಂಡಿಸಿದ ಕೆಲವು ಮಹತ್ವದ ವಿಚಾರಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ವಿಶ್ಲೇಷಿಸುವ ಮೂಲಕ, ಬಹು ಮುಖ್ಯವಾಗಿ ದಲಿತ-ಬಂಡಾಯ ಸಾಹಿತ್ಯದ ಪ್ರಮುಖ ತೊರೆಯಾಗಿ ಕಾಣಿಸಿಕೊಂಡ, ಕಾವ್ಯದಲ್ಲಿನ ಮಹಿಳಾ ಅಸ್ತಿತ್ವದ ನೆಲೆಗಳ ಇದುವರೆಗಿನ ಅಧ್ಯಯನದ ಸಮೀಕ್ಷೆಯನ್ನು ಕೈಗೊಳ್ಳುವುದು ಪ್ರಸ್ತುತ ಅಧ್ಯಾಯದ ಪ್ರಮುಖ ಆಶಯ ಮತ್ತು ಭೂಮಿಕೆಯಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ದಲಿತ ಸಾಹಿತ್ಯ ತುಂಬಾ ವಿಶಿಷ್ಟವಾದ ಸ್ಥಾನ, ಪರಂಪರೆಯನ್ನು ಹೊಂದಿದೆ. ಶತಶತಮಾನದಿಂದ ಅಸ್ಪೃಶ್ಯತೆಯ ನೋವು, ಅವಮಾನ, ಶೋಷಣೆಯನ್ನು ಅನುಭವಿಸಿದ ದಲಿತ-ದಮನಿತ, ಕೆಳಸ್ತರದ ಜನಸಮುದಾಯ ಅಕ್ಷರಸ್ಥರಾಗಿ, ತಮ್ಮ ವೇದನೆಗಳನ್ನು ಸಂವೇದನೆಗಳಾಗಿ ಮಾರ್ಪಡಿಸಿ,ಅವುಗಳಿಗೆ ಸಾಹಿತ್ಯದ ರೂಪ ಕೊಟ್ಟಿದ್ದು,ಕನ್ನಡ ಸಾಹಿತ್ಯದಲ್ಲಿಯೇ ತುಂಬಾ ವಿನೂತನವಾದುದು. 'ನೊಂದವರ ನೋವು ನೋಯದವರೆತ್ತ ಬಲ್ಲರು' ಎಂಬಂತೆ ಅಸ್ಪೃಶ್ಯತೆಯ ನೋವು, ಅವಮಾನ, ಶೋಷಣೆ ಏನು ಎಂಬುದು ಅಸ್ಪೃಶ್ಯರಾದ ದಲಿತರು ಮಾತ್ರ ಬಲ್ಲರು. ಆ ನೋವಿನ ತಾವಿನಲ್ಲಿ ದಲಿತರು ಬರೆದ ಸಾಹಿತ್ಯ ದಲಿತ-ಸಾಹಿತ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಅನೇಕ ವಿದ್ವಾಂಸರು ಚಿಂತನೆಯನ್ನು ಮಾಡಿದ್ದಾರೆ. ಕನ್ನಡದ ಪ್ರಸಿದ್ಧ, ಪ್ರಗತಿಪರ ಚಿಂತಕ, ಬಂಡಾಯದ ಗಟ್ಟಿದನಿಯಾದ ಡಾ. ಬರಗೂರು ರಾಮಚಂದ್ರಪ್ಪನವರು ದಲಿತ ಸಾಹಿತ್ಯದ ಕುರಿತು ಹೀಗೆ ಅಭಿಪ್ರಾಯಪಟ್ಟಿದ್ದಾರೆ. "ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಯಾರು ದಮನಕ್ಕೆ ಒಳಗಾಗಿರುತ್ತಾರೋ ಅವರೆಲ್ಲರೂ ದಲಿತರು. ಅಸ್ಪೃಶ್ಯರ ಜತೆಗೆ ಅನ್ಯಜಾತಿಯ ಬಡವರು ಇದರಲ್ಲಿಯೇ ಸೇರುತ್ತಾರೆಂದು ಲೋಹಿಯಾವಾದಿಗಳು ಅಭಿಪ್ರಾಯ ಪಟ್ಟಿದ್ದಾರೆ. ಭಾರತದ ಶ್ರೇಣೀಕೃತ ಸಮಾಜದಲ್ಲಿ ಅತ್ಯಂತ ಕೆಳಗಿನವರೆಂದು ಕರೆಯಲ್ಪಡುವ ಅಸ್ಪೃಶ್ಯರೆ 'ದಲಿತರು' ಎಂಬ ವಾದವನ್ನು ಅಂಬೇಡ್ಕರ ವಾದಿಗಳು ಎತ್ತಿ ಹಿಡಿದರು. ಮುಂದೆ ದಲಿತ ಪದವೇ ರೂಢಿಗೆ ಬಂದಿತು. ಹುಟ್ಟಿನಿಂದ ದಲಿತರಾದ ಈ ಜನ ಬರೆದ ಸಾಹಿತ್ಯವನ್ನು ದಲಿತ ಸಾಹಿತ್ಯವೆಂದು

ಕರೆಯಲಾಯಿತು. ಮೊದಲಿನಿಂದಲೂ ಅಕ್ಷರ ಕಲಿಯುವಿಕೆಯಿಂದ ವಂಚಿತರಾದ ಈ ವರ್ಗದ ಸಾಹಿತ್ಯವನ್ನು ಪ್ರತ್ಯೇಕವಾಗಿ ಗುರುತಿಸುವ ಅವಶ್ಯಕತೆ ಇದೆ. ಹುಟ್ಟಿನಿಂದ ದಲಿತರಾಗಿದ್ದು, ಪ್ರಗತಿಗಾಮಿ ಆಶಯಗಳನ್ನು ಅಭಿವ್ಯಕ್ತಪಡಿಸಿದ ಸಾಹಿತಿ ಬಂಡಾಯ ಸಾಹಿತ್ಯದ ಪಟ್ಟಿಗೆ ಸೇರುವುದಿಲ್ಲ. ಮತ್ತೊಮ್ಮೆ ಸ್ಪಷ್ಟ ಪಡಿಸಬೇಕೆಂದರೆ, ಪ್ರಗತಿಪರ ದಲಿತ ಸಾಹಿತಿಗಳೆಲ್ಲ ಬಂಡಾಯ ಸಾಹಿತಿಗಳು, ಬಂಡಾಯ ಸಾಹಿತಿಗಳೆಲ್ಲ ದಲಿತ ಸಾಹಿತಿಗಳಲ್ಲ."[೧] ಎಂದಿದ್ದಾರೆ. ಇಲ್ಲಿ ಡಾ. ಬರಗೂರ ಅವರು ಯಾರು ದಲಿತರು? ಯಾವುದು ದಲಿತ ಸಾಹಿತ್ಯ? ಯಾರು ದಲಿತ ಸಾಹಿತಿಗಳು?–ಎಂಬುದನ್ನು ತುಂಬಾ ಸ್ಪಷ್ಟವಾಗಿ ವ್ಯಾಖ್ಯಾನಿಸಿ, ಅದುವರೆಗಿನ ಎಲ್ಲ ದ್ವಂದ್ವಗಳಿಗೆ ಉತ್ತರ ನೀಡಿದ್ದಾರೆ.

ಕನ್ನಡ ದಲಿತ ಕಾವ್ಯ ಕಾವ್ಯವೇ ಅಲ್ಲ, ಅದು 'ಅಕಾವ್ಯ' ಎಂದು ಕನ್ನಡ ವಿಮರ್ಶಾಲೋಕ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ ಸಂದರ್ಭದಲ್ಲಿ 'ದಲಿತ ಕಾವ್ಯ'ವನ್ನು ಸಮರ್ಥಿಸಿಕೊಂಡು, ತುಂಬಾ ಮೌಲಿಕವಾದ ವಿಚಾರಗಳನ್ನು ಮಂಡಿಸಿದವರು ಡಾ.ಜಿ.ಎಸ್. ಶಿವರುದ್ರಪ್ಪನವರು. ಅವರು ದಲಿತ ಸಾಹಿತ್ಯವನ್ನು ಕುರಿತು "ಶೋಷಿತ ಮತ್ತು ದಲಿತ ಪದಗಳ ನಡುವೆ ಗೆರೆ ಎಳೆದು, ಎಲ್ಲ ಜಾತಿಗಳಲ್ಲೂ ಶೋಷಿತರು ಇರುವರೆಂದು, ನಿಲುವು ತಾಳಬಹುದು. ಆದರೆ ದಲಿತರು ಶೋಷಿತರಷ್ಟೇ ಅಲ್ಲ, ಸಾಮಾಜಿಕ ಶೋಷಣೆಯ ಕಾರಣದಿಂದ ಪಶು ಸಮಾನ ಬದುಕನ್ನು ಸಾಗಿಸುತ್ತಿರುವವರು ದಲಿತರು. ಎಲ್ಲ ಬಡವರ ಸಾಹಿತ್ಯವು ದಲಿತ–ಸಾಹಿತ್ಯವಲ್ಲ, ಬಡವರಲ್ಲಿಯೇ ವಿಶಿಷ್ಟ ಶೋಷಣೆಗೆ ಒಳಗಾದ ಕೆಳಜಾತಿ ಇಲ್ಲವೆ ಕೆಳವರ್ಗಗಳ ಸಾಹಿತ್ಯ ದಲಿತ ಸಾಹಿತ್ಯ"[೨] ಎಂದು ವಿಶಾಲಾರ್ಥದಲ್ಲಿ ಸೂಕ್ಷ್ಮವಾಗಿ ವ್ಯಾಖ್ಯಾನಿಸಿದ್ದಾರೆ.

ದಲಿತ ಸಾಹಿತ್ಯ–ಸಂಸ್ಕೃತಿಯಲ್ಲಿ ತುಂಬಾ ಮಹತ್ವದ ಹೆಸರೆಂದರೆ ಡಾ: ಪುರುಷೋತ್ತಮ ಬಿಳಿಮಲೆಯವರದು. ದಲಿತ ಸಾಹಿತ್ಯವನ್ನು ಕುರಿತು ಅವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. "ಶತಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ, ಶೋಷಣೆಗೆ ಒಳಗಾದವರು, ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೇ ಊರ ಹೊರಗೆ ವಾಸಿಸಿ, ಕೀಳು ವೃತ್ತಿಗೆ ಅವಲಂಬಿತರಾಗಿ ಹೆಸರು ಹೇಳಲು ನಾಚಿಕೆ ಪಡುವ ಅಸ್ಪೃಶ್ಯ ಅಥವಾ ಬಹಿಷ್ಕೃತರೆನಿಸಿಕೊಂಡ ದಲಿತರು ಬರೆದ ಸಾಹಿತ್ಯ ದಲಿತ ಸಾಹಿತ್ಯ"[೩] ಎಂದು

---

೧ ಸಣ್ಣ ಕಥಾ ಸಾಹಿತ್ಯದ ಇತಿಹಾಸ – ಡಾ. ವಿ. ರಂಗಸ್ವಾಮಿ – ಪುಟ–೮

೨ ಹಕ್ಕಿ ನೋಟ – ಡಾ. ಸಿದ್ಧಲಿಂಗಯ್ಯ – ಪುಟ–೩೬

೩ ಬಂಡಾಯ ದಲಿತ ಸಾಹಿತ್ಯ – ಡಾ. ಪುರುಷೋತ್ತಮ ಬಿಳಿಮಲೆ – ಪುಟ–೧೫

ಅಭಿಪ್ರಾಯ ಪಟ್ಟಿದ್ದಾರೆ. ಇಲ್ಲಿ ಅಸ್ಪೃಶ್ಯರ ಒಟ್ಟು ಶೋಚನೀಯ ಬದುಕು, ಅತಂತ್ರತೆಯನ್ನು ಚಿತ್ರಿಸುವ ಮೂಲಕ, ಅಂತಹವರು ರಚಿಸಿದ ಸಾಹಿತ್ಯ ದಲಿತ ಸಾಹಿತ್ಯವೆಂದು ಮನೋಜ್ಞವಾಗಿ ನಿರೂಪಿಸಿದ್ದಾರೆ.

ದಲಿತ ಸಾಹಿತ್ಯವನ್ನು ಕುರಿತು ತುಂಬಾ ಆಳವಾದ ಅಧ್ಯಯನ, ಚಿಂತನೆಯ ಮೂಲಕ ದಲಿತ ಸಾಹಿತ್ಯ-ಸಂಸ್ಕೃತಿಯ ಕ್ಷಿತಿಜದ ವಿಸ್ತರಣೆಗೆ ಕಾರಣರಾದವರು, ಡಾ. ಅರವಿಂದ ಮಾಲಗತ್ತಿ. ಅವರು ದಲಿತ ಸಾಹಿತ್ಯ ಎಂದರೆ ಯಾವುದು ಎಂಬುದರ ಕುರಿತು ಮೂರು ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

<u>ಅವು ಹೀಗಿವೆ:</u>

"ಅ. ದಲಿತರ ಕುರಿತು ಯಾರು ಬರೆದರೂ ದಲಿತ ಸಾಹಿತ್ಯವಾಗುತ್ತದೆ.

ಆ. ದಲಿತರೇ ಬರೆದದ್ದು ದಲಿತೀಯ ಸಾಹಿತ್ಯವಾಗುತ್ತದೆ.

ಇ. ಪ್ರಗತಿಪರರು ಮತ್ತು ದಲಿತರು ದಲಿತರ ಕುರಿತು ಬರೆದದ್ದು ದಲಿತೇಯ ಸಾಹಿತ್ಯವಾಗುತ್ತದೆ."[೪]

ಇಲ್ಲಿ ಡಾ. ಅರವಿಂದ ಮಾಲಗತ್ತಿಯವರು ಯಾವ-ಯಾವುದನ್ನು ದಲಿತ-ಸಾಹಿತ್ಯವೆಂದು ಕರೆಯ ಬೇಕೆನ್ನುವುದರ ಔಚಿತ್ಯವನ್ನು ನಿರೂಪಿಸಿದ್ದಾರೆ.

ಹೀಗೆ ಈ ಎಲ್ಲ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ದಲಿತ ಸಾಹಿತ್ಯವೆಂದರೆ ಅಸ್ಪೃಶ್ಯರೆಂಬ ಒಂದೇ ಒಂದು ಕಾರಣದಿಂದ ನೋವು, ದೌರ್ಜನ್ಯ, ಶೋಷಣೆಯನ್ನು ಅನುಭವಿಸಿದ ಜನ ಸಮುದಾಯ ಪ್ರತಿಭಟನೋಪಾದಿಯಲ್ಲಿ ರಚಿಸಿದ ಸಾಹಿತ್ಯ ದಲಿತ ಸಾಹಿತ್ಯ ಎಂದು ಕರೆಯಬಹುದಾಗಿದೆ.

ದಲಿತ ಪ್ರಜ್ಞೆ ಮತ್ತು ದಲಿತ ಸಂವೇದನೆಗಳು ಅನುರಣಿಸಿದ್ದು, ಅಂಬೇಡ್ಕರರ ವಿಚಾರವಾದ, ಮಾರ್ಕ್ಸವಾದ ಮತ್ತು ಲೋಹಿಯಾವಾದಗಳ ಪ್ರಭಾವ-ಪ್ರೇರಣೆಗಳ ಕಾರಣದಿಂದ ಇದು ಮತ್ತಷ್ಟು ಪ್ರಖರಗೊಂಡಿದ್ದು, ಬಿ. ಬಸಲಿಂಗಪ್ಪನವರ ಬೂಸಾ ಪ್ರಕರಣದಿಂದ. ಇದು ಕರ್ನಾಟಕದಲ್ಲಿ ಒಂದು ಹೊಸ ಸಂಚಲನವನ್ನೇ ಉಂಟು ಮಾಡಿತು. ಹೀಗಾಗಿ ದಲಿತ ಯುವಕರು ಅದರ ತೀವ್ರ ಪ್ರಭಾವಕ್ಕೆ ಒಳಗಾದರು. ಅವರಲ್ಲಿ ಪ್ರಮುಖರೆಂದರೆ ಡಾ. ಸಿದ್ಧಲಿಂಗಯ್ಯ, ದೇವನೂರು ಮಹಾದೇವ , ಡಾ. ಮ.ನ. ಜವರಯ್ಯ . ಡಾ. ಪುರುಷೋತ್ತಮ

---

[೪] ದಲಿತ ಸಾಹಿತ್ಯ ಪ್ರವೇಶಿಕೆ – ಡಾ. ಅರವಿಂದ ಮಾಲಗತ್ತಿ – ಪುಟ-೧೧

ಬಿಳಿಮಲೆ, ಡಾ. ಅರವಿಂದ ಮಾಲಗತ್ತಿ, ಡಾ. ಎಲ್. ಹನುಮಂತಯ್ಯ ಮೊದಲಾದವರು. ಇವರು ಮೊಟ್ಟಮೊದಲ ಬಾರಿಗೆ ದಲಿತ ಚಳವಳಿಯೊಂದನ್ನು ಹುಟ್ಟು ಹಾಕುವ ಮೂಲಕ ಉತ್ಸಾಹದಿಂದ ಅದರಲ್ಲಿ ಧುಮುಕಿದರು. ಜತೆಗೆ ತಮ್ಮ ಪ್ರತಿಭಟನೆಯನ್ನು ಬರಹದ ಮೂಲಕ ಅದರಲ್ಲೂ ಮುಖ್ಯವಾಗಿ ಕಾವ್ಯದ ಮೂಲಕ ಅಭಿವ್ಯಕ್ತಪಡಿಸತೊಡಗಿದರು. ಅಲ್ಲದೆ ದಲಿತ ಪ್ರಜ್ಞೆ ಮತ್ತು ಅಂಬೇಡ್ಕರ ವಿಚಾರಗಳನ್ನು ದಲಿತ ಸಮುದಾಯದ ಜನತೆಗೆ ತಿಳಿಸಿಕೊಡುವ ಗುರುತರವಾದ ಜವಾಬ್ದಾರಿಯನ್ನು ತಮ್ಮ ಹೆಗಲಿಗೇರಿಸಿಕೊಂಡರು. ಇವರ ಜತೆ ಜತೆಗೆ ಇಡೀ ವ್ಯವಸ್ಥೆಯ ವಿರುದ್ಧ ಸಿಡಿದೆದ್ದು, ಆಕ್ರೋಶಭರಿತ ಪ್ರತಿಭಟನೆ ಮತ್ತು ಬರಹದಲ್ಲಿ ತೊಡಗಿದವರು ಡಾ. ರಾಮಯ್ಯ, ಎನ್. ವೆಂಕಟೇಶ, ಎನ್. ಶಿವಣ್ಣ, ವಿ. ನಾಗರಾಜ, ಇಂದೂಧರ ಹೊನ್ನಾಪುರ, ಎಸ್. ಗಣೇಶನ್, ಗೋವಿಂದಯ್ಯ, ಬಿ. ಶ್ರೀಧರ, ಬಿ.ಟಿ. ಲಲಿತಾನಾಯಕ, ಡಾ. ಚೆನ್ನಣ್ಣ ವಾಲೀಕಾರ, ಡಾ. ಬಸವರಾಜ ಸಬರದ, ಡಾ.ಮೂಡ್ನಾಕೂಡು ಚಿನ್ನಸ್ವಾಮಿ, ಡಾ.ಮಲ್ಲಿಕಾ ಘಂಟಿ, ಡಾ. ವಿಜಯಾ ದಬ್ಬೆ, ಎಚ್. ಎಲ್. ಪುಷ್ಪಾ, ಮಮತಾ ಜಿ ಸಾಗರ, ಡಾ. ವಿನಯಾ ಮೊದಲಾದವರು. ಹೀಗೆ ಏಕಕಾಲದಲ್ಲಿಯೇ ಬಹಳ ತೀವ್ರವಾಗಿ ಬರವಣಿಗೆ ಹಾಗೂ ಹೋರಾಟಗಳು ಜತೆ ಜತೆಯಾಗಿಯೇ ನಡೆದು, ಅದುವರೆಗೆ ಇದ್ದ ಭಾಷಿಕ-ಮಾನಸಿಕ ಮಡಿವಂತಿಕೆಯನ್ನು ಭಂಜಿಸುವಂತಹ ಕೆಲಸವನ್ನು ಪ್ರಜ್ಞಾಪೂರ್ವಕವಾಗಿ ಮಾಡಿದವು.

ದಲಿತ ಚಳವಳಿ ಮತ್ತು ದಲಿತ ಸಾಹಿತ್ಯವನ್ನು ಹೆಚ್ಚು ಪ್ರಸಾರ ಮತ್ತು ಯಶಸ್ವಿಗೊಳಿಸಿದ್ದು, ಬಹುಸಂಖ್ಯಾತ ದಲಿತರನ್ನು ದಲಿತ ಸಮುದಾಯವನ್ನು ಜಾಗೃತಗೊಳಿಸಿದ್ದು ಯಾವುದೆಂದು ವಿವೇಚಿಸಿದಾಗ ನಮ್ಮ ಅನುಭವಕ್ಕೆ ಥಟ್ಟನೆ ಬರುವುದೆಂದರೆ ದಲಿತ ಕಾವ್ಯ . ಸಾಮಾನ್ಯ ಜನ ಭಾಷೆಯನ್ನು ತಮ್ಮ ಕಾವ್ಯದ ಅಭಿವ್ಯಕ್ತಿಯ ಮಧ್ಯಮವನ್ನಾಗಿಸಿಕೊಂಡ ದಲಿತ ಕವಿಗಳು ದಲಿತಾನುಭವಗಳನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸುವ ಸಾರ್ಥಕ ಪ್ರಯತ್ನ ಮಾಡಿದರು.

ಆಧುನಿಕ ದಲಿತ ಕಾವ್ಯವು ಮೊದಲು ಆರಂಭವಾದದ್ದು, ಡಿ. ಗೋವಿಂದದಾಸ ಅವರಿಂದಾದರೂ; ಅದು ಚಳವಳಿಯ ಕಾವ್ಯವಾಗಿ ಮೊಟ್ಟಮೊದಲು ಪ್ರಕಟವಾದದ್ದು, ಡಾ. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' [೧೯೭೫] ಕವನ ಸಂಕಲನದ ಮೂಲಕ ಎಂಬ ಸಂಗತಿ ಗಮನಾರ್ಹವಾದುದು. ಅನಂತರ 'ಸಾವಿರಾರು ನದಿಗಳು'[೧೯೭೯], 'ಕಪ್ಪುಕಾಡಿನ ಹಾಡು' [೧೯೮೩], ಹೊಸಕವಿತೆಗಳು ಮೊದಲಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದು, ಆಮೂಲಕ ಕನ್ನಡ ಸಾಹಿತ್ಯದಲ್ಲಿ ಏನೂತನ ಕ್ರಾಂತಿಯನ್ನುಂಟು ಮಾಡಿದ ಕೀರ್ತಿ ಡಾ. ಸಿದ್ಧಲಿಂಗಯ್ಯನವರಿಗೆ ಸಲ್ಲುತ್ತದೆ.

"ಗುಡಿಸಲುಗಳು ಗುಡುಗುತಿವೆ ಬಂಗಲೆಗಳು ನಡುಗುತಿವೆ
ಎಲ್ಲೆಲ್ಲೂ ಮೊಳಗುತಿದೆ ನವಕ್ರಾಂತಿಯ ಗಾನ"[೨]

ಎಂದು ಶತ ಶತಮಾನಗಳಿಂದ ಶೋಷಣೆಯ ನೋವುಂಡ ದಲಿತರು ಕ್ರಾಂತಿಯ ಕಿಡಿಗಳಾಗಿ ಗುಡುಗುತ್ತಿರುವುದನ್ನು ಸೂಚಿಸುತ್ತ, ಶೋಷಿತ ದಲಿತ ಸಮುದಾಯದ ಯುವಕರನ್ನು ಗಾಢವಾಗಿ ಪ್ರಭಾವಿಸಿದರು. ಇದರಿಂದ ಅಸಂಖ್ಯಾತ ದಲಿತ ಯುವಕರು ಸಮಾಜದ ಮುಖ್ಯವಾಹಿನಿಗೆ ಬರುವ ಮೂಲಕ ತಮ್ಮ ನೋವು ರೋಷ–ಆವೇಷ ಇತ್ಯಾದಿಗಳನ್ನು ಕಾವ್ಯವಾಗಿಸುತ್ತ ಕವಿ–ಲೇಖಕರಾಗಿ ರೂಪುಗೊಂಡರು. ಹೋರಾಟದ ಹಾಡಿಗೆ ಸಾವಿರಾರು ದನಿಗಳಾದರು.

ಹೀಗೆ ಡಾ. ಸಿದ್ಧಲಿಂಗಯ್ಯನವರು ದಲಿತ ಲೋಕವನ್ನು ಪ್ರಪ್ರಥಮ ಬಾರಿಗೆ ಅನಾವರಣಗೊಳಿಸುತ್ತ, ದಲಿತ ಯುವಕರು ಕವಿ–ಲೇಖಕರಾಗಲು ಪ್ರೇರೇಪಿಸಿದ್ದಾರೆ. ಮಹಿಳಾಲೋಕದ ತವಕ–ತಲ್ಲಣಗಳನ್ನು ಪ್ರಪ್ರಥಮ ಬಾರಿಗೆ ತಮ್ಮ ಕಾವ್ಯದಲ್ಲಿ ಚಿತ್ರಿಸುತ್ತ, ಮಹಿಳೆಯರೂ ಜಾಗೃತಗೊಂಡು, ತಮ್ಮ ನೋವು–ನಲಿವು, ಕನಸು–ಕಲ್ಪನೆ, ಅಸಹಾಯಕತೆ, ಕಥೆ–ವ್ಯಥೆ ಇತ್ಯಾದಿಗಳನ್ನು ಕಾವ್ಯವಾಗಿಸುತ್ತ ಬೆಳೆಯಲು ಕಾರಣರಾದರು. ಹೀಗಾಗಿ ಡಾ. ಸಿದ್ಧಲಿಂಗಯ್ಯನವರನ್ನು ಒಂದು ಜನಾಂಗದ ಅರಿವನ್ನು ಜಾಗೃತಗೊಳಿಸಿದ ಕವಿ ಎಂದೇ ಭಾವಿಸಬೇಕಾಗುತ್ತದೆ.

ಡಾ. ಸಿದ್ಧಲಿಂಗಯ್ಯನವರ ಕಾವ್ಯದ ಮೂಲ ದ್ರವ್ಯ ದಲಿತರ ಒಡಲಾಳದ ನೋವಿನ ಚಿತ್ರಣ. ಇದರಲ್ಲಿ ಎರಡು ಮಾತಿಲ್ಲ. ಆದರೆ ಇವರ ಇಡೀ ಕಾವ್ಯವನ್ನು ವಿಭಿನ್ನ ದೃಷ್ಟಿಕೋನಗಳಿಂದ ಅವಲೋಕಿಸಿದಾಗ ಅಲ್ಲಿ ಮಹಿಳೆಯರ ಅಸ್ತಿತ್ವದ ಸೂಕ್ಷ್ಮ ಎಳೆಗಳಿರುವುದು ಕಂಡುಬರುತ್ತದೆ. ಇದಕ್ಕೆ ಅವರ 'ಅಡುಗೂಲಜ್ಜಿಯ ಕಥೆ', 'ಕನ್ನಡವ್ವನಿಗೆ', 'ನನ್ನವಳಿಗೆ', 'ಮಸಣದ ಚೆಲುವೆ', 'ಕಂಡೆ ನನ್ನವಳ ಒಂದು ದಿವಸ', 'ಸುಟ್ಟಾವು ಬೆಳ್ಳಿ ಕಿರಣ', 'ರಾಣಿಯ ಪ್ರೇಮ', 'ನಿನ್ನ ಕಣ್ಣಿನ ಮಾತು', 'ಅಜ್ಜಿಯ ಹಾಡು', ಗ್ರಾಮದೇವತೆ ಮೊದಲಾದ ಕವಿತೆಗಳು ಸಾಕ್ಷಿಯಾಗಿವೆ. ✓

ಮನುಷ್ಯ ಪ್ರೀತಿಯ ಆರಾಧಕ, ಅನ್ವೇಷಕರಾದ ಡಾ. ಸಿದ್ಧಲಿಂಗಯ್ಯನವರಿಗೆ ಹೆಣ್ಣಿನ ಬಗ್ಗೆ ವಿಶೇಷ ಪ್ರೀತಿ, ಗೌರವ. ಅವಳಲ್ಲಿ ಭಾರತಾಂಬೆ, ಕನ್ನಡಾಂಬೆ, ತಾಯಿ, ಅಕ್ಕ, ಸಖಿ, ಗೆಳತಿ, ತಂಗಿ,

---

[೨] 'ಕ್ರಾಂತಿ ಪದ' ನನ್ನ ಜನಗಳು ಮತ್ತು ಇತರ ಕವಿತೆಗಳು (ಸಮಗ್ರ) – ಡಾ. ಸಿದ್ಧಲಿಂಗಯ್ಯ–ಪುಟ–೭

ಹೆಂಡತಿ ಹೀಗೆ ಅನಂತ ಪ್ರೀತಿಯ ಸಾಕಾರ ಮೂರ್ತಿಯನ್ನು ಕಂಡವರು. ತಮ್ಮ ಕಾವ್ಯದಲ್ಲೂ ಅವಳನ್ನು ಹಾಗೆಯೇ ದರ್ಶಿಸಿ, ಅವಳ ಅಸ್ತಿತ್ವದ ನೆಲೆಗಳನ್ನು ಶೋಧಿಸಿದ್ದಾರೆ.

'ನನ್ನವಳಿಗೆ' ಎಂಬ ಕವಿತೆಯಲ್ಲಿ ತನ್ನವಳನ್ನು ಕ್ರಾಂತಿಕನ್ನೆ ಎಂದು ಸಂಬೋಧಿಸುತ್ತ ಅವಳನ್ನು ಬಣ್ಣಿಸುವ ರೀತಿ ಅನನ್ಯವಾಗಿದೆ. ತನ್ನವಳನ್ನು ಕ್ರಾಂತಿಕನ್ನೆ ಎಂದು, ಅವಳನ್ನು ತಾನು ವರಿಸುವುದಾಗಿ ಹೇಳುತ್ತ, ತಾನು ನಂಬಿರುವ ತತ್ವ- ಆದರ್ಶಗಳ ಗಟ್ಟಿ ನಿಲುವುಗಳನ್ನು ತನ್ನವಳಲ್ಲಿ ಕಾಣುವ ಭಾವ ಇಲ್ಲಿ ಕಾಣುತ್ತೇವೆ. ಹಾಗೆಯೇ 'ಮಸಣದ ಚೆಲುವೆ' ಎಂಬ ಕವಿತೆಯಲ್ಲಿ ಹೆಣ್ಣನ್ನು ಕಾಣುವ ಪರಿ ವಿಶಿಷ್ಟವಾಗಿದೆ.

ಮಸಣದ ಚೆಲುವೆಯನ್ನು ನೀನೆಯೆ ಸರಿ ನೀನೆಯೇ ಸಿರಿ, ತನ್ನ ಕಾವ್ಯದ ಕಣ್ಣೆಂದು ಬಣ್ಣಿಸುವುದರ ಮೂಲಕ ಅವಳ ಅನುಪಸ್ಥಿತಿಯಲ್ಲೂ ಅಸ್ತಿತ್ವವನ್ನು ಕಾಣುತ್ತಾರೆ. ಅಲ್ಲದೆ 'ಸುಟ್ಟಾವು ಬೆಳ್ಳಿಕಿರಣ' ಕವಿತೆಯಲ್ಲಿ ಗೆಳತಿಯ ಬಗ್ಗೆ ಕವಿಗೆ ಇರುವ ಅಮಿತ ಪ್ರೀತಿ, ಕಾಳಜಿ ತೋರಿರುವುದು ವ್ಯಕ್ತವಾಗುತ್ತದೆ. ಅವಳನ್ನು ತನ್ನ ಕಣ್ಣ ಗೊಂಬಿಯ ಹಾಗೆ ರಕ್ಷಿಸಬೇಕೆಂದು ಅವಳಿಗೆ ಯಾವ ಅಪಾಯಗಳು ಬರಬಾರದೆಂದು ಪ್ರೀತಿಯಿಂದ ಎಚ್ಚರಿಸುತ್ತಾರೆ.

'ರಾಣಿಯ ಪ್ರೇಮ'ದಲ್ಲಿ ರಾಣಿಯ ಪ್ರೇಮ ನಿವೇದನೆಯನ್ನು, 'ನಿನ್ನ ಕಣ್ಣಿನ ಮಾತು'ದಲ್ಲಿ ಪ್ರೀತಿಯ ಅನಂತ ಮುಖಗಳನ್ನು, 'ಅಜ್ಜಿಯ ಹಾಡು'ದಲ್ಲಿ, ಅಜ್ಜಿಯ ಜೀವಂತಿಕೆಯನ್ನು ಕಾಣುವ ಮೂಲಕ ಹೆಣ್ಣನ್ನು ಗೆಳತಿ, ಸಖಿ, ಕ್ರಾಂತಿಯ ಕನ್ಯೆ, ಅಜ್ಜಿ ಹೀಗೆ ಜೀವಭಾವ ಮಾನವತೆಯ ಪ್ರತಿನಿಧಿಯಾಗಿ ದರ್ಶಿಸುವ ಮೂಲಕ ಅವಳ ಅಸ್ತಿತ್ವವನ್ನು ನಿರೂಪಿಸಿರುವುದು ಇಲ್ಲಿಯ ಕವಿತೆಗಳಲ್ಲಿ ಕಂಡುಬರುತ್ತದೆ.

ಡಾ. ಸಿದ್ಧಲಿಂಗಯ್ಯನವರು ತಮ್ಮ ಕವಿತೆಗಳಲ್ಲಿ ಮಹಿಳೆಯರ ಬದುಕನ್ನು, ಅದರ ವಿಭಿನ್ನ ಮುಖಗಳನ್ನು ಚಿತ್ರಿಸಿದ್ದು ಕನ್ನಡ ಸಾಹಿತ್ಯದಲ್ಲಿ ವಿನೂತನ ಮತ್ತು ವಿಶಿಷ್ಟವಾಗಿದ್ದು. ಈ ಮೂಲಕವೇ ಮಹಿಳೆಯರು ಸಾರಸ್ವತಲೋಕ ಪ್ರವೇಶಿಸಲು ಕಾರಣವಾದಂತಾಯಿತು. ಹೀಗಾಗಿ ಮಹಿಳಾ ಕವಯತ್ರಿ-ಲೇಖಕಿಯರು ಸಿದ್ಧಲಿಂಗಯ್ಯನವರನ್ನು ಸ್ಮರಿಸುವುದು ಅಗತ್ಯವು ಅನಿವಾರ್ಯವು ಆಗಿದೆ.

ಡಾ. ಸಿದ್ಧಲಿಂಗಯ್ಯನವರ ಜತೆ ಜತೆಗೆ ಕೇಳಿಬರುವ ಮತ್ತೊಂದು ಮಹತ್ವದ ಹೆಸರೆಂದರೆ ಅದು ದೇವನೂರು ಮಹಾದೇವ ಅವರದು. ದಲಿತ ಸಂಘರ್ಷ ಸಮಿತಿಯ ಹುಟ್ಟು, ಬೆಳವಣಿಗೆಗೆ

ಕಾರಣವಾದವರಲ್ಲಿ ಒಬ್ಬರಾದ ಅವರು ಕನ್ನಡ ಸಾಹಿತ್ಯಕ್ಕೆ ಹೊಸದಿಕ್ಕು, ದೆಸೆಗಳನ್ನು ತೋರಿಸಿದ ಪ್ರಸಿದ್ಧ ದಲಿತ ಲೇಖಕ. ಅವರ ಕೃತಿಗಳು ಗಾತ್ರ ಮತ್ತು ಸಂಖ್ಯೆಯಲ್ಲಿ ಕಡಿಮೆ ಎಂದೆನಿಸಿದರೂ ಸತ್ವ, ಪ್ರಯೋಗಶೀಲತೆ ಹಾಗೂ ಬೀರುವ ಪರಿಣಾಮಗಳಿಂದ ತುಂಬಾ ಮಹತ್ವವಾದುವುಗಳು. ಅವರು ಇದುವರೆಗೂ 'ದ್ಯಾವನೂರು' [ಕಥಾಸಂಕಲನ] 'ಒಡಲಾಳ' [ಕಿರುಕಾದಂಬರಿ] 'ಕುಸುಮಬಾಲೆ' [ಕಾವ್ಯ]] ಇತ್ತೀಚಿಗೆ 'ಎದೆಗೆ ಬಿದ್ದ ಅಕ್ಷರ' ಲೇಖನ ಸಂಗ್ರಹ ಕೃತಿಗಳನ್ನು ಬರೆದು ಪ್ರಕಟಿಸಿದ್ದಾರೆ. ಒಡಲಾಳದ ಕಥನದ ಸಾಕವ್ವನ ಮೂಲಕ ದಲಿತ ಲೋಕವೊಂದರ ವಿಶಿಷ್ಟ ಅನುಭವಗಳನ್ನು ಚಿತ್ರಿಸಿದ ದೇವನೂರವರು 'ಕುಸುಮಬಾಲೆ' ಕೃತಿ ರಚನೆಯ ಮೂಲಕ ಇದುವರೆಗಿನ ಕಾವ್ಯರಚನೆಯ ಕ್ರಮವನ್ನು ಮುರಿದು, ಹೊಸ ವಿನ್ಯಾಸದಲ್ಲಿ ಭಾವ-ಭಾಷೆ ಬಂಧವನ್ನು ನಿರ್ಮಿಸಿದ್ದಾರೆ. ಇದು ಕನ್ನಡ ಕಾವ್ಯ ಲೋಕಕ್ಕೆ ಹೊಸತು. ಡಾ.ಎಲ್. ಬಸವರಾಜುರವರು ಈ ಕೃತಿಗೆ ಮುನ್ನುಡಿ ರೂಪದಲ್ಲಿ ಹೀಗೆ ಬರೆದಿದ್ದು, ಅದು ಕೃತಿಗೆ ಸುವರ್ಣದ ಚೌಕಟ್ಟಿನಂತಿದೆ. ಅದು ಹೀಗಿದೆ: "ಕನ್ನಡದಲ್ಲಿ ಎಂದೂ ಮೈದೋರದ ಮನೋಹರ ಭಾಷಾ ಸರಸ್ವತಿಯ ಅಪೂರ್ವ ಸೊಬಗು, ಕುಸುಮಬಾಲೆಯೊಂದು ಲಯಬದ್ಧವಾದ ಪದ್ಯ-ಗಂಧಿ-ಕಾವ್ಯ"[೬] ಎಂದಿದ್ದಾರೆ. ಕನ್ನಡದಲ್ಲಿ ಇದುವರೆಗೆ ದಕ್ಕದ ಭಾಷೆಯೊಂದನ್ನು ದೇವನೂರು ಮಹಾದೇವರವರು ಸಿದ್ಧಿಸಿಕೊಂಡು, ಅದನ್ನು ಸಶಕ್ತವಾಗಿ ಬಳಸಿಕೊಂಡು, ತಾವು ಹೇಳಬೇಕಾಗಿದ್ದ ಕಥೆಯನ್ನು ಲಯಬದ್ಧವಾಗಿ ಹೇಳಿದ್ದಾರೆ. 'ಹಿಡಿದರೆ ಹಿಡಿತುಂಬ, ಬಿಟ್ಟರೆ ಜಗತುಂಬ'ದಂತಿರುವ 'ಕುಸುಮ ಬಾಲೆ'ಯನ್ನು ಕುರಿತು ವಿವೇಚಿಸಿದ ವಿದ್ವಾಂಸರಲ್ಲಿ ಕೆಲವರು ಅದನ್ನು ನೀಳ್ಗತೆ, ಯೆಂದೋ ಇನ್ನೂ ಕೆಲವರು 'ಕಿರುಕಾದಂಬರಿ' ಯೆಂದೋ, ಇನ್ನೂ ಕೆಲ ವಿದ್ವಾಂಸರು ಒಂದು ಹೆಜ್ಜೆ ಮುಂದೆ ಹೋಗಿ ಅದನ್ನು 'ನೀಳ್ಗತೆ; ಎಂದಾಗಲಿ, ಕಿರುಕಾದಂಬರಿ ಎಂದಾಗಲಿ ಕರೆಯದೇ ಅದೊಂದು ವಿಶಿಷ್ಟ ಮಾದರಿಯ ಕಾವ್ಯ ಎಂದು ವ್ಯಾಖ್ಯಾನಿಸಿದ್ದಾರೆ. ಅದರಲ್ಲಿ ಎಲ್. ಬಸವರಾಜು ಅವರು ಹೊಸ ಆಲೋಚನೆ, ದೃಷ್ಟಿಕೋನದಿಂದ ಅದನ್ನು ಪದ್ಯ-ಗಂಧಿ ಕಾವ್ಯ ಎಂದು ಗುರುತಿಸಿದ್ದು, ಔಚಿತ್ಯಪೂರ್ಣವಾಗಿದೆ. ಮುಂದುವರೆದು ಡಾ.ಎಲ್. ಬಸವರಾಜರವರು ಈ ಕುರಿತು "ಅದೊಂದು ಕತೆಯೋ, ನಿಳ್ಗತೆಯೋ, ಕಡೆಗೆ ಕಾದಂಬರಿಯೂ ಆಗಿದೆ, ಮತ್ತು ಪಾತ್ರಗಳು ವಾಚಾಳಿಯಾಗಿರದೇ ಸ್ವಗತಲಹರಿಯಲ್ಲಿ ವಿರಮಿಸಿ, ಆಂತರಂಗಿಕ ಐಕ್ಯ ಸ್ಥಿತಿಯನ್ನೇ ಬಿಂಬಿಸುವುದರಿಂದ ಅದು ಒಂದೂ ನಾಟಕವೂ ಆಗದೆ-ಆಡುವ ಉಸುರಿನಂತೆ ಸಹಜ ಸರಾಗ ಸುಲಭವೇ ಆದ ಆಡುಭಾಷೆಯ ಉತ್ತಮ ಕವಿತೆಗಳು ಮೆರವಣಿಗೆ ಹೊರಟ ಒಂದೂ ಕಾವ್ಯವೋ

---

[೬] ಲಯಯಾಕಾರ ವಿನ್ಯಾಸಕರ ನುಡಿ, ಕುಸುಮಬಾಲೆ – ದೇವನೂರ ಮಹಾದೇವ- ಪುಟ-೧೫

ಮಹಾ ಕಾವ್ಯವೋ ಆಗುತ್ತದೆ"[೭] ಎಂದು ವಿಶ್ಲೇಷಿಸಿದ್ದಾರೆ. ಹೀಗಾಗಿ ಕುಸುಮಬಾಲೆ ಕಾವ್ಯಾಂಶಗಳಿಂದ ಗಮನ ಸೆಳೆಯುತ್ತದೆ. ಈ ಕೃತಿಯಲ್ಲಿ ಬರುವ ಅಕ್ಕಮಹಾದೇವಮ್ಮ ಕುಸುಮಬಾಲೆ , ತುರಮ್ಮ, ಈರಿ, ಸಿಂಗಾರಮ್ಮ, ಜೋತೆಮ್ಮಂದಿರು ಮೊದಲಾದ ಪಾತ್ರಗಳು ಪರಸ್ಪರ ಮಾತನಾಡಿ ಕೊಳ್ಳುವಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳನ್ನು ಗುರುತಿಸಬಹುದು. ಇಲ್ಲಿಯ ಪಾತ್ರಗಳು ಗೊತ್ತಿದ್ದೋ, ಇಲ್ಲದೆಯೋ ಮಾಡುವ ತಪ್ಪುಗಳಿಗೆ ಅದು ಅಪರಾಧ, ಅದು ಅಪವಾದ ಎಂಬ ಅವಸರದ ನಿರ್ಧಾರವನ್ನು ತೆಗೆದುಕೊಳ್ಳದೆ, ಆ ಪಾತ್ರಗಳಲ್ಲಿ ಉದಾತ್ತತೆಯನ್ನು ಕಾಣುವ ಕಥನಕಾರರ ಧೋರಣೆ ಗಮನಾರ್ಹ. ಈ ಕುರಿತು ಡಾ.ಎಲ್. ಬಸವರಾಜರವರು "ಕುಸುಮಬಾಲೆಯಲ್ಲಿ ದೇವನೂರು ಮಹಾದೇವರು ಅನಿರ್ಬಂಧಿತ ಪ್ರೇಮ ಸಂಬಂಧವೆಂಬ ದಾಳಿಯ ಮೂಲಕ ಜಾತಿ ವ್ಯವಸ್ಥೆಯನ್ನು ಗೇಲಿ ಮಾಡುತ್ತ, ಮಾನ್ಯತೆ ಇರುವುದು ಬದುಕುವ ಬದುಕಿನಿಂದಾಗಿಯೇ ಹೊರತು, ಹುಟ್ಟಿದ ಜಾತಿಯಿಂದಲ್ಲವೆನ್ನುತ್ತಾ ಜಾತಿಯತೆಯನ್ನು ಆನುಭಾವಿಕವಾಗಿ ಗೇಲಿ ಮಾಡುತ್ತ ಅಕ್ಕಮಹಾದೇವಮ್ಮನನ್ನಾಗಲಿ ಕುಸುಮಬಾಲೆಯನ್ನಾಗಲಿ ವ್ಯಭಿಚಾರಿಗಳೆಂದು ಪರಿಗಣಿಸದೇ ಅವರನ್ನು ಕಾವ್ಯದ ನಾಯಕಿಯರನ್ನಾಗಿ ಮಾಡಿ"[೮] ರುವುದನ್ನು ಕಾಣುತ್ತೇವೆ. ಕೃತಿಯ ಆರಂಭದಲ್ಲಿಯೇ ಬರುವ ಅಕ್ಕ ಮಹಾದೇವಮ್ಮನು ಗಂಡನ ತಿಥಿಯಾದ ಮಾರನೆಯ ದಿನವೇ ತವರಿಗೆ ಹೋದವಳು. ಆರು ವರ್ಷ ಕಳೆದ ಬಳಿಕ ಜೀತಗಾರನಿಗೆ ಹುಟ್ಟಿದವನೆಂಬ ಅಪರಾಧ ಹೊತ್ತು ತನ್ನ ಕುಡಿಯಾದ ಯಾಡನೊಡನೆ ಗಂಡನ ಮನೆಗೆ ಬಂದು ಅಲ್ಲಿ ಅಸ್ತಿತ್ವ ಕಂಡುಕೊಳ್ಳುವ ಹಿನ್ನೆಲೆಯಲ್ಲಿ ಅವಳು ಮಾಡುವ ಸರ್ವ ರೀತಿಯ ಪ್ರಯತ್ನ ವಿಶಿಷ್ಟವಾಗಿದ್ದು, ಅದನ್ನು ದೇವನೂರವರ ಕವಿತೆಯ ಮಾತಿನಲ್ಲಿ ಹೇಳುವುದಾದರೆ ಅದು ಹೀಗಿದೆ:

"ಅಪ್ಪ ಅವ್ವ ಇರಾಗಂಟಾ ನೋಡ್ಕಂಡಂಥಾ ಬಳಗ ಅಂಬೋದು
ಅಪ್ಪ ಅವ್ವ ಸತ್ತ ಮ್ಯಾಲ ಬೀದಿಗ ತಳ್ವುದಾ"[೯]

ಎಂದು ಮುಂದುವರೆದು, "ಅಯ್ಯೋ ಇನ್ ನಾನೆಲ್ಲಿಗವಾಗ್ಲಿ ಭಾವಯ್ನೋರೇ ಇನ್ನು ನಿಂ ಪಾದ ತೊಳ್ದ ನೀರ್ನ ಕುಡ್ಕಂಡು ನನ್ನ ಗಂಡ್ನ ಯಸ್ರ ಹೇಳ್ಕಂಡೂ"[೧೦] ಎನ್ನುವಲ್ಲಿ ಅಕ್ಕಮಹಾದೇವಮ್ಮ ಬದುಕಿನ ನೆಲೆ ಕಂಡುಕೊಳ್ಳಲು ಭಾವಯ್ಯ ಬಸಪ್ಪನೋರುವವರಲ್ಲಿ ಪರಿ ಪರಿಯಾಗಿ ಬೇಡಿಕೊಳ್ಳುವ ಭಾವ ವ್ಯಕ್ತವಾಗಿದೆ.

---

೭ ಲಯಯಾಕಾರ ವಿನ್ಯಾಸಕರ ನುಡಿ, ಕುಸುಮಬಾಲೆ- ದೇವನೂರ ಮಹಾದೇವ - ಪುಟ-೧೭

೮ ಲಯಯಾಕಾರ ವಿನ್ಯಾಸಕರ ನುಡಿ, ಕುಸುಮಬಾಲೆ – ದೇವನೂರ ಮಹಾದೇವ ಪುಟ-೧೬

೯ ಕುಸುಮಬಾಲೆ-ದೇವನೂರ ಮಹಾದೇವ – ಪುಟ -೨೦

೧೦ ಕುಸುಮಬಾಲೆ – ದೇವನೂರ ಮಹಾದೇವ – ಪುಟ -೨೦

ಕುಸುಮಬಾಲೆ ಕೃತಿಯ ಪ್ರಧಾನ ಪಾತ್ರ ಕುಸುಮಬಾಲೆಯೇ ಆಗಿದ್ದು, ಹೊಲಾರ ಚೆನ್ನನೊಂದಿಗಿನ ಅನೈತಿಕ ಸಂಬಂಧದಿಂದಾಗಿ ಹುಟ್ಟಿದ ಮಗು ಕೆಂಪಾಗಿರೊ ಗಂಡ ಹೆಂಡತಿಯ ಹಾಗಿಲ್ಲ. ಅದು ಹೊಲಾರ ಚೆನ್ನನಂತಿದೆ ಎಂಬ ಸುದ್ದಿ ದೊಡ್ಡದಾಗಿ, ಅದ ತಿಳಿದ ಕುಸುಮಬಾಲೆ ತುಂಬಾ ನಲುಗಿ, ಸೋತು ಹೋದ ಅವಳ ಅವಸ್ಥೆಯನ್ನು ದೇವನೂರು ಮಹಾದೇವ ಅವರು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ.

“ಅಯ್ಯೋ ಆ ನಂ ಕುಸುಮ್ನಂತು
ಈ ಏಡ್ ನೇತ್ರಗಳಿಂದ ನೋಡಕ್ಕಾಗಲ್ಲ ಕನವ್ವ
ಆ ಎಳೆ ನಗೂನುವಿ
ಈ ಎಳೆ ಚೆಲೂವ್ನುವಿ ಸೇರ್ಸಿ
ಬಟ್ಟಿ ಇಳ್ಸಿ ಮಾಡ್ದಂಗಿದ್ದವಳೂ...
ಶಿವ ಶಿವಾ
ಅವಳು ನಕ್ಕರೋ
ಅವಳ ಹಲ್ಲಿನ ಮ್ಯಾಗಲ ಆ ಒಂಚುಟ್ಟಿ ಸಿಂಗಲ್ಲಿನಲ್ಲೆ
ಈ ಲೋಕದ ಚಲೂನೆಲ್ಲ ಆ ಭಗವಂತ್ನು ಇಟ್ಟೂ
ಆ ರತಿ ಅಂಬವಳ್ಗಿಯಾ
------------
------------
ಆ ನನ್ನ ಕಂದನೊಳ್ಗ
ಬಸ್ಕಂಡ್ರ ಒಂದು ಚಟಾಕು ರಕ್ತ
ಇದ್ದುದ್ದೂ ಇಲ್ವೋ...... ಅನ್ನಂಗವ್ಳೆ.... ”[೧೧]

ಎನ್ನುವಲ್ಲಿ ಕುಸುಮಬಾಲೆಯ ಚೆಲುವು–ಲವಲವಿಕೆಯನ್ನು ಬಣ್ಣಿಸುವ ಮೂಲಕ ಇಂದು ಅವಳಿಗೆ ಬಂದ ಅವಸ್ಥೆಯನ್ನು ಚಿತ್ರಿಸಿದ್ದಾರೆ. ಹೀಗೆ ದೇವನೂರು ಮಹಾದೇವ ಅವರು ಕುಸುಮಬಾಲೆಯಲ್ಲಿ ಸ್ತ್ರೀ ಪಾತ್ರಗಳು ಸಹಜ ಎಂಬಂತೆ ಸೃಷ್ಟಿಸಿಕೊಂಡು ಪರಸ್ಪರ ಮಾತನಾಡುವ ಮೂಲಕ ಅವುಗಳ ಜೀವಂತಿಕೆಗೆ ಸೂಕ್ತ ವಾತವರಣವನ್ನು ರೂಪಿಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಡಾ.ಅರವಿಂದ ಮಾಲಗತ್ತಿಯವರದು ಅಚ್ಚಳಿಯದ ಹೆಸರು. ದಲಿತ ಸಾಹಿತ್ಯವನ್ನು ಕುರಿತು ಆಳವಾದ ಅಧ್ಯಯನ ಚಿಂತನೆಯ ಮೂಲಕ ದಲಿತ ಸಾಹಿತ್ಯ ಸಂಸ್ಕೃತಿಯ ಕ್ಷಿತಿಜವನ್ನು ಮತ್ತಷ್ಟು ವಿಸ್ತರಿಸಿದ ಕೀರ್ತಿ ಡಾ. ಅರವಿಂದ ಮಾಲಗತ್ತಿಯವರಿಗೆ ಸಲ್ಲುತ್ತದೆ. ಇದುವರೆಗೆ ಅವರು ಸುಮಾರು ನಲವತ್ತೈದು ಕೃತಿಗಳನ್ನು ರಚಿಸಿದ್ದು, ‘ಮೂಕನಿಗೆ ಬಾಯಿ ಬಂದಾಗ’[೧೯೮೨], ‘ಕಪ್ಪು ಕಾವ್ಯ’ [೧೯೮೫], ‘ಮೂರನೆಯ

[೧೧] ಕುಸುಮಬಾಲೆ – ದೇವನೂರ ಮಹಾದೇವ – ಪುಟ– ೬ & ೭

ಕಣ್ಣು' [೧೯೯೬], 'ನಾದ ನಿನಾದ'[೧೯೯೯], 'ಶ್ರೀ ಚಾಂಡಾಲ ಸ್ವರ್ಗಾರೋಹಣ' ಅವರ ಪ್ರಮುಖ ಕವನ ಸಂಕಲನಗಳಾಗಿವೆ. ಮಾನವೀಯವಾದ ಮನುಷ್ಯ ಪರ ವಿಚಾರಗಳನ್ನು ತಮ್ಮ ಕಾವ್ಯ ಕೃತಿಗಳ ಮೂಲಕ ಚಿತ್ರಿಸಿದ ಡಾ. ಅರವಿಂದ ಮಾಲಗತ್ತಿಯವರು ದಲಿತರ ಶತಮಾನದ ನೋವನ್ನು ವಿಷಾದ– ಆಕ್ರೋಶಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಇದಕ್ಕೆ ಅವರ 'ಕುತ್ತು' ಕವಿತೆ ಸಾಕ್ಷಿಯಾಗಿದೆ.

ತಾನು ತನ್ನ ಜನಾಂಗ ಹೊಲೆಯ ಮಾದಿಗರಾಗಿ ಹುಟ್ಟಿ, ಪಡಬಾರದ ಕಷ್ಟ,ಅವಮಾನ, ಶೋಷಣೆಯನ್ನು ಸ್ವತಃ ಅನುಭವಿಸಿ, ಕಂಡು ವಿಷಾದದಿಂದ ಹೇಳಿದ್ದಾರೆ. ಹಾಗೆಯೇ ಡಾ. ಅರವಿಂದ ಮಾಲಗತ್ತಿಯವರು ಮಹಿಳೆಯರ ಅಧೋ ಜಗತ್ತನ್ನು ಒಳಹೊಕ್ಕು, ಅವರ ನೋವು, ಅಸಹಾಯಕತೆ, ಶೋಷಣೆ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಹೆಣ್ಣನ್ನು ವಿಭಿನ್ನ ದೃಷ್ಟಿಕೋನದಿಂದ ಕಂಡಿದ್ದಾರೆ. ಹೀಗಾಗಿ ಡಾ. ಅರವಿಂದ ಮಾಲಗತ್ತಿಯವರ ಕಾವ್ಯದಲ್ಲಿ 'ಸ್ತ್ರೀಯು ಒಂದು ವಿಶಿಷ್ಟ ಶಕ್ತಿ, ಮಾನವೀಯ ಗುಣಗಳ ಮೊತ್ತವಾಗಿ ಕಂಡು ಬರುತ್ತಾಳೆ. ಇದಕ್ಕೆ 'ನರ್ತಿಸಲೆ ಶಾರದೆ ನರ್ತಿಸಲೆ', 'ಭಾರತಾಂಬೆಗೆ', 'ಇಳಾಗಾನ', 'ಅವ್ವ', 'ತಂಗಿ', 'ಕುಂಕುಮ' ಮೊದಲಾದ ಕವಿತೆಗಳು ಸಾಕ್ಷಿಯಾಗಿವೆ.

ಡಾ. ಅರವಿಂದ ಮಾಲಗತ್ತಿಯವರು ನವೋದಯ ಕವಿಗಳಂತೆ ಹೆಣ್ಣನ್ನು ದೇವಿ, ಶಕ್ತಿ, ಭೂಮಿ, ತಾಯಿ, ಪ್ರಕೃತಿ, ರಾಷ್ಟ್ರ, ಭಾಷೆಯೊಡನೆ ಸಮೀಕರಿಸಿ ಹೊಗಳದೆ, ಆಕೆಯನ್ನು ಮೂದಲಿಸುತ್ತಾರೆ. ತಮ್ಮ ಜನಾಂಗದ ಶೋಷಣೆ ದಬ್ಬಾಳಿಕೆಯನ್ನು ಅವಳಲ್ಲಿ ನಿವೇದಿಸಿಕೊಂಡು, ನಿನಗೇಕೆ ಈ ಇಬ್ಬಗೆಯ ನೀತಿಯೆಂದು ಪ್ರಶ್ನಿಸುತ್ತಾರೆ. ಸರಸ್ವತಿಯನ್ನು 'ಲೇ' ಎಂದು ಕರೆಯುತ್ತಲೇ, ಝೇಂಯಕರಿಸಿ ಹೊಡೆಯುವ ಕ್ರಾಂತಿಯ ಕಹಳೆಗೆ ಓಗೊಟ್ಟು ನರ್ತಿಸೆಂದು ಕರಾರು ವಕ್ಕಾಗಿ ಹೇಳುತ್ತಾರೆ.

ಭಾರತಾಂಬೆ ಕವಿತೆಯಲ್ಲಿ ಮನುಷ್ಯನ ಹಕ್ಕಿನ ಪ್ರಜ್ಞೆಯನ್ನು ಛಲದಿಂದ ಪಡೆದುಕೊಳ್ಳುವ ದಿಟ್ಟತನವನ್ನು ತೋರಿದ್ದಾರೆ. ಉಳ್ಳವರು ತಮ್ಮನ್ನು ತುಚ್ಛವಾಗಿ ಕಂಡುದನ್ನು ಹೀಗೆ ಚಿತ್ರಿಸಿದ್ದಾರೆ. ಮಹಿಳೆಯ ಅಸ್ತಿತ್ವದ ನೆಲೆಗಳನ್ನು ಗುರುತಿಸುವ ವಿಶಿಷ್ಟ ಕವಿತೆ ಎಂದರೆ 'ಕುಂಕುಮ'. ತಾಯಿ ತೀರಿದರೂ ಅವಳ ಅಸ್ತಿತ್ವ ಯಾವ ರೂಪದಲ್ಲಾದರೂ ಉಳಿದೇ ಉಳಿಯತ್ತದೆ ಎಂಬುದನ್ನು ಹೀಗೆ ಚಿತ್ರಿಸಿದ್ದಾರೆ.

"ಹೋಗುವಳೇ ಮಣ್ಣಲ್ಲಿ ಮಣ್ಣಾಗಿ
ನಿಲ್ಲುವಳೇ ಜಗದ ಮೇಲಿನ ದೇವರಾಗಿ
ಹುಟ್ಟುವಳೇ ಮಗನ ಹೊಟ್ಟೆಯಲ್ಲಿ ಮೊಮ್ಮಗಳಾಗಿ
ಬರುವಳೋ ಬರದೆ ಹೋಗುವಳೋ ಮಾಗಿ." [೧೨]

ಎಂದು ತಾಯಿಯ ಕನಸುಗಳು ಬೇರೆ ಬೇರೆ ರೂಪದಲ್ಲಿ ಮತ್ತೆ ಹೊಸ ಹುಟ್ಟು ಪಡೆಯುವುದರ ಮೂಲಕ ತಾಯಿಯನ್ನು ಜೀವಂತವಾಗಿ ಇಟ್ಟಿರುತ್ತಾರೆ. ಹೀಗೆ ಅರವಿಂದ ಮಾಲಗತ್ತಿಯವರ ಕವಿತೆಗಳಲ್ಲಿ ಮಹಿಳೆಯನ್ನು ಯಾವುದೋ ಒಂದು ಭ್ರಮಾ ಲೋಕದಲ್ಲಿ ಬಣ್ಣಿಸದೆ ಅವಳನ್ನು ವಸ್ತುನಿಷ್ಠ ನೆಲೆಯಲ್ಲಿ ಅವಳ ಗುಣ, ವಿಶೇಷ, ನೋವು, ನಲಿವುಗಳನ್ನು ಚಿತ್ರಿಸುವುದನ್ನು, ಕೆಲವೊಮ್ಮೆ ತನ್ನ ಒಡಲಾಳದ ನೋವನ್ನು ಅವಳಲ್ಲಿ ನಿವೇದಿಸಿಕೊಳ್ಳುವುದನ್ನು ಕಾಣುತ್ತೇವೆ.

ದಲಿತ ಕಾವ್ಯದಲ್ಲಿ ಎಲ್. ಹನುಮಂತಯ್ಯನವರ ಹೆಸರು ವಿಶಿಷ್ಟವಾದದ್ದು. 'ಕಪ್ಪು' ಎಂಬುವುದನ್ನೇ ಕಾವ್ಯ ಮಾಡಿಕೊಂಡು, ಇಡೀ ದಲಿತ ಲೋಕವನ್ನು ಅನಾವರಣಗೊಳಿಸಿದ ಹನುಮಂತಯ್ಯನವರು ಮುಖ್ಯವಾಗಿ ಅಂಬೇಡ್ಕರ ಹಾಗೂ ಲೋಹಿಯಾವಾದಿಯಾಗಿದ್ದಾರೆ. ಅವರು ಇದುವರೆಗೆ 'ಕಪ್ಪು ಕಣ್ಣಿನ ಹುಡುಗಿ', 'ಅವ್ವ' ಎಂಬ ಕವನ ಸಂಕಲನಗಳನ್ನು ಪ್ರಕಟಿಸಿದ್ದು, ಅವುಗಳಲ್ಲಿ ದಲಿತರ ಬದುಕನ್ನ ಚಿತ್ರಿಸುವ ಜತೆಗೆ ಮಹಿಳೆಯರ ಬದುಕನ್ನು ಬಿಂಬಿಸಿದನ್ನು ಕಾಣುತ್ತೇವೆ. ಕನ್ನಡದಲ್ಲಿ 'ಅವ್ವ'ನನ್ನು ಕುರಿತು ಅನೇಕ ಕವಿತೆಗಳು ಬಂದಿದ್ದು, ಅವುಗಳಲ್ಲಿ ಲಂಕೇಶರ 'ಅವ್ವ' ಕವಿತೆಯೇ ಪ್ರಾತಿನಿಧಿಕ ಎಂದೆನಿಸುತ್ತದೆ. ಅನಂತರದಲ್ಲೂ ಕವಿಗಳು ಅವ್ವನನ್ನು ಕುರಿತು ವಿಭಿನ್ನವಾಗಿ ಚಿತ್ರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಹನುಮಂತಯ್ಯನವರ 'ಅವ್ವ' ಕವಿತೆ ಗಮನಸೆಳೆಯುತ್ತದೆ.

ಇಲ್ಲಿ ಕಷ್ಟ-ಕಾರ್ಪಣ್ಯಗಳ ನಡುವೆಯೇ ಅವ್ವ ತನ್ನ ಅಸ್ತಿತ್ವಕ್ಕಾಗಿ ಹರಿದು ಹಂಬಲಿಸುವುದನ್ನು, ವಿಷಗಳಿಗೆಯನ್ನೇ ಅಮೃತಗಳಿಗೆಯನ್ನಾಗಿ ಪರಿವರ್ತಿಸಿದ ಗುಣವಂತೆ ಎನ್ನುವ ಹಾಗೆ ಚಿತ್ರಿಸಿದ್ದಾರೆ. ಅಲ್ಲದೆ ಮಹಿಳೆಯನ್ನು ಮಾನವೀಯ ನೆಲೆಯಲ್ಲಿ ಅನಾವರಣಗೊಳಿಸಿದ್ದನ್ನು ಕಾಣುತ್ತೇವೆ.

ದಲಿತ-ಬಂಡಾಯದ ಎರಡೂ ಪ್ರಜ್ಞೆಗಳನ್ನು ಅಕ್ಷರಶಃ ಮೈಗೂಡಿಸಿಕೊಂಡು ಬೆಳೆದ ಅಪರೂಪದ ಪ್ರತಿಭಾವಂತ ದಲಿತ ಕವಿ ಡಾ.ಸತ್ಯಾನಂದ ಪಾತ್ರೋಟ. 'ಜಾಜಿ ಮಲ್ಲಿಗೆಯ ಕವಿ'ಯೆಂದೇ ಪ್ರಸಿದ್ಧರಾದ ಅವರು ಮನುಷ್ಯ ಪ್ರೀತಿಯನ್ನು ತಮ್ಮ ಕಾವ್ಯದಲ್ಲಿ ಶೋಧಿಸುವ ಮೂಲಕ ಮಾನವೀಯತೆಯ ವಿಭಿನ್ನ ಮುಖಗಳನ್ನು ಚಿತ್ರಿಸುವುದನ್ನು ಕಾಣುತ್ತೇವೆ. ಇದುವರೆಗೆ

---

[೧೨] ಮೂಕನಿಗೆ ಬಾಯಿ ಬಂದಾಗ (ಕುಂಕುಮ ಕಾವ್ಯ) ಡಾ. ಅರವಿಂದ ಮಾಲಗತ್ತಿ – ಪುಟ-೬೫

ಅವರು 'ಕರಿ ನೆಲದ ಕಲೆಗಳು', 'ಜಾಜಿ ಮಲ್ಲಿಗೆ' , 'ಕಲ್ಲಿಗೂ ಗೊತ್ತಿರುವ ಕಥೆ', 'ಕರಿಯು ಕಟ್ಟಿದ ಕವನ', 'ನನ್ನ ಕನಸಿನ ಹುಡುಗಿ', 'ನದಿಗೊಂದು ಕನಸು ಮತ್ತು ಅವಳು', 'ಹಂಗಿನ ಅಂಗಳದಲ್ಲಿ' ಮೊದಲಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವ್ವ, ಅಕ್ಕ, ಸಖಿ, ಪ್ರೇಯಸಿ, ಗೆಳತಿ, ಹುಡುಗಿ ಹೀಗೆ ಎಲ್ಲರನ್ನು ತಮ್ಮ ಕಾವ್ಯದಲ್ಲಿ ಚಿತ್ರಿಸುವ ಮೂಲಕ ಅವರ ಸರಳ ನಡೆ-ನುಡಿ-ಗುಣ ವ್ಯಕ್ತಿತ್ವ-ಕನಸು-ಕಲ್ಪನೆ-ಅಸಹಾಯಕತೆ-ಜಾತಿಯ ವಿಷಮತೆ ಇತ್ಯಾದಿಗಳಿಗೆ ಧ್ವನಿಯಾಗಿಸಿದ್ದಾರೆ. ಇದಕ್ಕೆ ಅವರ 'ಅವ್ವ', 'ಅಕ್ಕ', 'ಕನಸಿನ ಪ್ರಸಂಗ', 'ಬರೀ ಚಲುವಿದ್ದರೆ ಮುಗಿಯಲಿಲ್ಲ', 'ಎದೆಯ ಮಾತು', 'ನೀನೆಂದು ಬರುವಿ', 'ನನ್ನ ಕನಸಿನ ಹುಡುಗಿ', 'ಮಾತನಾಡದ ಹುಡುಗಿ', 'ಮಾಂತ್ರಿಕತೆ-ಮೋಹಕತೆ', 'ಅವಳು ನಾನು ಇವಳು', 'ಬಡವನಾದರೆ ಏನು ಪ್ರೀಯೆ' ಹೀಗೆ ಮೊದಲಾದ ಕವಿತೆಗಳನ್ನು ಉದಾರಿಸಬಹುದು.

'ಅವ್ವ'ಕವಿತೆಯಲ್ಲಿ ಪಾತ್ರೋಟರು 'ನನ್ನವ್ವ ಕರ್ರಗಿನ ಕೀಲು ಬಂಡೆಗಲ್ಲು' ಎಂದು ಬಣ್ಣಿಸುವ ಮೂಲಕ ಅವಳ ವ್ಯಕ್ತಿತ್ವ- ಗುಣ - ವಿಶೇಷತೆಗಳನ್ನು ಚಿತ್ರಿಸಿದ್ದಾರೆ. 'ಕಲ್ಲಿಗೂ ಗೊತ್ತಿರುವ ಕಥೆ' ಕವಿತೆಯಲ್ಲಿ ದಲಿತರ ಶ್ರಮ ಸಂಸ್ಕೃತಿಯ ಚಿತ್ರಣವಿದೆ.

ಕವಿ ತಂದೆಯ ಕಷ್ಟ ಕಾರ್ಪಣ್ಯದ ಶ್ರಮ ಜೀವನವನ್ನು ಕಟ್ಟಿಕೊಡುವ ಮೂಲಕ ತನ್ನ ಜನಾಂಗದ ಶೋಷಣೆಯ ಸ್ಥಿತಿಯನ್ನ ಚಿತ್ರಿಸುತ್ತಾರೆ. ಹಾಗೆಯೇ 'ಅಕ್ಕ' ಕವಿತೆಯಲ್ಲಿ ಎಲ್ಲರ ಹಾಗೆ ಅಲ್ಲ ನನ್ನ ಅಕ್ಕ ಎಂದೂ ತನ್ನ ಅಕ್ಕನ ವ್ಯಕ್ತಿತ್ವವನ್ನು ಚಿತ್ರಿಸುತ್ತ ಅವಳ ಧಾರುಣ ಬದುಕು, ವಿಶ್ವ ವಿಶಾಲ ಮನೋಭಾವ, ಬದುಕಿನ ಬಗ್ಗೆ ಇರುವ ಅದಮ್ಯ ಚೈತನ್ಯ ಇತ್ಯಾದಿಗಳನ್ನು ಪರಿಚಯಿಸುತ್ತಾರೆ. ನವೋದಯ, ನವ್ಯ ಇತರ ದಲಿತ-ಬಂಡಾಯ ಕವಿಗಳಿಗಿಂತ ಸಮಾಜದ ವಿಷಮತೆ, ಜಾತಿ, ವರ್ಗ, ವರ್ಣ, ಅನ್ಯಾಯ, ಶೋಷಣೆಗಳಂತಹ ವೈರುಧ್ಯಗಳನ್ನು ಅಭಿವ್ಯಕ್ತಿಸುವುದಕ್ಕೆ ಪಾತ್ರೋಟರು ಪ್ರೇಯಸಿಗೋ, ಗೆಳತಿಗೋ, ಹುಡುಗಿಗೋ, ಹೇಳುವ ಹಾಗೆ ಒಂದು ವಿಶಿಷ್ಟ ತಂತ್ರವನ್ನು ಬಳಸಿಕೊಂಡು ಕವಿತೆಯನ್ನು ರಚಿಸಿದ್ದು, ವಿನೂತನವಾಗಿದೆ. ಅದರಲ್ಲಿ ಕವಿ ಯಶಸ್ಸನ್ನೂ ಕಂಡಿದ್ದಾರೆ. ಇದಕ್ಕೆ ಕೆಲವು ಕವಿತೆಗಳನ್ನು ಅವಲೋಕಿಸಬಹುದು.

'ಎದೆಯ ಮಾತು' ಕವಿತೆಯಲ್ಲಿ ಕವಿ ತನ್ನ ಎದೆಯ ನೋವಿನ ಮಾತುಗಳನ್ನು ಮುಕ್ತವಾಗಿ ಗೆಳತಿಯೊಂದಿಗೆ ಹಂಚಿಕೊಳ್ಳುವ ಮೂಲಕ ಮುಖಾಮುಖಿಯಾಗುತ್ತಾರೆ. 'ಮಾಂತ್ರಿಕತೆ-ಮೋಹಕತೆ' ಕವಿತೆಯಲ್ಲಿ ಕವಿ ತಾನು ಅವಳನ್ನು ಹುಡುಕುವ ಕಾರಣವನ್ನು ಸ್ಪಷ್ಟವಾಗಿ ಹೇಳುವ ಮೂಲಕ ಅವಳ ಅಸ್ತಿತ್ವವನ್ನು ಗುರುತಿಸುತ್ತಾರೆ. 'ಬರೀ ಚಲುವಿದ್ದರೆ

ಮುಗಿಯಲಿಲ್ಲ' ಕವಿತೆಯಲ್ಲಿ ಅವಳ ಪರಿಶುದ್ಧ ವ್ಯಕ್ತಿತ್ವವನ್ನು ವರ್ಣಿಸುತ್ತಾರೆ. ಹೀಗೆ ಕೆಲ ಕವಿತೆಯಲ್ಲಿ ಅವಳ ಗುಣ ವ್ಯಕ್ತಿತ್ವವನ್ನು ಮನಸಾರೆ ಮೆಚ್ಚಿಕೊಳ್ಳುವ ಕವಿ, ಮತ್ತೊಂದೆಡೆ ಅವಳಿಗೆ ಮಾರ್ಗದರ್ಶನ ನೀಡುವ ಮೂಲಕ ಎಚ್ಚರಿಕೆಯ ಮಾತುಗಳನ್ನೂ ಆಡುತ್ತಾರೆ. ಅವಳ ಗುಣ-ದೋಷಗಳನ್ನು ತಿದ್ದಲು ಪ್ರಯತ್ನಿಸುತ್ತಾರೆ. 'ನನ್ನ ಕನಸಿನ ಹುಡುಗಿ' ಪಾತ್ರೋಟರ ಪ್ರಸಿದ್ಧ ಕವಿತೆಗಳಲ್ಲಿ ಒಂದಾಗಿದ್ದು, ತುಂಬಾ ವಿಶಿಷ್ಟವಾಗಿದೆ.

ಇಲ್ಲಿ ಕವಿ ತನ್ನ 'ಕನಸಿನ ಹುಡುಗಿ'ಯನ್ನ ಬಣ್ಣಿಸುತ್ತ, ಜಾತಿ-ವರ್ಗ-ವರ್ಣದ ಹಾವಳಿಯಲ್ಲಿ ಅವಳನ್ನು ಕಳೆದುಕೊಂಡು, ವ್ಯಥೆಪಡುವುದನ್ನು ಇಲ್ಲಿ ಕಾಣುತ್ತೇವೆ. ಹೀಗೆ ಡಾ. ಸತ್ಯಾನಂದ ಪಾತ್ರೋಟರು ತಮ್ಮ ಕವಿತೆಗಳಲ್ಲಿ ಹೆಣ್ಣನ್ನು ಮಾನವೀಯ, ಮನುಷ್ಯ ಸಂಬಂಧಿ ನೆಲೆಯಲ್ಲಿ ಚಿತ್ರಿಸುವ ಮೂಲಕ ಅವಳ ಒಲವು-ನಿಲುವು, ಕನಸು-ಕಲ್ಪನೆ ಇತ್ಯಾದಿ ಗುಣ-ವಿಶೇಷತೆಗಳನ್ನು ಸಶಕ್ತವಾಗಿ ಚಿತ್ರಿಸಿದ್ದಾರೆ.

ಹಾಗೆಯೇ ಡಾ. ಮೂಡ್ನಾಕೂಡು ಚಿನ್ನಸ್ವಾಮಿಯವರು 'ಅಜ್ಜಿ ಮತ್ತು ಮೊಮ್ಮಗಳು', 'ಬೆತ್ತಲ ಸೇವೆ', 'ಈ ಪ್ರಮದೆಯರೆ ಹೀಗೆ', 'ಮಹಿಳೆಯರ ಕಾಲೇಜು' ಕವಿತೆಗಳಲ್ಲಿ, ಡಾ. ಟಿ.ಎಂ. ಭಾಸ್ಕರ್‌ರವರ 'ಮಾತನಾಡುವ ಎಲುಬುಗಳು', ಮುಳ್ಳೂರು ನಾಗರಾಜರ 'ನೆಲದ ಜೋಗುಳ' ಕವಿತೆ, ಕೆ.ಬಿ. ಸಿದ್ಧಯ್ಯನವರ 'ಅಸಾತ್ಮ', ಮ.ನ.ಜರ 'ವಿದ್ರೋಹ', ಗಂಗಾರಾಂ ಚಾಂಡಾಳರ 'ಜೀವನೆಲೆ' ಡಾ. ಅರ್ಜುನ ಗೊಳಸಂಗಿಯವರ 'ನಮ್ಮವ್ವ ಅಜ್ಜಿ ನನ್ನಾಕೆ'.ಡಾ. ಸದಾಶಿವ ದೊಡಮನಿಯವರ 'ಸಂಶಯ ಬರ್‍ತಾದಬೇ ಕನ್ನಡವ್ವ' ಮೊದಲಾದ ಕವಿತೆಗಳಲ್ಲಿ ಮಹಿಳೆಯರ ಅಸ್ತಿತ್ವದ ನೆಲೆಗಳ ಸೂಕ್ಷ್ಮ ಎಳೆಗಳನ್ನು ಕಾಣುತ್ತೇವೆ. ಇಲ್ಲಿ ಕೆಲ ಕವಿತೆಗಳು ನೇರವಾಗಿ ಮಹಿಳಾ ಲೋಕದ ವೈರುಧ್ಯಗಳನ್ನು ಚಿತ್ರಿಸಿದರೆ, ಇನ್ನೂ ಕೆಲವು ಕವಿತೆಗಳು ಅವಳನ್ನು ಶಕ್ತಿ, ಧೀಮಂತೆ, ಕನ್ನಡಾಂಬೆ, ಭಾರತಾಂಬೆ ಎಂದು ಕರೆದು ಬಣ್ಣಿಸಿದ್ದಾರೆ.

ದಲಿತ ಸಾಹಿತ್ಯದ ಜತೆ ಜತೆಗೆ ಬೆಳೆದು ಬಂದ ಮತ್ತೊಂದು ಪ್ರಧಾನ ಸಾಹಿತ್ಯ ಪ್ರಕಾರವೆಂದರೆ ಅದು ಬಂಡಾಯ ಸಾಹಿತ್ಯ. ಹಾಗೆ ನೋಡಿದರೆ ಬಂಡಾಯ ಎನ್ನುವ ಪದ ಸಾಹಿತ್ಯ ಕ್ಷೇತ್ರಕ್ಕೇನು ಹೊಸದಾದುದಲ್ಲ. ಕನ್ನಡ ಸಾಹಿತ್ಯವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಬಂಡಾಯ ಎಂಬುದು ಪಂಪನಿಂದ ಮೊದಲುಗೊಂಡು, ಇದುವರೆಗಿನ ಕನ್ನಡ ಸಾಹಿತ್ಯ-ಕಾವ್ಯ-ಕೃತಿಗಳಲ್ಲಿ ವಿಶೇಷವಾಗಿ ಅಭಿವ್ಯಕ್ತಗೊಂಡುದನ್ನು ಕಾಣುತ್ತೇವೆ. ಆದರೆ ಇದು ವಿಶ್ವ ರೂಪ ಪಡೆದು, ತನ್ನತನ ಮೆರೆದದ್ದು, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಬಂಡಾಯ

ಮನೋಧರ್ಮವನ್ನು ತೋರಿದ್ದು, ಎಪ್ಪತ್ತರ ದಶಕದಲ್ಲಿ. ಇದನ್ನು ಹಲವಾರು ವಿದ್ವಾಂಸರು ಗುರುತಿಸಿ ಅದರ ಸ್ವರೂಪ ಮುಖ್ಯ ಆಶಯಗಳನ್ನು ಕುರಿತು ಚರ್ಚಿಸಿದ್ದಾರೆ.

'ಕಟ್ಟ ಬಲ್ಲೆವು ನಾವು ಕೆಡವಲೊಲ್ಲೆವು' ಇದು ಬಂಡಾಯ ಕಾವ್ಯ-ಸಾಹಿತ್ಯದ ತಾಯಿ ಬೇರಾಗಿದ್ದು, ಶೋಷಿತ ಜನರ ನೋವಿಗೆ ದನಿಯಾಗಿ ಮೂಡಿ ಬಂದ ಇದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿದೆ. ಬಂಡಾಯ ಎನ್ನುವುದೊಂದು ಮನೋಧರ್ಮವಾಗಿದ್ದು, ಅದು ಸಮಾಜದ ವಿಷಮತೆಯನ್ನು ತೊಡೆದು ಹಾಕುವ, ಪ್ರಶ್ನಿಸುವ ಮೂಲಕ ಪ್ರತಿಭಟನೆಯ ಒಂದು ಅಸ್ತ್ರವಾಗಿ ರೂಪುಗೊಂಡಿದೆ. ಈ ಹಿನ್ನೆಲೆಯಲ್ಲಿ ಕನ್ನಡದ ಪ್ರಸಿದ್ಧ ವಿದ್ವಾಂಸರಾದ ಡಾ. ಜಿ .ಎಸ್. ಶಿವರುದ್ರಪ್ಪನವರ ಒಂದು ಅಭಿಪ್ರಾಯ ಉಲ್ಲೇಖನೀಯವಾಗಿದೆ. "ನನ್ನ ಮಟ್ಟಿಗೆ ಹೇಳುವದಾದರೆ ಬಂಡಾಯ ಸಾಹಿತ್ಯ ಅನ್ನುವದೊಂದು ಮನೋಧರ್ಮ . ಈ ಮನೋಧರ್ಮದ ಮುಖ್ಯ ಲಕ್ಷಣ ಸಾಮಾಜಿಕ ಅಸಮಾನತೆ ಹಾಗೂ ಅನ್ಯಾಯಗಳನ್ನು ಒಟ್ಟಾರೆಯಾಗಿ ವಸ್ತುಸ್ಥಿತಿಯನ್ನು ಪ್ರಶ್ನಿಸುವ ಹಾಗೂ ಪರಿಸ್ಥಿತಿಯನ್ನು ಬದಲಾಯಿಸುವ ಉದ್ದೇಶದಿಂದ ಪ್ರತಿಭಟಿಸುವ ಒಂದು ಪ್ರವೃತ್ತಿ. ಶತಮಾನಗಳ ಕಾಲ ಅಕ್ಷರ ಜ್ಞಾನದ ಸವಲತ್ತುಗಳಿಂದ ವಂಚಿತರಾಗಿದ್ದು ಮತ್ತು ಮೇಲಿನ ಎಲ್ಲಾ ವರ್ಗದವರುಗಳಿಂದ ತುಳಿತಕ್ಕೆ ಒಳಗಾಗಿದ್ದ ಸಮಾಜದ ಕೆಳಗಿನ ಸ್ತರವೊಂದು, ಮಾತನಾಡಲು ಕಲಿತು, ತನ್ನ ಪ್ರತಿಭಟನೆಯನ್ನು ಅಭಿವ್ಯಕ್ತಪಡಿಸತೊಡಗಿದಾಗ ಮೂಡಿ ಬಂದಿತು.

ಬಂಡಾಯ ಸಾಹಿತ್ಯ ಹಿಂದಿನ ಎಲ್ಲಾ ಸಾಹಿತ್ಯ ಚಳವಳಿಗಳು ತಮ್ಮ ತೆಕ್ಕೆಗೆ ತೆಗೆದುಕೊಳ್ಳದೇ ಹೋದ ಸಮಾಜದ ಕೆಳ ವರ್ಗದವರ ಬದುಕನ್ನು, ನಿರ್ಲಕ್ಷಿತರ ಬದುಕನ್ನು ಬಂಡಾಯ-ಸಾಹಿತ್ಯ ತನ್ನ ವಸ್ತುವನ್ನಾಗಿ ಮಾಡಿಕೊಂಡಿದೆ."[೨೩] ಈ ವಿವೇಚನೆ ಅತ್ಯಂತ ಅರ್ಥಪೂರ್ಣವಾಗಿದ್ದು, ದಲಿತ-ಬಂಡಾಯದ ಆಶಯವನ್ನು ಸಮರ್ಥವಾಗಿ ಕಟ್ಟಿಕೊಡುತ್ತದೆ.

ಜನರ ನೋವಿಗೆ ಮಿಡಿವ ಪ್ರಾಣ ಮಿತ್ರನಂತಿರುವ ಬಂಡಾಯ ಕಾವ್ಯ - ಸಾಹಿತ್ಯ ಅದನ್ನು ಅಕ್ಷರಶಃ ರುಜುಗೊಳಿಸಿದೆ. ಸಮಾಜವನ್ನು ಪರಿವರ್ತನೆಯ ಮಾರ್ಗದಲ್ಲಿ ಕೊಂಡೊಯ್ಯಲು ಪ್ರಯತ್ನಿಸಿದೆ. ಈ ಕುರಿತು ಡಾ.ಬಸವರಾಜ ಸಬರದರವರು "ಕ್ರೂರ ವ್ಯವಸ್ಥೆಯ ವಿರುದ್ಧ ಯಜಮಾನ ಸಂಸ್ಕೃತಿಯ ಎಲ್ಲ ಸಂಚುಗಳ ವಿರುದ್ಧ ಬಂಡೆದ್ದ ಪ್ರಗತಿಪರ

---

[೨೩] ಪರಂಪರೆ ಮತ್ತು ದಲಿತ ಬಂಡಾಯ ಸಾಹಿತ್ಯ - ಡಾ. ಮ.ನ. ಜವರಯ್ಯ ಪುಟ-೨೪೦. ೨೪೧

ಮನೋಧರ್ಮವೇ ಬಂಡಾಯ ಸಾಹಿತ್ಯ ಚಳವಳಿಯ ಮೂಲ ಸತ್ವವಾಯಿತು"[೧೭] ಎಂದು ಬಂಡಾಯ ಸಾಹಿತ್ಯದ ಪ್ರಣಾಳಿಕೆಯನ್ನು ನಿರೂಪಿಸಿದ್ದಾರೆ.

ದಲಿತರು ದಲಿತರ ನೋವು, ಶೋಷಣೆಯ ಕುರಿತು ಬರೆದದ್ದು ದಲಿತ ಸಾಹಿತ್ಯವಾದರೆ, ಪ್ರಗತಿಪರರು, ದಲಿತೇತರರು ದಲಿತರ ಕುರಿತು ಬರೆದ ಸಾಹಿತ್ಯ ಬಂಡಾಯ ಸಾಹಿತ್ಯವಾಗುತ್ತದೆ. ಅದು ಅಸ್ಪೃಶ್ಯತೆ-ಜಾತೀಯತೆ-ವರ್ಗ-ವರ್ಣ-ಭೇದ ಭಾವಗಳನ್ನು ಖಂಡಿಸುತ್ತ, ಮಾನವೀಯ ನೆಲೆಯಲ್ಲಿ ಪ್ರತಿಕ್ರಿಯೆಸುತ್ತದೆ. ಹೀಗೆ ಈ ಎರಡು ಮಹತ್ವದ ವ್ಯಾಖ್ಯೆಗಳ ಮೂಲಕ ಬಂಡಾಯ ಸಾಹಿತ್ಯದ ಸ್ಥೂಲ ಸ್ವರೂಪವನ್ನು ವಿಶ್ಲೇಷಿಸಲಾಗಿದೆ.

ಅಂಬೇಡ್ಕರ-ವಾದ, ಲೋಹಿಯಾ-ವಾದ, ಮಾರ್ಕ್ಸ-ವಾದ, ಗಾಂಧಿ-ವಾದ, ಮಾವೋ, ಪೆರಿಯಾರ, ನಾರಾಯಣ ಗುರು ಮೊದಲಾದ ವ್ಯಕ್ತಿ-ವಾದಗಳಿಂದ ಪ್ರೇರಿತರಾಗಿ ಕರ್ನಾಟಕದಲ್ಲಿ ಬಂಡಾಯ-ಸಾಹಿತ್ಯ ಸಂಘಟನೆಯ ಹುಟ್ಟಿಗೆ ಕಾರಣರಾದವರಲ್ಲಿ ಪ್ರಮುಖರೆಂದರೆ ಪ್ರೊ. ಬರಗೂರು ರಾಮಚಂದ್ರಪ್ಪ, ಚಂದ್ರಶೇಖರ ಪಾಟೀಲ, ಚೆನ್ನಣ್ಣ ವಾಲೀಕಾರ ಮೊದಲಾದವರು ಇವರ ಜೊತೆ ಜೊತೆಗೆ ಬಂಡಾಯ ಸಾಹಿತ್ಯಕ್ಕೆ ಧ್ವನಿಯಾದವರು ಕಾಳೇಗೌಡ ನಾಗವಾರ, ಆರ್ಕೆ ಮಣಿಪಾಲ, ಬಸವರಾಜ ಸಬರದ, ಶಂಕರ ಕಟಗಿ, ರಂಜಾನ್ ದರ್ಗಾ, ಅಲ್ಲಮಪ್ರಭು ಬೆಟ್ಟದೂರ, ಸರಜೂ ಕಾಟ್ಕರ್, ಜಂಬಣ್ಣ ಅಮರಚಿಂತ, ಆರ್.ವಿ.ಭಂಡಾರಿ, ಸತೀಶ ಕುಲಕರ್ಣಿ, ರಾಜಪ್ಪ ದಳವಾಯಿ ಮೊದಲಾದವರು.

ಬಂಡಾಯ ಕವಿಗಳು ತಮ್ಮ ಕಾವ್ಯ-ಕೃತಿಗಳಲ್ಲಿ ದಲಿತ - ಶೋಷಿತ ವರ್ಗದವರ ನೋವನ್ನು ಮಾನವೀಯ ನೆಲೆಯಲ್ಲಿ ಅಭಿವ್ಯಕ್ತಗೊಳಿಸಿದ್ದಕ್ಕೆ ಚಾರಿತ್ರಿಕ ಮಹತ್ವವಿದೆ. ಅದಕ್ಕೆ ಕಾವ್ಯವನ್ನು ಮಾಧ್ಯಮವನ್ನಾಗಿ ಮಾಡಿಕೊಂಡರು. ಈ ಕುರಿತು ಡಾ. ಅಮರಚಿಂತರು ತಮ್ಮ ಒಂದು ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

"ಕವಿತೆ ಅಂದರೆ
ಜಾಡಮಾಲಿಯ ಪೊರಕೆಯ ಹಾಗೆ
ಬಟ್ಟೆಯೊಗೆಯುವ ಅರಸನ ಹಾಗೆ
ಕುಂಬಾರ ಗುಂಡಪ್ಪನ ತಿಗುರಿಯಹಾಗೆ
ಹೊಲೇರ ಮೂಕಪ್ಪನ ಡಪ್ಪಿಯಹಾಗೆ ಕೊರವರ ಕುರಿಮ್ಯಾನ ಜಿಜಲಿಹಾಗೆ"[೧೮]

---

[೧೭] ಬಂಡಾಯ ದಲಿತ ಸಾಹಿತ್ಯ - ಪುರುಷೋಪತ್ತಮ ಬಿಳಿಮಲೆ -ಪುಟ-೧೨

[೧೮] 'ಕವಿತೆ ಅಂದರೆ' ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು - ಡಾ. ಪ್ರಹ್ಲಾದ ಅಗಸನಕಟ್ಟೆ - ಪುಟ-೧

ಇಲ್ಲಿ ಕವಿತೆ ಎಂದರೇನು? ಎಂದು ಹೇಳುತ್ತ ಬಂಡಾಯ ಕಾವ್ಯದ ಪ್ರಧಾನ ಆಶಯವನ್ನು ಕಟ್ಟಿ ಕೊಟ್ಟಿದ್ದಾರೆ. ಬಂಡಾಯ ಕಾವ್ಯ-ಸಾಹಿತ್ಯಕ್ಕೆ ಕಸುವು, ವಿಸ್ತಾರತೆಯನ್ನ ತಂದು ಕೊಟ್ಟವರಲ್ಲಿ ಪ್ರಮುಖರೆಂದರೆ ಬಂಡಾಯದ ಗಟ್ಟಿ ದನಿ ಪ್ರೊ. ಬರಗೂರು ರಾಮಚಂದ್ರಪ್ಪನವರು. ಬಂಡಾಯ ಸಾಹಿತ್ಯ ಸಂಘಟನೆಯನ್ನು ಕಟ್ಟಿ ಬೆಳಸಿದವರಲೊಬ್ಬರಾದ ಅವರು ಇದುವರೆಗೆ ಮರ ಕುಟಿಗ, ನೆತ್ತರದಲ್ಲಿ ನೆಂದ ಹೂವು, ಗುಲಾಮ ಗೀತೆ, ಮಗುವಿನ ಹಾಡು, ಕಾಂಟೆಸ್ಸಾದಲ್ಲಿ ಕಾವ್ಯ ಇತ್ಯಾದಿ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಮಹಿಳೆಯರ ಬಗ್ಗೆ ಜೀವಪರ ಕಾಳಜಿಯುಳ್ಳ ಬರಗೂರ ಅವರ ಶೋಷಿತ ಮಹಿಳೆಯರ ಬದುಕನ್ನು ಚಿತ್ರಿಸುವಂತಹ ಅನೇಕ ಕವಿತೆಗಳನ್ನು ರಚಿಸಿದ್ದು ಅವುಗಳಲ್ಲಿ 'ಮಾದಿಗರ ಹುಡುಗಿ' ಕವಿತೆ ವಿಶಿಷ್ಟವಾಗಿದೆ.

ಜಾನಪದೀಯ ಮುಗ್ಧ ನಂಬಿಕೆಯೊಂದು ಮಾದಿಗರ ಹುಡುಗಿಯನ್ನು ಬಲಿ ತೆಗೆದುಕೊಂಡ ವಿಷಯ ಈ ಕವಿತೆಯ ವಸ್ತುವಾಗಿದ್ದು, ಅಸ್ಪೃಶ್ಯರು ಮುಟ್ಟ ಬಾರದೆಂಬ ಕಟ್ಟು ಪಾಡುಗಳಿರುವ 'ಸೀತೆ ದೊಣ್ಣೆ' ನೀರನ್ನು ಮುಟ್ಟಿ, ಸವರ್ಣೀಯರ ಕ್ರೌರ್ಯಕ್ಕೆ ಹುಡುಗಿಯಬ್ಬಳು ಬಲಿಯಾಗುವ ದುರಂತತೆ ಈ ಕವಿತೆಯಲ್ಲಿದೆ. ಇಲ್ಲಿ ಮಾದಿಗರ ಪುಟ್ಟಿ ಸೀತೆ ದೊಣೆ ಏಕೆ ಮುಟ್ಟಬಾರದು ಎಂದು ಪ್ರಶ್ನಿಸಿದಕ್ಕೆ ಅವಳ ಸಾವಿಗೆ ಕಾರಣವಾದದ್ದು ಇಲ್ಲಿ ವ್ಯಕ್ತವಾಗುತ್ತದೆ. ಆದರೆ ಕವಿತೆಯಲ್ಲಿ ಮೇಲ್ವರ್ಗದ ವಿರುದ್ಧ ಪ್ರಶ್ನಿಸುವುದು, ಪ್ರತಿಭಟಿಸುವುದು ಗಮನಾರ್ಹವಾಗಿ ತೋರುತ್ತದೆ. ಬಂಡಾಯ ಸಾಹಿತ್ಯ ಸಂಘಟನೆಯನ್ನು ಹುಟ್ಟು ಹಾಕಿದ ಮತ್ತೋರ್ವ ಪ್ರಸಿದ್ಧ ಕವಿ-ಲೇಖಕ ಪ್ರೊ. ಚಂದ್ರಶೇಖರ ಪಾಟೀಲ. ಕನ್ನಡ ಸಾರಸ್ವತ ಲೋಕದಲ್ಲಿ ಚಂಪಾ ಎಂದೇ ಪ್ರಸಿದ್ಧರಾದ ಇವರು ಬಂಡಾಯ ಸಾಹಿತ್ಯದ ಮುಖವಾಣಿಯಂತಿರುವ ಸಂಕ್ರಮಣ ಮಾಸ ಪತ್ರಿಕೆಯನ್ನು ಪ್ರಾರಂಭಿಸುವ ಮೂಲಕ ಕಳೆದ ಐವತ್ತು ವರ್ಷಗಳಿಂದ ಬಂಡಾಯ ಸಾಹಿತ್ಯ ವಿಚಾರಗಳನ್ನ ಪ್ರಕಟಿಸುತ್ತಲೇ ಬಂದಿದ್ದಾರೆ. ಚಂದ್ರಶೇಖರ ಪಾಟೀಲರು ಇದುವರೆಗೆ ಬಾನುಲಿ, ಮಧ್ಯಬಿಂದು, ಹತ್ತೊಂಬತ್ತು ಕವನಗಳು, ಗಾಂಧೀ ಸ್ಮರಣೆ, ಓ ನನ್ನ ದೇಶ ಭಾಂದವರೆ, ಹೂವು ಹೆಣ್ಣುತಾರೆ, ಅರ್ಧ ಸತ್ಯದ ಹುಡುಗಿ, ಗುಂಡಮ್ಮನ ಹಾಡು, ಶಾಲ್ಮಲಾ ನನ್ನ ಶಾಲ್ಮಲಾ, ದೇವ ಭಾಗ ಮೊದಲಾದ ಕವನಸಂಕಲನಗಳನ್ನ ಬರೆದು ಪ್ರಕಟಿಸಿದ್ದಾರೆ. ಹೂವು ಹೆಣ್ಣು ತಾರೆ, ಅರ್ಧ ಸತ್ಯದ ಹುಡುಗಿ, ಗುಂಡಮ್ಮನ ಹಾಡು ಕವನ ಸಂಕಲನಗಳು ಹೆಸರೇ ಸೂಚಿಸುವ ಹಾಗೆ ಮಹಿಳೆಯರ ಕುರಿತ ಚಿತ್ರಣಗಳಿದ್ದು, ಅವುಗಳಲ್ಲಿ ಅವರ ನೋವು-ನಲಿವು-ಕನಸು-ಕಲ್ಪನೆ-ಆಸೆ-ಶೋಷಣೆ-ಅಸಹನೆ-ಕರುಣೆ -ಪ್ರೀತಿ-ಮಾರ್ದವತೆ ಇತ್ಯಾದಿಗಳನ್ನು ಚಿತ್ರಿಸಿದ್ದಾರೆ.

ಬಂಡಾಯ ಮತ್ತು ದಲಿತರಲ್ಲಿ ಹೂವು ಹೆಣ್ಣು ತಾರೆಗಳ ಬಗ್ಗೆ ಕಾವ್ಯ ಬರಿಯಬೇಕೇ ಬೇಡವೇ ಎಂಬ ತಾತ್ವಿಕ ಪ್ರಶ್ನೆ ಎದುರಾದಾಗ ಚಂದ್ರಶೇಖರ ಪಾಟೀಲರು ಈ ನೆಲೆಯಲ್ಲಿ 'ಹೂ, ಹೆಣ್ಣು, ತಾರೆ' ಕವನ ಸಂಕಲನ ರಚಿಸಿದರು. ಹಾಗೆಯೇ 'ಗುಂಡಮ್ಮನ ಹಾಡು' ಕವನ ಸಂಕಲನವಂತೂ 'ಸ್ತ್ರೀ' ಸಂವೇದನೆಗಳನ್ನು ವಿಶಿಷ್ಟವಾಗಿ ಬಿಂಬಿಸುತ್ತದೆ. ಪಾಟೀಲರ ಮತ್ತೊಂದು ಮಹತ್ವದ ಕವಿತೆ 'ಇಂದಿರಾ ಇಂಡಿಯಾ ಇಂದಿರಾ'–ಎಂಬುದು. ಇದರಲ್ಲಿ ಪಾಟೀಲರು ಇಂದಿರಾಗಾಂಧೀಯನ್ನು ಲೇವಡಿ ಮಾಡುತ್ತಾರೆ. 'ಅರ್ಧ ಸತ್ಯದ ಹುಡುಗಿ' ಕವಿತೆ ಸ್ಮಿತಾ ಎಂಬ ಹುಡುಗಿಯ ಜೀವನದ ಗಾಥ ವಿಷಾದ ಮತ್ತು ದುರಂತವನ್ನು ಒಳಗೊಂಡಿದ್ದು, ಅದನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ದಲಿತ ಬಂಡಾಯದ ಎರಡು ಸಂವೇದನೆಗಳನ್ನು ತಮ್ಮ ಕಾವ್ಯ ಕೃತಿಯ ಮೂಲಕ ಅಭಿವ್ಯಕ್ತಪಡಿಸಿದ ಹೆಗ್ಗುರಳಿನ ಬಂಡಾಯ ಕವಿ, ಸಾಹಿತಿ. ಡಾ. ಚೆನ್ನಣ್ಣ ವಾಲೀಕಾರ 'ನೀ ಹ್ವಾದ ಮರುದಿನ ನಮ್ಮ ಬದುಕು ಮೊದಲಿನಂಗ ಆಗ್ಯಾದೋ ಬಾಬಾ ಸಾಹೇಬ' ಎಂದು ಡಾ. ಅಂಬೇಡ್ಕರರ ಅನುಪಸ್ಥಿತಿಯ ಕೊರಗನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ ವಾಲೀಕಾರರು ತಮ್ಮ ವಿಶಿಷ್ಟ ಬರವಣಿಗೆ ಶೈಲಿಯಿಂದ ಪ್ರಸಿದ್ಧರಾಗಿದ್ದಾರೆ. ಅವರು ಇದುವರೆಗೆ 'ಮರದ ಮೇಲಿನ ಗಾಳಿ', 'ಕರಿತೆಲಿ ಮಾನವನ ಜೀಪದ', 'ಹಾಡಕ್ಕಿ ಹಾಗೂ ಇತರ ಪದಗಳು', 'ಬಂಡೆದ್ದ ದಲಿತರ ಬೀದಿ ಹಾಡುಗಳು', 'ದಿಕ್ಕಾರದ ಹಾಡುಗಳು', 'ಪ್ಯಾಂತರ್ ಪದ್ಯಗಳು' ಮೊದಲಾದವುಗಳನ್ನು ಪ್ರಕಟಿಸಿದ್ದಾರೆ. ಮಹಿಳೆಯರ ಅಸಹಾಯಕತೆ ಚಿಂತಾಜನಕ ಬದುಕು ಇತ್ಯಾದಿಗಳನ್ನು ಮನ ಮಿಡಿಯುವ ಹಾಗೆ ಮಾನವೀಯ ನೆಲೆಯಲ್ಲಿ ಚಿತ್ರಿಸುವ ಡಾ. ಚೆನ್ನಣ್ಣ ವಾಲೀಕಾರವರು ಶೋಷಿತ ಮಹಿಳೆಯರ ಅಂತರಾಳದ ಧ್ವನಿಯಾಗಿದ್ದಾರೆ. ಇದಕ್ಕೆ ಅವರ 'ಮೂರು ಹೆಣ್ಣಿನ ಹಾಡು' ಕವಿತೆ ಸಾಕ್ಷಿಯಾಗಿದೆ.

"ನಾಳೆಯ ಕೂಳಿಗಾಗಿ ಅಮ್ಮನಿಗೆ ಗಿರಾಕಿ ಬರಲೆಂದು ಮಗ
ನಾಳೆಯ ಕೂಳಿಗಾಗಿ ಮಗಳಿಗೆ ಗಿರಾಕಿ ಬರಲೆಂದು ತಂದೆ ತಾಯಿ
ನಾಳೆಯ ಕೂಳಿಗಾಗಿ ತನಗೆ ಗಿರಾಕಿ ಬರಲೆಂದು ವೇಶ್ಯೆ
ಹಾದಿ ತುಂಬ ಕಣ್ಣಾಗಿ ಕುಳಿತಾಗ ಯಾರು ಬರದಿದ್ದರೆ
ಕೊಳ್ಳುವರು ಅವರೆಲ್ಲ ಬೆಂಕಿ ಕೆಂಡಗಳನ್ನು ನಾಳೆಯ ಕೂಳನ್ನಾಗಿ
ಮಾಡಿ"[೧೬]

---

[೧೬] ಮೂರು ಕಣ್ಣಿನ ಹಾಡು – ಚೆನ್ನಣ್ಣ ವಾಲೀಕಾರ – ಪುಟ – ೮೮

ಕುಟುಂಬದವರೆಲ್ಲ ತಮ್ಮ ಉದರ ನಿರ್ವಹಣೆಗಾಗಿ ಹೆಣ್ಣನ್ನು ಲೈಂಗಿಕವಾಗಿ ಶೋಷಿಸುವ ದಾರುಣ ಚಿತ್ರಣ ಇಲ್ಲಿದ್ದು, ಹೆಣ್ಣು ತನ್ನ ಮತ್ತು ತನ್ನನ್ನು ನಂಬಿದವರ ಕೂಳಿಗಾಗಿ ತನ್ನ ಮೈ ಮಾರಿಕೊಳ್ಳುವಲ್ಲಿ ಎಂದಿಗೂ ಕಾಮದ ಮೂರ್ತಿಯಾಗಿ ಶೋಷಣೆಗೆ ಒಳಪಟ್ಟಿದ್ದನ್ನು ಇಲ್ಲಿ ಕಾಣುತ್ತೇವೆ.

ಮಾರ್ಕ್ಸ್‌ವಾದದಿಂದ ಪ್ರಭಾವಿತರಾಗಿ ತಮ್ಮ ಕವಿತೆಯಲ್ಲಿ ದಟ್ಟವಾದ ವರ್ಗಪ್ರಜ್ಞೆಯನ್ನು ಅಳವಡಿಸಿಕೊಂಡು, ಕಾವ್ಯ ಕೃಷಿಯಲ್ಲಿ ತೊಡಗಿರುವ ಪ್ರಮುಖ ಕವಿ–ಲೇಖಕ ಡಾ. ಬಸವರಾಜ ಸಬರದ. ಅವರು ಇದುವರೆಗೆ 'ಹೋರಾಟ', 'ನನ್ನವರ ಹಾಡು', 'ಮೂಡಲ ಕೆಂಪು ಮೂಡ್ಯಾವ', 'ನೂರು ಹನಿಗಳು', 'ದನಿಯೆತ್ತಿ ಹಾಡೇನ', 'ಬೆಳದಿಂಗಳು ಬಿಸಿಯಾಯಿತು', 'ಜೇನ ಹನಿಗಳು', 'ಪದ ಕಟ್ಟಿಹಾಡೇನ', 'ಸಬರದ ಕವಿತೆಗಳು', 'ಕೆಂಡ ಸಂಪಿಗೆ' ಮೊದಲಾದವುಗಳನ್ನು ಪ್ರಕಟಿಸಿದ್ದಾರೆ. ಅವರ ಇಡೀ ಕಾವ್ಯವನ್ನು ಗಮನಿಸಿದಾಗ ಶೋಷಣೆಯ ರೊಚ್ಚು, ಪ್ರತಿಭಟನೆಯ ಜೊತೆಗೆ ಶೋಷಿತ ಮಹಿಳೆಯ ಪರವಾದ ಸಹಜ ಕರುಣೆ, ಪ್ರೀತಿ, ಅನುಕಂಪ, ವಿಷಾದದ ಛಾಯೆ, ಕಂಡು ಬರುತ್ತದೆ. ಜನಪದ ಲಯಗಳನ್ನ ಸಮರ್ಥವಾಗಿ ಬಳಸಿಕೊಂಡ ಸಬರದರು ವಿಶಿಷ್ಟವಾದ ಕಾವ್ಯವನ್ನು ಕನ್ನಡಕ್ಕೆ ನೀಡಿದ್ದಾರೆ.

"ಸುಂದರ ಹೆಣ್ಣುಗಳ ಕಣ್ಣುಗಳ
ವನಪು ವೈಯ್ಯಾರದ ಮಾಟಕ್ಕೆ
ಥಕ–ತೈ ತಾಳ
ಕುಣಿ ಕುಣಿದು ಮಣಿದು
ಅಪ್ಪಳಿಸಿದ್ದು ಸಾಕು ಕವಿತೆ"[೧೭]

ಈ ಕವಿತೆಗಳಲ್ಲಿ ಕವಿ ಹಿಂದಿನ ಕಾವ್ಯ ಪರಂಪರೆಯನ್ನ ಟೀಕಿಸುತ್ತಾನೆ. ಅಲ್ಲದೆ ನವೋದಯ ಹೆಣ್ಣಿನ ವೈಯ್ಯಾರ ವರ್ಣಿಸಿದರೆ, ನವ್ಯ ವಿಕೃತವಾದ ಭ್ರಮೆ, ರತಿಸುಖದ ವೈಭವಕ್ಕೆ ಮಿಸಲಾದ ಆರೋಪಕ್ಕೆ ಗುರಿಯಾಯಿತು. ಆದರೆ ಬಂಡಾಯ ಕಾವ್ಯ ಮಾತ್ರ ಶುದ್ಧ ಮನುಷ್ಯ ಪ್ರೀತಿಯನ್ನು ಆರಾಧಿಸುವ ಮೂಲಕ ನೊಂದ ಜನತೆಯ, ಹೆಣ್ಣು ಮಕ್ಕಳ ಕಣ್ಣೀರು ಒರೆಸುವ ಕೈಯಾಯಿತೆಂದು ಸೂಕ್ಷ್ಮವಾಗಿ ಚಿತ್ರಿಸುತ್ತಾರೆ.

[೧೭] ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ – ಡಾ. ಮ.ನ. ಜವರಯ್ಯ – ಪುಟ–೨೨೧

ಬಂಡಾಯ ಸಾಹಿತ್ಯದಲ್ಲಿ ಕೇಳಿ ಬರುವ ಮತ್ತೊಂದು ಮಹತ್ವದ ಹೆಸರೆಂದರೆ ಸರಜೂ ಕಾಟ್ಕರ್‌ರವರದು. ಕನ್ನಡ-ಮರಾಠಿ ದಲಿತ ಅನುಭವಗಳನ್ನು ತಮ್ಮ ಕಾವ್ಯಗಳಲ್ಲಿ ಅಭಿವ್ಯಕ್ತ ಪಡಿಸಿದ ಕಾಟ್ಕರ್‌ರವರು ಇದುವರೆಗೆ 'ಹಸಿದ ನೆಲ', 'ಮ್ಯಾನಿಫೆಸ್ಟೋ', 'ಏಕಾಂತದ ಮನುಷ್ಯ', 'ಗಜಲ್', 'ಹೈಕು', 'ಅವ್ವ', 'ನವಿಲೇ ನವಿಲು', 'poems of sarjoo katkar', 'ಗಾಂಧೀ ಟು ಗೋದ್ರಾ', 'ಬೆಳ್ಳಿ ಸಾಲ್ಮನ್', 'ಸೂರ್ಯಯಾನ' ಇತ್ಯಾದಿ ಕವಿತಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕಾಟ್ಕರ್‌ರರ ಇಡೀ ಕಾವ್ಯಕೃತಿಗಳನ್ನು ಅವಲೋಕಿಸಿದಾಗ ಪ್ರತಿಭಟನೆಯ ಜೊತೆಗೆ ಮಹಿಳೆಯರ ಅಧೋ ಜಗತ್ತಿನ ಅನಾವರಣವಿರುವುದನ್ನು ಕಾಣುತ್ತೇವೆ. ಅವರು ಮಹಿಳೆ ಬಗ್ಗೆ ತೋರುವ ಪ್ರೀತಿ, ಗೌರವ, ಕಾಳಜಿ ಇತ್ಯಾದಿಗಳು ಒಂದು ವಿಶಿಷ್ಟ ವಾತಾವರಣವನ್ನು ಸೃಷ್ಟಿಸಿವೆ. ಅವರ 'ಅವ್ವ' ಕವನ ಸಂಕಲನವಂತೂ ಪ್ರಸಿದ್ಧವಾಗಿದ್ದು, ಅಲ್ಲಿ ಅವ್ವನ ಕುರಿತು ಆರು ಕವಿತೆಗಳಿದ್ದು, ಅವ್ವನ ವ್ಯಕ್ತಿತ್ವ-ವಿಶೇಷತೆಗಳನ್ನು ಧ್ವನಿ ಪೂರ್ಣವಾಗಿ ಚಿತ್ರಿಸಿದ್ದಾರೆ.

> "ಆಕೆ ಎತ್ತಿಕೊಂಡು ಮಗು ಎಂದೂ ಅಳಲಿಲ್ಲ
> ಆಕೆ ಹಚ್ಚಿದ ಗಿಡ ಎಂದೂ ಬಾಡಲಿಲ್ಲ
> ಆಕೆ ಯಾರಿಗೂ ಎಂದೂ ಬೇಸರವಾಗಲಿಲ್ಲ
> ಆಕೆಯ ಮಾತುಗಳೆಲ್ಲ ವಚನಗಳಾಗಿದ್ದವು
> ಬಂದಂತೆಯೇ ಆಕೆ ನಗುನಗುತ್ತ ಹೊರಟು ಹೋದಳು"[೧೮]

"ಈ ಕವನದ ಕುರಿತು ಡಾ. ಕವಿತಾ ರೈ ಹೀಗೆ ಬರೆಯುತ್ತಾರೆ. "ತಾಯಿ ಮಗುವಿನ ಜನ್ಮದತ್ತ ನಂಟು ಅದು. ಬದುಕಿನ ಯಾವ ಸಂದಂರ್ಭದಲ್ಲಿಯೂ ಅದು ವಿಚಲಿತಗೊಳ್ಳದೆ ತನ್ನ ಮಗು ಎಂದೂ ಅಳದೆ ಇರಬೇಕೆಂದು ತಾಯಿಯಾದವಳು ಬಯಸುತ್ತಾಳೆ. ತಾಯಿ ನೆಡುವ ಗಿಡ ಎಂದೂ ಬಾಡಲಾರದೆಂಬ ದೃಢ ವಿಶ್ವಾಸ ಮಕ್ಕಳಲ್ಲಿ ಉಳಿದು ಬಿಡುತ್ತದೆ. ಸರಜೂ ಪರಿಕಲ್ಪಿಸುವ 'ಅವ್ವ' ಎಂಬ ಪ್ರತಿಮೆಗೆ ಬಹುಮುಖಿಯಾದ ಅರ್ಥ ಸಾಧ್ಯತೆಗಳಿವೆ. ಇಲ್ಲಿಯ ಕವನಗಳಲ್ಲಿ 'ಅವ್ವ' ಎಂದರೆ ಕೇಡು ಒಳಿತುಗಳಾಚೆಗೆ, ಸತ್ಯ-ಅಸತ್ಯಗಳೆರಡೂ ಅಹುದು. ಇಲ್ಲಗಳಾಚೆಗೆ, ಸ್ನೇಹ-ಶತ್ರುತ್ವಗಳಾಚೆಗೆ ಇರುವಂಥದು.ಇಲ್ಲಿ ಕಾಣುವ 'ಅವ್ವ' ಸಿರಿತನದ ಗೊಡವೆಗೆ ಹೋಗದಾಕೆ. ಎಂದೂ ರೇಷ್ಮೆ ಸೀರೆ ಉಟ್ಟಿರದ, ಗುಲಗಂಜಿ ಕಾಳಿನಷ್ಟು ಬಂಗಾರ ಕಾಣದ, ಒಂದೆಡೆ ಶಾಂತವಾಗಿ ಕೂತಿರದ, ಜಗದ ನೋವನ್ನು ಸ್ವಂತ ದುಃಖವೆಂಬಂತೆ ಅಪ್ಪಿಕೊಳ್ಳುವ 'ಅವ್ವ'

---

[೧೮] 'ಅವ್ವ' ಕಾವ್ಯಕಾರ್ತಿಕ - ಸರಜೂ ಕಾಟ್ಕರ್ ಪ್ರಕಾಶ ಗಿರಿಮಲ್ಲನವರ್ ಪುಟ - ೨೮

ಆಕೆಯ ವ್ಯಕ್ತಿತ್ವದ ಚಿತ್ರಣ ಇಲ್ಲಿಯ ಕವನಗಳಲ್ಲಿ ಹಂತ ಹಂತವಾಗಿ ಬೆಳೆಯುತ್ತ ಹೋಗುತ್ತದೆ."[೮] ಹುಟ್ಟಿನಲ್ಲಿ 'ಅವ್ವ'ನ ವಿಶಾಲ ಹೃದಯದ ಚಿತ್ರಣ ಇಲ್ಲಿದೆ.

ಹಾಗೆಯೇ 'ಕಟ್ಟಬಲ್ಲೆವು ನಾವು', 'ಕುದುರೆ ಮೋತಿ ಪ್ರಸಂಗ' ಮೊದಲಾದ ಕವನ ಸಂಕಲನಗಳ ಮೂಲಕ ಬಂಡಾಯ ಮನೋಧರ್ಮವನ್ನು ತಮ್ಮ ಕಾವ್ಯ ಕೃತಿಗಳಲ್ಲಿ ಗಟ್ಟಿಯಾಗಿ ತೋರಿದ ಅಲ್ಲಮಪ್ರಭು ಬೆಟ್ಟದೂರ ಅವರು ತಮ್ಮ ಒಂದು ಕವಿತೆಯಲ್ಲಿ. ಭಾರತವನ್ನು, ಭಗವದ್ಗೀತೆಯನ್ನು. ಸಂಸ್ಕೃತವನ್ನು, ದೆಹಲಿಯನ್ನು ಎಲ್ಲವನ್ನೂ ತರಾಟೆಗೆ ತೆಗೆದುಕೊಳ್ಳುವ ಮೂಲಕ ಸಾಮಾನ್ಯ ಜನರಿಂದ ದೂರಾಗುವ ಭಾರತವನ್ನು, ಬದಲಾಗುತ್ತಿರುವ ವೈಖರಿಯನ್ನು ವಿಡಂಬಿಸುತ್ತಾರೆ. ಹಾಗೂ 'ತಸ್ಲೀಮಾ' ಕವಿತೆಯಲ್ಲಿ ತಸ್ಲೀಮಾ ನಸ್ರೀನರ ವೈಚಾರಿಕ ನಿಲುವು–ಹೋರಾಟ–ಪ್ರತಿಭಟನೆಯನ್ನು ಮುಕ್ತವಾಗಿ ಮೆಚ್ಚಿಕೊಂಡು ಶ್ಲಾಘಿಸುತ್ತಾರೆ.

ಅವರಲ್ಲದೇ ಕಾಳೇಗೌಡ ನಾಗವಾರರ 'ಕರಾವಳಿಯಲ್ಲಿ ಗಂಗಾ ಲಗ್ನ', ಸತೀಶ ಕುಲಕರ್ಣಿಯವರ 'ಒಬ್ಬಳಿದ್ದಳು' ಲೋಕೇಶ ಅಗಸನಕಟ್ಟೆಯವರ 'ಶ್ರೀಸಾಮಾನ್ಯ', ಎಚ್.ಎಸ್.ಶಿವಪ್ರಕಾಶರ 'ಸಮಾಗಾರ ಭೀಮವ್ವ' ಮೊದಲಾದ ಕವಿತೆಗಳಲ್ಲಿ ಮಹಿಳೆಯರ ಕನಸು – ಕಲ್ಪನೆ' ಸ್ನೇಹಾ–ಪ್ರೀತಿ, ಶೋಷಣೆ–ಅಸಹನೆ ಎಂಬಂತಹ ಇತ್ಯಾದಿ ಅಸ್ತಿತ್ವದ ನೆಲೆಗಳನ್ನು ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

ಕನ್ನಡದಲ್ಲಿ ದಲಿತ–ಬಂಡಾಯ ಕಾವ್ಯ–ಸಾಹಿತ್ಯ ಬೆಳೆದು ಬಂದಂತೆ ಇವೆರಡರ ಗಾಢ ಪ್ರಭಾವ–ಪ್ರೇರಣೆ ಪಡೆದು, ಸ್ವತಃ ಮಹಿಳೆಯರು, ಅಕ್ಷರಸ್ಥರಾಗಿ, ತಮ್ಮ ಅನುಭವಗಳನ್ನು ಅಕ್ಷರ ರೂಪದಲ್ಲಿ ಹಿಡಿದಿಡುವ ಸಾರ್ಥಕ ಪ್ರಯತ್ನ ಮಾಡಿದರು. ಅದನ್ನು ವಿದ್ವಾಂಸರು ಮಹಿಳಾ ಕಾವ್ಯ–ಸಾಹಿತ್ಯ; ಸ್ತ್ರೀವಾದಿ ಚಳುವಳಿಯೆಂದು ಗುರುತಿಸಿದ್ದಾರೆ. ಹೀಗೆಂದ ಮಾತ್ರಕ್ಕೆ ಈ ಹಿಂದೆ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರು ಕಾವ್ಯ–ಕೃತಿಗಳನ್ನು ರಚಿಸಿರಲಿಲ್ಲವಂತಲ್ಲ, ಸಂಚಿ ಹೊನ್ನಮ್ಮ, ಜಯದೇವಿತಾಯಿ ಲಿಗಾಡೆ ಮೊದಲಾದವರು ರಚಿಸಿದ ಸಾಹಿತ್ಯ ಕೃತಿಗಳು ಕನ್ನಡ ಸಾಹಿತ್ಯದ ಅಮೂಲ್ಯ ರತ್ನಗಳಾಗಿವೆ. ಅವರ ಕಾವ್ಯ ಕೃತಿಗಳ ಪ್ರಭಾವವೂ ಎಪ್ಪತ್ತರ ಹಾಗೂ ಅನಂತರ ಕಾಲಘಟ್ಟದ ಕವಯತ್ರಿ–ಲೇಖಕಿಯರ ಮೇಲೆ ಉಂಟಾಗಿರುವುದನ್ನು ನಾವು ಕಾಣುತ್ತೇವೆ. ಹೀಗಾಗಿ ಇಂದು ಮಹಿಳೆಯರು ಕಾವ್ಯ ಜಗತ್ತಿನ ಮುಂಚೂಣಿಯಲ್ಲಿದ್ದು, ತಮ್ಮ ಮಹಿಳಾ ಲೋಕದ ವೈರುಧ್ಯಗಳಿಗೆ ಸ್ವತಃ ತಾವೇ ಮುಖಾಮುಖಿಯಾಗಿ ಪ್ರತಿಕ್ರಿಯಿಸುತ್ತಿದ್ದಾರೆ. ಹೀಗಾಗಿ ಇಂದು

[೮] ಕಾವ್ಯ ಕಾರ್ತಿಕ – ಸರಜೂ ಕಾಟ್ಕರ್ – ಪುಟ – ೨೮

ಮಹಿಳಾ ಕಾವ್ಯ-ಸಾಹಿತ್ಯ ವಿಪುಲವಾಗಿ ಬೆಳೆದು, ನಿಂತಿದ್ದು, ಅದಕ್ಕೆ ಚಾರಿತ್ರಿಕ, ಸಾಂಸ್ಕೃತಿಕ ಮಹತ್ವವಿದೆ.

ಮಹಿಳಾ ಸಂವೇದನೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತ, ಇಡೀ ಮಹಿಳಾ ಲೋಕವನ್ನು ಕಣ್ಮುಂದಿಟ್ಟುಕೊಂಡು, ಅದಕ್ಕೊಂದು ತಾತ್ವಿಕ ದೀಕ್ಷೆ ಕೊಡುವ ನೆಲೆಯಲ್ಲಿ ಸಾಗಿದ ಮೊದಲ ಪಂಕ್ತಿಯ ಕವಯತ್ರಿ ಲೇಖಕಿಯರೆಂದರೆ, ಬಿ.ಟಿ. ಲಲಿತಾ ನಾಯಕ, ಶೈಲಜಾ ಉಡಚಣ, ಸುಕನ್ಯಾ ಮಾರುತಿ, ದು. ಸರಸ್ವತಿ, ವೈದೇಹಿ, ಸ.ಉಷಾ, ಚ. ಸರ್ವಮಂಗಳ, ಶಶಿಕಲಾ ವೀರಯ್ಯಸ್ವಾಮಿ, ಎಸ್. ಮಾಲತಿ, ವಿಜಯಾ ದಬ್ಬೆ, ಮೊದಲಾದವರು. ಅನಂತರದಲ್ಲಿ ಕಮಲಾ ಹೆಮ್ಮಿಗೆ, ಎಚ್.ಎಲ್. ಪುಷ್ಪ, ಮಲ್ಲಿಕಾ ಘಂಟಿ, ರಂಜನಾ ನಾಯಕ, ಹೇಮಾ ಪಟ್ಟಣಶೆಟ್ಟಿ, ಮಾಲತಿ ಪಟ್ಟಣಶೆಟ್ಟಿ, ರೂಪಾ ಹಾಸನ, ಮಮತಾ. ಜಿ ಸಾಗರ, ಎಂ.ಎಸ್. ವೇದಾ, ವಿಜಶ್ರೀ ಸಬರದ, ಪ್ರತಿಭಾ ನಂದಕುಮಾರ, ಎಂ.ಆರ್. ಕಮಲಾ, ಕೆ. ಷರೀಫಾ, ಡಾ. ಪದ್ಮಾ ಶೇಖರ, ಸವಿತಾ ನಾಗಭೂಷಣ, ಭಾರತಿ ಮೋಹನ ಕೋಟಿ, ಎಚ್.ಎಸ್. ಮುಕ್ತಾಯಕ್ಕ, ರಜಿಯಾ ಬಳಬಟ್ಟಿ, ಡಾ. ವಿನಯಾ, ಡಾ. ವಿದ್ಯಾ ಕುಂದರಗಿ, ಡಾ. ಅನುಸೂಯಾ ಕಾಂಬಳೆ, ರಾಜೇಶ್ವರಿ ಎನ್ ಮೊದಲಾದವರು.

ಸಾಹಿತ್ಯ-ಸಂಸ್ಕೃತಿ-ರಾಜಕೀಯ-ಸಮಾಜ ಸೇವೆ ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಂಡಿರುವ ಹಿರಿಯ ಕವಯತ್ರಿ-ಲೇಖಕಿ ಬಿ.ಟಿ. ಲಲಿತಾ ನಾಯಕ. ಮಹಿಳಾ ಕಾವ್ಯದ ವಿಶಿಷ್ಟ ಧ್ವನಿಯಾದ ಅವರು ತಮ್ಮ ಕೃತಿಗಳಲ್ಲಿ ಮಹಿಳೆಯರ ಶೋಷಿತ ಬದುಕು ಹಾಗೂ ಅಸ್ಪೃಶ್ಯ ಸಮುದಾಯದ ಅನುಭವಗಳನ್ನು ಬಿಂಬಿಸಿದ್ದಾರೆ. ಅವರು ಇದುವರೆಗೆ 'ನಂರೂಪ್ಲಿ', 'ಇದೇ ಕೂಗು ಮತ್ತೆ ಮತ್ತೆ', 'ಒಡಲ ಬೇಗೆ', 'ಸವಾ ಸೇರು', 'ಬಿದಿರು ಮೆಳೆ ಕಂ-ಟಿಯಲಿ' ಮೊದಲಾದ ಕಾವ್ಯ ಕೃತಿಗಳನ್ನು ರಚಿಸಿದ್ದಾರೆ. ಜಾತಿಯ ವಿಷಮತೆ, ಮಹಿಳೆಯರ ಶೋಷಣೆ, ಬಂಡಾಯದ ದನಿ ಇವರ ಕಾವ್ಯದ ವಿಶೇಷತೆಗಳಾಗಿವೆ. 'ಇದೇ ಕೂಗು ಮತ್ತೆ ಮತ್ತೆ' ಕವಿತೆಯಲ್ಲಿ: ಕಾಲ-ಪ್ರದೇಶ ಬದಲಾದರೂ ಮನುಷ್ಯನ ಸ್ವಭಾವ ಮಾತ್ರ ಬದಲಾಗಿಲ್ಲ. ಅಂದಿನ ಹಾಗೆ ಇಂದು ಕೂಡಾ ಶೋಷಣೆ-ದೌರ್ಜನ್ಯಗಳು ನಡೆಯುತ್ತಲೇ ಇವೆ ಎಂಬುದನ್ನು ಸೂಚಿಸುತ್ತಾರೆ.

ಸ್ತ್ರೀವಾದಿ ನೆಲೆಯಲ್ಲಿ ಮೊಟ್ಟಮೊದಲು ಕಾವ್ಯಕೃತಿಯ ಮೂಲಕ ಪ್ರತಿಕ್ರಿಯೆ ನೀಡಿದ ಕವಯತ್ರಿ ಎಂದರೆ ಶೈಲಜಾ ಉಡಚಣ. ಈ ಕುರಿತು ಹೇಮಾ ಪಟ್ಟಣಶೆಟ್ಟಿಯವರು "ಸ್ತ್ರೀವಾದಿ

ಧ್ವನಿಯ ಮೊಟ್ಟಮೊದಲ ಅಧಿಕೃತ ದನಿ ಶೈಲಜಾ ಉಡಚಣ"[೨೦] ಎಂದು ಗುರುತಿಸಿದ್ದಾರೆ. ಉಡಚಣರವರು ಇದುವರೆಗೆ 'ಒಂದು ಗಳಿಗೆ,' 'ಕಾದು ನೋಡು,' 'ಸ್ವಗತ', 'ಕಪ್ಪು ನೆಲ ಸೋಕಿದ ಸೂರ್ಯ', 'ತುಂತುರು ಹನಿಗಳು', 'ನನ್ನಂಥವರು', 'ಕೇಳು ಮಗ', ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರ ಮೊದಲ ಪ್ರಕಟಿತ ಮಹತ್ವದ ಕವನ ಸಂಕಲನ 'ಒಂದು ಗಳಿಗೆ'. ಇದರ ಮೂಲಕ ಶೈಲಜಾ ಅವರು ಮಹಿಳೆಯರ ಅಧಿಕೃತ, ಸ್ವತಂತ್ರ ಧ್ವನಿಯನ್ನು ಗಟ್ಟಿಯಾಗಿ ಹೊರಡಿಸಿದರು.

ಕವಯತ್ರಿ ತಮ್ಮ ಕವಿತೆಗಳ ಮೂಲಕ ಘನತೆ-ಗೌರವವನ್ನು ಅಪೇಕ್ಷಿಸುತ್ತಾರೆ. ಅಲ್ಲದೆ ತನ್ನತನವನ್ನು ವೃದ್ಧಿಸಿಕೊಂಡು ಆ ಮೂಲಕ ಅಸ್ತಿತ್ವ ಕಂಡುಕೊಳ್ಳುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಇದಕ್ಕೆ ಅವರ 'ಚುಟುಕು' ಕವಿತೆ ಸಾಕ್ಷಿಯಾಗಿದೆ.

"ಅಂದು ಇತ್ತು। ಹಲವರ ತುತ್ತನುಂಡು। ತೃಪ್ತಿಗೊಳ್ಳುವ ಮನಸು
ಇಂದು ಬೆಳೆದು।
ನನಗೆ ನಾನೆ ನಿರ್ಮಿಸಬೇಕು
ನನ್ನ ಲೋಕದ ಕನಸು"[೨೧]

ಎಂದು ತನ್ನ ಬದುಕನ್ನು ತಾನೇ ಕಟ್ಟಿಕೊಳ್ಳುವ ಕನಸು ಕಾಣುತ್ತಾರೆ. ಅದನ್ನು ನನಸಾಗಿಸಲು ದಾಪುಗಾಲಿಡುತ್ತಾರೆ.

'ಅಮ್ಮನ ಗುಡ್ಡ' ಕವನ ಸಂಕಲನದ ಮೂಲಕ ಕನ್ನಡ ಕಾವ್ಯ ಲೋಕದಲ್ಲಿ ವಿನೂತನ ಸಂವೇದನೆಗಳನ್ನು ಚಿತ್ರಿಸಿದ ಕವಯತ್ರಿ ಚ. ಸರ್ವಮಂಗಳ. ಈ ಹಿನ್ನೆಲೆಯಲ್ಲಿ ನೋಡಿದಾಗ ಅವರ 'ಭಂಡರು', 'ಅವನು ಬಸವ' ಕವಿತೆಗಳು ಗಮನಸೆಳೆಯುತ್ತವೆ. ಇಲ್ಲಿ ಮಹಿಳೆಯನ್ನು ಮನೆಯ ಬಂಧನದಲ್ಲಿಟ್ಟು, ಅವಳನ್ನು ಶೋಷಿಸುವುದನ್ನು ಹೇಳುತ್ತಾರೆ.

---

[೨೦] ಮರ್‍ಯಾದೆಯ ಮುಸುಕಿನಲಿ – ಹೇಮಾ ಪಟ್ಟಣಶೆಟ್ಟಿ – ಪುಟ – ೫೭
[೨೧] ಚುಟುಕು – ಶೈಲಜಾ ಉಡಚಣ – ಪುಟ – ೧೮

“ಪುಟ್ಟ ಪುಟ್ಟ ಹೆಜ್ಜೆಯಿಟ್ಟು
ಕಾಲಿಟ್ಟಾಗ ಶಾಲೆಯಲಿ ಕಲಿತೆ
ಅವನು ಬಸವ ಅವಳು ಕಮಲ
ಬಸವ ಅಪ್ಪನೊಂದಿಗೆ ಮಾಡುವ ತೋಟದ ಕೆಲಸ
ಕಮಲ ಅಮ್ಮನೊಂದಿಗೆ ಮಾಡುವಳು ಅಡಿಗೆ ಕೆಲಸ
ಕಮಲ ಒಲೆ ಊದುವಳು ಕುಳಿತು
ಬಸವ ಗಿಡಕ್ಕೆ ನೀರ ಹುಯ್ಯುವ
ನಿಂತು
ಕಮಲ ಕುಳಿತು ಮಾಡುವುದನ್ನು
ನಿಂತು ಮಾಡುವ ಬಸವ........”[೨೨]

ಹೆಣ್ಣು ಮಗಳಿಗೆ ಮನೆಯಲ್ಲಿ ಯಾವ ರೀತಿಯ ಕಟ್ಟು ನಿಟ್ಟಿನ ಪಾಠವನ್ನು ಹೇಳಿಕೊಡುತ್ತಾರೆ ಎಂಬುದನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ.

ಅಧ್ಯಯನ, ಅಧ್ಯಾಪನ, ಬಂಡಾಯ ಸಾಹಿತ್ಯ-ಸಂಘಟನೆ, ಮಹಿಳಾ ಸಾಹಿತ್ಯ ಹೀಗೆ ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಂಡಿರುವ ನಮ್ಮ ನಡುವಿನ ಅಪರೂಪದ ಕವಯತ್ರಿ ಸುಕನ್ಯಾ ಮಾರುತಿ. ಶೋಷಿತ ಮಹಿಳೆಯ ದನಿಯಾದ ಅವರ ಕಾವ್ಯ ವೈಯಕ್ತಿಕ ನೆಲೆಯಲ್ಲಿ ನಿಲ್ಲದೆ, ಸಮಷ್ಟಿ ಪ್ರಜ್ಞೆಯನ್ನು ಮೆರೆಯುತ್ತದೆ. ಅವರು ಇದುವರೆಗೆ ‘ಪರಿಸರದಲ್ಲಿ’ ‘ಪಂಚಾಗ್ನಿಯ ಮಧ್ಯ’ ‘ನಾನು ನನ್ನವರು’, ‘ತಾಜ ಮಹಲಿನ ಹಾಡು’ ‘ಬಿಂಬದೊಳಗಣ ಮಾತು’ ಮೊದಲಾದ ಕವನಸಂಕಲನಗಳನ್ನು ಪ್ರಕಟಿಸಿದ್ದಾರೆ. ‘ಬಿದ್ದವಳು’, ‘ಕೆಳಗೇರಿಗಳಿಗೆ’ ಕವಿತೆಯಲ್ಲಿ ತನ್ನನ್ನು ತಾನು ಶೋಧಿಸಿಕೊಳ್ಳುವ, ವಿಷಮ ಪರಿಸ್ಥಿತಿಗೆ ಅಸಹನೆಯಿಂದ ಪ್ರತಿಕ್ರಿಯಿಸುವುದನ್ನು ಕಾಣುತ್ತೇವೆ.

ಜಗದ ನೋವನ್ನು ತನ್ನ ನೋವೆಂದೇ ಭಾವಿಸಿ, ಅದಕ್ಕೆ ಮಿಡಿವ-ತುಡಿವ ಕವಯತ್ರಿ-ಲೇಖಕಿ-ಹೋರಾಟಗಾರ್ತಿ ದು. ಸರಸ್ವತಿ. ದಲಿತರ-ಶೋಷಿತರ-ವೇಶ್ಯೆಯರ-ಆದಿವಾಸಿಗಳ ಪರವಾಗಿ ಗಟ್ಟಿದನಿಯಲ್ಲಿ ಪ್ರತಿಕ್ರಿಯಿಸುವ ಅವರು ಇದುವರೆಗೆ ‘ಹೆಣೆದ ಜೇಡನಂತೆ’, ‘ಜೀವ ಸಂಪಿಗೆ’ ಕಾವ್ಯ ಕೃತಿಗಳನ್ನು ರಚಿಸಿದ್ದು, ಕಾವ್ಯವೆಂದರೆ ಅದು ಹೋರಾಟದ ಹಾದಿ ಎಂದು ಭಾವಿಸಿದವರು. ಅವರು ತಮ್ಮ ಒಂದು ಕವಿತೆಯಲ್ಲಿ ತಾಯ್ನೆಲದ ಬಗ್ಗೆ ಕಚ್ಚಾಡುವ ಕಪಟ ಪ್ರೀತಿ. ಡಾಂಬಿಕ ಭಕ್ತಿ ತೋರುವವರ ವಿರುದ್ಧ ಹೀಗೆ ಕಿಡಿ ಕಾರುತ್ತಾರೆ.

[೨೨] ಅಮ್ಮನ ಗುಡ್ಡ - ಚ. ಸರ್ವಮಂಗಳ (ಅವನು ಬಸವ) - ಪುಟ-೨೨

“ನೆಲವ ತಾಯೆಂದರೆ ಪರವಾಗಿಲ್ಲ ಬಿಡಿ
ತಾಯೆಂದು ಇರಿವ ತ್ರಿಶೂಲ ಸುಡುವ
ಬಂದೂಕನ್ಯಾಕೆ ತೊಡಿಸುವಿರಿ
ತನ್ನದು ಪರದೆಂಬುದೇ ಇಲ್ಲದೆ
ಒಂದರೊಳಗೆಲ್ಲ ಬಂದರೊಳಗೊಂದೆಂದು
ತಿರುಗುವ ಅವಳಿಗ್ಯಾಕೆ ಗಡಿ ಕಾವಲುಪಡೆ”[೨೩]

ಎಂದು ತಾಯಿ ನೆಲಕ್ಕೆ ಯಾವುದೇ ರೀತಿಯ ಗಡಿ-ರೇಖೆಗಳ ಕಟ್ಟಳೆಯನ್ನು ಹಾಕದೆ, ಕಾಲ-ದೇಶವನ್ನು ಮೀರುವ ವಿಶ್ವ ವಿಶಾಲ ಮನೋಭಾವವನ್ನು ಮನುಷ್ಯರಾದ ನಾವು ತಾಳಬೇಕು. ಆ ಮೂಲಕ ನಾಡು-ನುಡಿಯನ್ನು ಪ್ರೀತಿ ಗೌರವದಿಂದ ಕಾಣಬೇಕೆಂದು ಮನುಷ್ಯ ಪ್ರೀತಿಯನ್ನು ಸಾರುತ್ತಾರೆ. ಹೆಣ್ಣನ್ನು ಕೀಳಾಗಿ ಕಾಣುವ, ಕೇವಲ ಭೋಗ ವಸ್ತುವನ್ನಾಗಿ ಪರಿಭಾವಿಸುವ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಸ. ಉಷಾ ಅವರು ತಮ್ಮ ಕವಿತೆಗಳ ಮೂಲಕ ತೀಕ್ಷ್ಣವಾಗಿ ಪ್ರತಿಕ್ರಿಯೆಸುತ್ತಾರೆ.

ಮಹಿಳಾ ಸಂವೇದನೆಯನ್ನು ಸೂಕ್ಷ್ಮವಾಗಿ ಚಿತ್ರಿಸುವ ಕವಯತ್ರಿ ಶಶಿಕಲಾ ವೀರಯ್ಯಸ್ವಾಮಿ. ‘ಗುಬ್ಬಿ ಮನೆ’, ‘ಪ್ರಶ್ನೆ’, ‘ಜೀವ ಸಾವುಗಳ ನಡುವೆ’, ‘ಹೆಂಗ ಹೇಳಲೇ ಗೆಳತಿ’, ‘ಬಟ್ಟ ಬಯಲಲಿ ನಿಂತು’, ‘ಮಧ್ಯಂತರದ ಗದ್ಯಗೀತೆ’ ಎಂಬ ಕವನ ಸಂಕಲನ ಪ್ರಕಟಿಸಿದ್ದು, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ತನ್ನನ್ನು ತಾನು ಹುಡುಕುತ್ತ, ಅರಿಯುತ್ತ, ಮುಖಾ-ಮುಖಿಯಾಗುವುದನ್ನು ‘ಕವಿತೆ ಮತ್ತು ನಾವು’ ಕವಿತೆಯಲ್ಲಿ ಕಾಣುತ್ತೇವೆ.

‘ಹುಡುಗಿ ಪದ್ಯ ಬರೆಯುತ್ತಾಳೆ’ ಕವಿತೆಯಲ್ಲಿ ಕಮಲಾ ಹೆಮ್ಮಿಗೆಯವರು ಬರೆಯುವ ಭಯ, ಹೆಣ್ಣನ್ನು ಹೇಗೆ ಕಳವಳಕ್ಕೆ, ಆತಂಕಕ್ಕೆ, ಈಡು ಮಾಡುತ್ತದೆ ಎಂಬುವುದನ್ನು ಚಿತ್ರಿಸುತ್ತಾರೆ.

ಬರೆಯಬೇಕೆನ್ನಿಸುವುದು ಒಂದು ಭೀತಿ, ಹಿಂಸೆಯ ಸ್ಥಿತಿಯಾಗಿದ್ದು, ಬರವಣಿಗೆ ಎಂಬುದು ಹಿಂಸಾಜನ್ಯವಾದುದೆಂದು ಸಾರ್ವತ್ರೀಕರಿಸುತ್ತಾರೆ. ‘ಅಮೃತಮತಿಯ ಸ್ವಗತ’, ‘ಗಾಜುಗೊಳ’, ‘ಲೋಹದ ಕಣ್ಣು’ ಮೊದಲಾದ ಕವನ ಸಂಕಲನಗಳ ಮೂಲಕ ಮಹಿಳೆಯ ಮನಸ್ಸಿನ, ತಳಮಳ, ಆತಂಕ,ಕಾಮ, ಕ್ರೋಧದಂತಹ ಅತೃಪ್ತ ಸೂಕ್ಷ್ಮ ಭಾವಗಳನ್ನು ಕಾವ್ಯವಾಗಿಸುವ ಕವಯತ್ರಿ ಎಚ್.ಎಲ್. ಪುಷ್ಪ. ಉಸಿರು ಕಳಕೊಂಡ ಕವಿತೆಗಳು ಹಾಗೂ ಅರ್ಥ ಕಳಕೊಂಡ ಮಾತುಗಳ ಬಗ್ಗೆ ಗಂಭೀರವಾಗಿ ಆಗೀಗ ತಮ್ಮ ಆತಂಕಗಳನ್ನ ಕಾವ್ಯದ ಮೂಲಕ

[೨೩] ತಾಯ್ನೆಲ - ದು. ಸರಸ್ವತಿ - ಪುಟ - ೧೮

ಅನಾವರಣಗೊಳಿಸುತ್ತಾರೆ. ಇದಕ್ಕೆ ಅವರ 'ಅಮೃತಮತಿಯ ಸ್ವಗತ' ಕವಿತೆ ಸಾಕ್ಷಿಯಾಗಿದೆ. ಇಲ್ಲಿ 'ಅಮೃತಮತಿಯ' ಅತೃಪ್ತ ಭಾವಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ತಮ್ಮ ಕಾವ್ಯ ಕೃತಿಗಳಲ್ಲಿ ಬಂಡಾಯದ ಭಾವಗಳನ್ನು ಪ್ರಜ್ವಲಿಸುವ ಗಟ್ಟಿ ದನಿಯ, ದಿಟ್ಟ ನಿಲುವಿನ ಕವಯತ್ರಿ, ಹೋರಾಗಾರ್ತಿ ಮಲ್ಲಿಕಾ ಘಂಟಿ ಅವರು ಪುರುಷ ಪ್ರಧಾನ ವ್ಯವಸ್ಥೆಗೆ ಸೂಕ್ಷ್ಮವಾಗಿ ಪ್ರತಿಕ್ರಿಯೆಸುತ್ತ ಹೆಣ್ಣನ್ನು ಕೇವಲ ಭೋಗದ ವಸ್ತುವನ್ನಾಗಿ ಪರಿಭಾವಿಸಿ ಅವಳನ್ನು ಸ್ವೇಚ್ಛೆಯಾಗಿ ಬಳಸಿಕೊಂಡದನ್ನು ಪ್ರತಿಭಟನಾತ್ಮಕವಾಗಿ ಧ್ವನಿಸಿದ್ದನ್ನು ಕಾಣುತ್ತೇವೆ. ಇದಕ್ಕೆ ಅವರ 'ಹೆಣ್ಣು' ಕವಿತೆ ಸಾಕ್ಷಿಯಾಗಿದೆ. ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣನ್ನು ಒಮ್ಮೆ 'ದೇವಿ' ಎಂದು, ಇನ್ನೊಮ್ಮೆ 'ರಾಕ್ಷಸಿ' ಎಂದು ಕಂಡು ಬಣ್ಣಿಸಿದ್ದನ್ನು, ದೂಷಿಸಿದನ್ನು ಕಟುವಾಗಿ ಖಂಡಿಸಿದ್ದಾರೆ. ಅಲ್ಲದೇ 'ನಮ್ಮದಲ್ಲ ಧ್ವಜವಿದು' ಕವಿತೆಯಲ್ಲಿ ತಮ್ಮ ಮಗನಿಗೆ ಕರೆ ನೀಡುವ ಮೂಲಕ ವಾಸ್ತವತೆಯತ್ತ ಮುಖಾಮುಖಿಯಾಗುತ್ತಾರೆ.

ಇಡೀ ಕನ್ನಡ ಕಾವ್ಯ ಪರಂಪರೆಯಲ್ಲಿ ಮುಸ್ಲಿಂ ಮಹಿಳೆಯರು ಕಾವ್ಯ ಬರೆದದ್ದೇ ಅಪರೂಪ. ಶ್ರೀಮತಿ ಡಿ.ಬಿ. ರಜಿಯಾ ಅವರೇ ಮೊದಲ ಮುಸ್ಲಿಂ ಕವಯತ್ರಿ ಎಂದು ಗುರುತಿಸಲಾಗುತ್ತದೆ. ಇವರೊಟ್ಟಿಗೆ ಬಾನು ಮುಷ್ತಾಕ, ಕೆ. ಷರೀಫಾ, ರಜಿಯಾ ಬಳಬಟ್ಟಿ ಮೊದಲಾದವರು ಕಾವ್ಯ ಕೃಷಿಯಲ್ಲಿ ತೊಡಗಿದ್ದಾರೆ. 'ನೂರಿನ್‌ಳ ಅಂತರಂಗ' ಮೊದಲಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದ ಕೆ. ಷರೀಫಾರವರು ಕೇವಲ ಸ್ತ್ರೀಪರ ದನಿ ಮಾತ್ರವಲ್ಲ ಮಾರ್ಕ್ಸವಾದಿಯು ಆಗಿದ್ದಾರೆ.

ತಾಜಮಹಲು ಕೇವಲ ಪ್ರೀತಿ ಪ್ರೇಮದ ಸಂಕೇತ ಮಾತ್ರವಲ್ಲ; ಅದೊಂದು ಹೆಣ್ಣಿನ ಶೋಷಣೆಯ ಪ್ರತೀಕವಾಗಿದೆ ಎಂದು ಚಿತ್ರಿಸಿದ್ದಾರೆ.ಮಹಿಳೆಯೋರ್ವಳು ದೈನಂದಿನ ಜೀವನದಲ್ಲಿ ಎದುರಿಸುವ ಸಮಸ್ಯೆ ಹಾಗೂ ಮಾನಸಿಕ ತುಮುಲಗಳನ್ನು ಸಶಕ್ತವಾಗಿ ಚಿತ್ರಿಸಿದ ಕವಯತ್ರಿ ಪ್ರತಿಭಾ ನಂದಕುಮಾರ. ತಮ್ಮ ಮೊದಲ ಕೃತಿ 'ನಾವು ಹುಡುಗಿಯರೆ ಹೀಗೆ' ಎಂಬ ಕವನ ಸಂಕಲನದ ಮೂಲಕ ಮಹಿಳಾ ಲೋಕದ ಸೂಕ್ಷ್ಮ ಎಳೆಗಳನ್ನು ನವಿರು ನವಿರಾಗಿ ಬಿಡಿಸಿಟ್ಟಿದ್ದನ್ನು ಕಾಣುತ್ತೇವೆ. 'ನಾವು ಹುಡುಗಿಯರೆ ಹೀಗೆ' ಕವಿತೆ ವಾಚ್ಯವೆನಿಸಿದರೂ ಅದರಲ್ಲಿ ತೀಕ್ಷ್ಣ ಪ್ರತಿಕ್ರಿಯೆಯನ್ನು ಕಾಣುತ್ತೇವೆ.

"ಏನೇನೋ ವಟಗುಟ್ಟಿದರೂ
ಹೇಳಬೇಕಾದ್ದನ್ನು ಹೇಳದೆ
ಏನೇನೆಲ್ಲಾ ಅನುಭವಿಸಿ ಸಾಯುತ್ತೇವೆ
ಜುಮ್ಮೆನ್ನಿಸುವ ಆಲೋಚನೆಗಳನ್ನೆಲ್ಲಾ
ಹಾಗೇ ಡಬ್ಬಿಯೊಳಗೆ ಹಿಟ್ಟು ಒತ್ತಿದಂತೆ
ಒತ್ತಿ ಒತ್ತಿ ಗಟ್ಟಿಮಾಡುತ್ತೇವೆ"[೨೪]

ಅಡುಗೆ ಮನೆಯ ಸಂಕೇತವಾಗಿ ಬರುವ ಹಿಟ್ಟಿನ ಡಬ್ಬಿ ಸ್ತ್ರೀಯ ಸಂಕುಚಿತ ಸಾಮಾಜಿಕ ಆವರಣವನ್ನು ಯಥಾವತ್ತಾಗಿ ಬಿಂಬಿಸುತ್ತದೆ.

ಅಲ್ಲದೆ ಸವಿತಾ ನಾಗಭೂಷಣರ 'ಸ್ಥಿತಿ', ವಿಜಯಾ ದಬ್ಬೆಯವರ 'ಕೋರಿಕೆ', ಹೇಮಾ ಪಟ್ಟಣಶೆಟ್ಟಿಯವರ 'ಹಸುಮಗಳ ಹಂಬಲ', ಮಮತಾ ಜಿ ಸಾಗರವರ 'ಕಡಲ ನವಿಲಿನ ಹೆಜ್ಜೆ', ಡಾ. ಪದ್ಮಾ ಶೇಖರರ 'ನಾನು ನಾನ್ನಷ್ಟೆ', ವೈದೇಹಿಯವರ 'ತಿಳಿದವರೇ ಹೇಳಿ', ರಜಿಯಾ ಬಳಬಟ್ಟಿಯವರ 'ಮೆಹಂದಿ', ರಂಜನಾ ನಾಯಕರವರ 'ಕೈದಿಗಳು', ಮಾಲತಿ ಪಟ್ಟಣಶೆಟ್ಟಿಯವರ 'ಮುಗಿಯದ ಕಥೆ', ಎಂ.ಆರ್. ಕಮಲಾ ಅವರ 'ಶಕುಂತಲೋಪಾಖ್ಯಾನ', ಎಚ್.ಎಸ್. ಮುಕ್ತಾಯಕ್ಕರ 'ನಾನು ಮತ್ತು ಅವನು', ವಿಜಯಶ್ರೀ ಸಬರದವರ 'ದೂರವಾದವನು', ವಿದ್ಯಾ ಕುಂದರಗಿ ಅವರ 'ನನ್ನೊಳಗಿನ ಕವಿತೆ', ರಾಜೇಶ್ವರಿ ಎನ್.ರವರ 'ಹಸಿ ಖಜಾನೆ', ಡಾ. ವಿನಯಾರವರ 'ಬಾಯಾರಿಕೆ' ಹೀಗೆ ಮೊದಲಾದ ಕವಯತ್ರಿಯವರ ಕವಿತಾ-ಸಂಕಲನಗಳಲ್ಲಿ ಮಹಿಳೆಯರ ಕನಸು, ಕಲ್ಪನೆ, ನೋವು, ಅಸಹಾಯಕತೆ, ಅಸಹನೆ, ಪ್ರತಿಭಟನೆ, ಕಾಮ, ಅತೃಪ್ತಿ, ಪ್ರೀತಿ, ಪ್ರಣಯದಂತಹ ವಿಷಯಗಳನ್ನು ಒಳಗೊಂಡಿದ್ದು ಅದನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ. ಈ ಮೂಲಕ ಮಹಿಳೆಯರ ಒಟ್ಟು ಅಸ್ತಿತ್ವವನ್ನು ಇಲ್ಲಿ ನಾವು ಕಾಣಬಹುದಾಗಿದೆ.

ಅದಲ್ಲದೆ ಕನ್ನಡ ದಲಿತ-ಬಂಡಾಯ ಕಾವ್ಯ ಸಾಹಿತ್ಯವನ್ನು ಕುರಿತು ನಿರಂತರವಾಗಿ ಅಂದಿನಿಂದ ಇಂದಿನವರೆಗೆ ಸಂಶೋಧನೆ-ವಿಮರ್ಶಾ ಅಧ್ಯಯನಗಳು ನಡೆಯುತ್ತಲೇ ಇವೆ. ಈ ಹಿನ್ನೆಲೆಯಲ್ಲಿ ಕೆಲವು ಮಹತ್ವದ ಕೃತಿಗಳು ಕೂಡಾ ಬಂದಿದ್ದು, ಅವುಗಳ ಸಮೀಕ್ಷೆಯನ್ನು ಇಲ್ಲಿ ಕೈಗೊಳ್ಳುವುದು ಅಗತ್ಯವೆಂದು ತೋರುತ್ತದೆ. ಆ ಕೃತಿಗಳು ಹೀಗಿವೆ: ಪ್ರೊ. ಬರಗೂರು ರಾಮಚಂದ್ರಪ್ಪನವರ 'ಬಂಡಾಯ ಕಾವ್ಯ', 'ಬಂಡಾಯ ಕಾವ್ಯ ಮೀಮಾಂಸೆ', ಡಾ. ಸಿ. ವೀರಣ್ಣವರ 'ಕನ್ನಡಕಾವ್ಯ ಕಂಡ ಹೆಣ್ಣು', ಸರಜೂ ಕಾಟ್ಕರ್[ಸಂ] ಅವರ 'ಕನ್ನಡ ಬಂಡಾಯ ಸಾಹಿತ್ಯ', ಡಾ. ಸರ್ವ ಮಂಗಳ ಕುದುರಿಯವರ 'ಆಧುನಿಕ ಕನ್ನಡ ಸಾಹಿತ್ಯದಲ್ಲಿ

---

[೨೪] ನಾವು ಹುಡುಗಿಯರೇ ಹೀಗೆ - ಪ್ರತಿಭಾ ನಂದಕುಮಾರ - ಪುಟ-೩೮

ಅಕ್ಕಮಹಾದೇವಿ', ಡಾ. ಪ್ರಹ್ಲಾದ ಅಗಸನಕಟ್ಟೆಯವರ 'ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು', ಗಂಗಾರಾಂ ಚಂಡಾಳವರ 'ಬಂಡಾಯ ಕಾವ್ಯ', ಡಾ. ಬಸವರಾಜ ಸಬರದರವರ 'ಬಂಡಾಯ ಕಾವ್ಯ ಮತ್ತು ಜನಪದ', ಲೋಕೇಶ ಅಗಸನಕಟ್ಟೆಯವರ 'ಕನ್ನಡ ಕಾವ್ಯ ಸಮಾಜ ಸಂಸ್ಕೃತಿ', ಕೆ.ಬಿ. ಸಿದ್ಧಯ್ಯ ಅವರ [ಸಂ] 'ದಲಿತ ಕಾವ್ಯ', ಡಾ. ಸೂರ್ಯಕಾಂತ ಸುಜ್ಯಾತ್‌ರವರ 'ಹೈದ್ರಾಬಾದ ಕರ್ನಾಟಕ ದಲಿತ ಕಾವ್ಯ', ಡಾ. ಅರ್ಜುನ ಗೊಳಸಂಗಿಯವರ [ಸಂ] 'ದಲಿತಜ್ಞ', 'ಕಾವ್ಯ ಮಂಥನ', 'ಹುಸಿ ಇಲ್ಲದ ಗೂಡಿನೊಳಗೆ', ಡಾ.ಅರ್ಜುನ ಗೊಳಸಂಗಿ ಮತ್ತು ಡಾ. ಸದಾಶಿವ ದೊಡಮನಿಯವರ [ಸಂ] 'ದಲಿತ ಸಾಹಿತ್ಯ ಸಂಚಯ', ಡಾ. ಮ.ನ. ಜವರಯ್ಯವರ 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ', ಡಾ.ಎಸ್.ಡಿ. ಶಶಿಕಲಾರವರ 'ಪಗಡಿಯ ಕೌದಿಯಲಿ ದೀಪಗಳು ಬೆಳಗಿ', ಡಾ. ರತ್ನಮ್ಮ ಬಾಳಪ್ಪನವರ 'ಸ್ವಾತಂತ್ರೋತ್ತರ ಕನ್ನಡ ಕಾವ್ಯದಲ್ಲಿ ಸ್ತ್ರೀ ಸಂವೇದನೆಗಳು', ಡಾ. ಸರೋಜಿನಿ ಮಹಿಷಿಯವರ 'ಕರ್ನಾಟಕ ಕವಯತ್ರಿಯವರು', ಗಾಯಿತ್ರಿ ಎನ್. ಅವರ 'ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿ ವಿಕಾಸ ಮತ್ತು ಸ್ತ್ರೀ', ಹೇಮಾ ಪಟ್ಟಣಶೆಟ್ಟಿಯವರ 'ಆಧುನಿಕ ಮಹಿಳಾ ಕಾವ್ಯ', ವಿಜಯಾ ದಬ್ಬೆಯವರ 'ಮಹಿಳೆ ಮತ್ತು ಸಮಾಜ ಸ್ತ್ರೀವಾದಿ ಮತ್ತು ಸ್ತ್ರೀವಾದಿ ವಿಮರ್ಶಾ' ಮೊದಲಾದ ಕೃತಿಗಳು ಕನ್ನಡ ದಲಿತ ಬಂಡಾಯ ಕಾವ್ಯ ಸಾಹಿತ್ಯದ ಕ್ಷಿತಿಜವನ್ನು ವಿಸ್ತರಿಸುವ ಮೂಲಕ ಹೊಸ ಹೊಸ ಚಿಂತನೆ-ಚರ್ಚೆಗೆ ದಾರಿ ಮಾಡಿಕೊಟ್ಟಿವೆ. ಇವು ದಲಿತ-ಬಂಡಾಯ ಮಹಿಳಾ ಕಾವ್ಯದಲ್ಲಿ ಸ್ತ್ರೀ ಅಸ್ತಿತ್ವದ ನೆಲೆಯನ್ನು ಗುರುತಿಸಲು ಪೂರಕವಾದ ವಿಷಯಗಳನ್ನು ಒದಗಿಸುವ, ಆಲೋಚಿಸುವ ಮಾರ್ಗಕ್ಕೆ ಸಾಮಾಗ್ರಿಯಾಗಿದ್ದು ಮಹತ್ವದ್ದಾಗಿವೆ.

ಹೀಗೆ ಪ್ರಸ್ತುತ ಅಧ್ಯಾಯದಲ್ಲಿ ದಲಿತ ಕಾವ್ಯ-ಬಂಡಾಯ ಕಾವ್ಯ ಹಾಗೂ ಇವೆರಡರ ಪ್ರಧಾನ ತೊರೆಯಾಗಿ ಹರಿದು ಬಂದ ಮಹಿಳಾ ಕಾವ್ಯದಲ್ಲಿ ಕವಿ-ಕವಯತ್ರಿಯರು ಅಭಿವ್ಯಕ್ತಿಸಿದ ಮಹಿಳೆಯರ ಅಸ್ಥಿತ್ವದ ಸೂಕ್ಷ್ಮ ಎಳೆಗಳನ್ನು ಇದುವರೆಗೆ ಬಂದ ಕಾವ್ಯ ಕೃತಿಗಳನ್ನು ಅವಲೋಕಿಸಿ ಒಂದು ಸಮೀಕ್ಷೆಯನ್ನು ಕೈಗೊಂಡಿದ್ದು, ಮಹಿಳೆಯರ ಅಸ್ತಿತ್ವದ ನೆಲೆಗೆ ಇದೊಂದು ಕೈಗನ್ನಡಿಯಾಗಬಹುದು ಎಂದು ಭಾವಿಸಲಾಗಿದೆ.

# ಕನ್ನಡ ಸಾಹಿತ್ಯ ಅಭಿವ್ಯಕ್ತಿಸಿದ ಮಹಿಳಾ ಅಸ್ತಿತ್ವದ ತಾತ್ವಿಕ ನೆಲೆಗಳು

ಎರಡು ಸಾವಿರದ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವು ವಿಶಿಷ್ಟವೂ ವಿಸ್ತೃತವೂ ಆದುದಾಗಿದೆ. ಶಾಸನ ಕಾಲ-ಸಾಹಿತ್ಯದಿಂದ ಹಿಡಿದು, ಇಂದಿನ ಆಧುನಿಕ ಸಾಹಿತ್ಯದವರೆಗೆ ಅವಲೋಕಿಸಿದಾಗ ಈ ಮಾತು ಸತ್ಯವೆಂದೆನಿಸದಿರದು. ಕನ್ನಡದ ಆದಿಕವಿ ಪಂಪ, ಪೊನ್ನ, ರನ್ನರಿಂದ ಮೊದಲುಗೊಂಡು, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ, ಚೆನ್ನಬಸವಣ್ಣ, ಸೂಳೆ ಸಂಕವ್ವೆ, ಆಯ್ದಕ್ಕಿ ಲಕ್ಕಮ್ಮ, ಕನಕದಾಸ, ಪುರಂದರದಾಸ, ಹರಿಹರ, ರಾಘವಾಂಕ, ಚಾಮರಸ, ಹೆಳವನಕಟ್ಟೆ ಗಿರಿಯಮ್ಮ, ಕುಮಾರವ್ಯಾಸ, ಲಕ್ಷ್ಮೀಶ, ಸಂಚಿ ಹೊನ್ನಮ್ಮ, ಮುದ್ದಣ, ಹೊಸಗನ್ನಡದ ಬೇಂದ್ರೆ, ಮಧುರಚೆನ್ನ, ಕುವೆಂಪು, ಕೆ.ಎಸ್. ನರಸಿಂಹಸ್ವಾಮಿ, ಗೋವಿಂದ ಪೈ, ಎಂ.ಆರ್. ಶ್ರೀನಿವಾಸಮೂರ್ತಿ, ಪಿ. ಲಂಕೇಶ, ಎಚ್.ಎಸ್. ಶಿವಪ್ರಕಾಶ, ಚಂದ್ರಶೇಖರ ಕಂಬಾರ, ಡಾ. ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಅರವಿಂದ ಮಾಲಗತ್ತಿ, ಮ.ನ. ಜವರಯ್ಯ, ಬರಗೂರು ರಾಮಚಂದ್ರಪ್ಪ, ಚಂದ್ರಶೇಖರ ಪಾಟೀಲ, ಚೆನ್ನಣ್ಣ ವಾಲೀಕಾರ, ಸತ್ಯಾನಂದ ಪಾತ್ರೋಟ, ವೈದೇಹಿ, ವಿಜಯಾ ದಬ್ಬೆ, ದು. ಸರಸ್ವತಿ, ಡಿ.ಬಿ. ರಜಿಯಾ, ಕೆ. ಷರೀಫಾ, ಸವಿತಾ ನಾಗಭೂಷಣ, ಎಚ್. ಎಲ್. ಪುಷ್ಪ, ರಾಜೇಶ್ವರಿ ಎನ್ ಮೊದಲಾದ ಕವಿ-ಲೇಖಕರು ಆಯಾ ಕಾಲಘಟ್ಟದ ತತ್ವ-ಆದರ್ಶ-ಕನಸು-ಕಲ್ಪನೆ ವೈರುಧ್ಯಗಳನ್ನು ತಮ್ಮ ಕಾವ್ಯ-ಕೃತಿಗಳಲ್ಲಿ ಕಟ್ಟಿ-ಕೊಟ್ಟಿದ್ದಾರೆ. ಅದರಲ್ಲೂ ತುಂಬಾ ಮುಖ್ಯವಾದ ಅಂಶವೆಂದರೆ, ಮಹಿಳೆಯನ್ನು ಕನ್ನಡ ಸಾಹಿತ್ಯದಲ್ಲಿ ಕವಿ-ಲೇಖಕರು ವ್ಯಕ್ತಿ, ಶಕ್ತಿ, ಪ್ರಕೃತಿ, ಜೀವ ಸಂಬಂಧಿ ಒಡನಾಡಿ, ಮೌಲ್ಯ, ಸಂಸ್ಕೃತಿ ಚಿಂತನೆಯ ಭಾಗವಾಗಿ ಕಂಡು, ಅವಳ ಅಸ್ತಿತ್ವವನ್ನು ತಾತ್ವಿಕ ನೆಲೆಗಳಲ್ಲಿ ಅಭಿವ್ಯಕ್ತಿಸಿದ್ದು, ವಿಶಿಷ್ಟವೂ ವಿನೂತನವೂ ಆದುದಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಅದರ ಒಂದು ವಿವೇಚನೆಯನ್ನು ಪೀಠಿಕಾ ರೂಪದಲ್ಲಿ ನಿರೂಪಿಸಲಾಗಿದೆ.

'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬ ಅರ್ಥ ಹೀನ ಮೌಢ್ಯಾಚರಣೆ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರು ಹಲವು ಬಗೆಯ ಶೋಷಣೆಗಳಿಗೆ ನಿರಂತರವಾಗಿ ಒಳಗಾಗುತ್ತಲೇ ಬಂದಿದ್ದಾರೆ. ಸತಿಸಹಗಮನ, ದೇವದಾಸಿಯಂತಹ ಅನಿಷ್ಟ ಪದ್ಧತಿಗಳು ಅವರನ್ನು ಜೀವಂತ ಶವವಾಗಿಸಿವೆ. ಭಾರತದ ಪ್ರಾಚೀನ ಮಹಾಕಾವ್ಯಗಳಾದ 'ರಾಮಾಯಣ'. 'ಮಹಾಭಾರತ'ಗಳು ಒಂದರ್ಥದಲ್ಲಿ ಗೋಳಿನ ಕಥೆಯೇ ಆಗಿವೆ. ಆದರೆ ಮಹಿಳೆ ಈ ಎಲ್ಲ

ಶೋಷಣೆಗಳನ್ನು ಮೆಟ್ಟಿನಿಂತು, ತನ್ನತನವನ್ನು ಮೆರೆದದ್ದು, ಸಮಾಜದ ಮುಖ್ಯವಾಹಿನಿಯಲ್ಲಿ ತನ್ನನ್ನು ಕಂಡುಕೊಳ್ಳಲು ಅವಳು ಮಾಡಿದ ಸ್ವ-ಹೋರಾಟ ಗಮನಾರ್ಹವಾದುದು. ಈ ಕುರಿತು ಡಾ. ಎಂ.ಎಸ್. ಶೇಖರವರು "ಹೆಣ್ಣು ಒಂದರ್ಥದಲ್ಲಿ ಜನಪದ ಇದ್ದಂಗೆ. ನಾಶದ ಪ್ರಶ್ನೆಯೇ ಇಲ್ಲ. ಎಲ್ಲ ಬಗೆಯ ಅಪಮಾನ ಶೋಷಣೆಗಳ ನಡುವೆಯೂ ಕೂಡಾ ನಿಸರ್ಗ ಸಹಜವಾದ ಚೈತನ್ಯದಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದಾಳೆ."[೧] ಎಂದು ಅಭಿಪ್ರಾಯಪಟ್ಟಿದ್ದು, ಔಚಿತ್ಯಪೂರ್ಣವಾಗಿದೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಅವಳ ಧಾರುಣ ಶೋಷಿತ ಬದುಕು ಮಾತ್ರವಲ್ಲ; ಅವಳ ಸಮೃದ್ಧ ಬದುಕಿನ ವಿಭಿನ್ನ ಮುಖಗಳು ಚಿತ್ರಿಸಿದ್ದು ವಿಶೇಷವಾಗಿದೆ.

ಪ್ರಾಚೀನ ಕಾಲದಲ್ಲಿ ಸ್ತ್ರೀಯರು ಉನ್ನತವಾದ ಸ್ಥಾನಮಾನಗಳನ್ನು ಹೊಂದಿದ್ದರು ಎಂಬುದಕ್ಕೆ ಗಾರ್ಗೆ, ಮೈತ್ರೇಯಿ ಮೊದಲಾದ ಮಹಿಳೆಯರು ವಿದ್ವಾಂಸರಾಗಿದ್ದರು ಎಂಬ ಸಂಗತಿ ಇತಿಹಾಸದಿಂದ ತಿಳಿದು ಬರುತ್ತದೆ. ನಮ್ಮ ಗ್ರಾಮೀಣ ಸಂಸ್ಕೃತಿಯ ತಾಯಿ ಬೇರಾದ ಜಾನಪದದಲ್ಲೂ ಮಹಿಳೆಯರ ವ್ಯಕ್ತಿತ್ವ-ವಿಶೇಷತೆಗಳು ಅಭಿವ್ಯಕ್ತಗೊಂಡಿರುವುದನ್ನು ಕಾಣುತ್ತೇವೆ. ಹಾಗೆ ನೋಡಿದರೆ ಜಾನಪದವನ್ನು ಹೆತ್ತತಾಯಿ ಮಹಿಳೆ ಎಂದರೆ ತಪ್ಪಾಗಲಾರದು. ಅಲ್ಲಿ ಅವಳನ್ನು ತಾಯಿ, ಮಗಳು, ಅಕ್ಕ, ತಂಗಿ, ಅತ್ತೆ, ಸೊಸೆ, ಗೆಳತಿ-ಇತ್ಯಾದಿ ರೂಪದಲ್ಲಿ ಕಂಡು ಅವಳ ಅಸ್ತಿತ್ವವನ್ನು ಅಭಿವ್ಯಕ್ತಿಸಲಾಗಿದೆ.

"ತಾಯವ್ವನ ಬಯಬ್ಯಾಡ ತಿಳಿಗೇಡಿ ನನ್ನ ತಮ್ಮ
ಬಾಳ ದಿನದಾಕಿ ಹಡೆದವ್ವ ಬೈದರ
ಬಾಳ ಮರಗ್ಯಾಳೋ ಮನದಾಗ"[೨]

ಎಂದು ಅಕ್ಕ ತಮ್ಮನಲ್ಲಿ ಪ್ರೀತಿಯಿಂದ ನಿವೇದಿಸಿಕೊಳ್ಳುತ್ತಾಳೆ. ಹಾಗೆ ನಿವೇದಿಸಿಕೊಳ್ಳುವ ಅಕ್ಕನ ಮಾತಿನ ಹಿಂದೆ ತಾಯಿಯ ಇಳಿವಯಸ್ಸು ಮತ್ತು ಅವಳ ಸೂಕ್ಷ್ಮ ಮನಸನ್ನು ಚಿತ್ರಿಸುವ ತಾತ್ಪರ್ಯವಿರುವುದನ್ನು ಕಾಣುತ್ತೇವೆ. ಹಾಗೆ ಇನ್ನೊಂದು ತ್ರಿಪದಿಯಲ್ಲಿ ಹೆಣ್ಣು ಮಕ್ಕಳು ಮನೆಗೆ ಪುಣ್ಯದ ಅಧಿದೇವತೆ ಎಂಬಂತೆ ನಿರೂಪಿಸಲಾಗಿದೆ. ಅದು ಹೀಗಿದೆ:

"ಹೆಣ್ಣು ಮಕ್ಕಳು ನಮಗೆ ಪುಣ್ಯದ ಫಲತಾಯಿ
ಅನ್ನಿಗರ ಮಗನು ನನ್ನ ಮನೆಗೆ। ಬರುವಂತ
ಹೆಣ್ಣು ಮಕ್ಕಳನು ಕೊಡು ಶಿವನೆ"[೩]

---

೧. ಸಂಪಾದಕೀಯ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಹಿಳಾ ಪರ ಕಾಳಜಿಗಳು - ಸಂ: ಡಾ. ಎಂ.ಎಸ್. ಶೇಖರ - ಪುಟ-೫

೨. ಗರತಿಯ ಹಾಡು - ಸಂ: ಸಿಂಪಿ ಲಿಂಗಣ್ಣ ಕಾಪಸೆ ರೇವಪ್ಪ - ಪುಟ-೨೮

೩ ಗರತಿಯ ಹಾಡು - ಸಂ: ಸಿಂಪಿ ಲಿಂಗಣ್ಣ ಕಾಪಸೆ ರೇವಪ್ಪ - ಪುಟ-೩೨

ಎಂದು ತಾಯಿಯೋರ್ವಳು ಹೆಣ್ಣು ಮಕ್ಕಳನ್ನು ಬೇಡುವಂತಹದ್ದು, ಮತ್ತು ಅವಳು ಮೌಲಿಕ ಗುಣ-ಸ್ವಭಾವವನ್ನು ಹೊಂದಿರಬೇಕೆಂದು, ಅಪೇಕ್ಷಿಸುವಂತಹದ್ದು ವಿಶಿಷ್ಟವಾಗಿದೆ.

"ಹಾಲುಂಡ ತವರೀಗಿ ಏನೆಂದು ಹಾಡಲಿ
ಹೊಳೆದಂಡೆಯಲಿರುವ ಕರಕೀಯ। ಕುಡಿಯಂಗ
ಹಬ್ಬಲಿ ಅವರ ರಸಬಳ್ಳಿ"[೪]

ಎನ್ನುವಲ್ಲಿ ಆ ಹೆಣ್ಣು ಮಗಳಿಗೆ ತವರು ಮನೆಯ ಬಗ್ಗೆ ಇರುವ ಅನನ್ಯ ಪ್ರೀತಿ, ಕಾಳಜಿ, ಕಳಕಳಿ ವ್ಯಕ್ತವಾಗಿದೆ. ಅದಕ್ಕಿಂತ ಮುಖ್ಯವಾಗಿ ಹೆಣ್ಣು ಮಗಳೋರ್ವಳ ಸಹಜ ಗುಣ-ಉದಾತ್ತತೆಯ ವ್ಯಕ್ತಿತ್ವದ ಇಲ್ಲಿ ಪರಿಣಾಮಕಾರಿಯಾಗಿ ಚಿತ್ರಿತಗೊಂಡಿದೆ.

ಯಾವುದೇ ಒಂದು ನಾಡಿನ, ರಾಷ್ಟ್ರದ ಸಾಹಿತ್ಯದ ಉದಯಕ್ಕೆ ಮೂಲವಾದ ಜಾನಪದ ಸಾಹಿತ್ಯದಲ್ಲಿ ಮಹಿಳೆಯ ವ್ಯಕ್ತಿತ್ವ-ವಿಶೇಷತೆಗಳ ವಿಭಿನ್ನ ಮುಖಗಳು ಚಿತ್ರಣಗೊಂಡಂತೆ, ನಂತರದ ಶಿಷ್ಟ ಸಾಹಿತ್ಯದಲ್ಲೂ ಅವಳನ್ನು ಸಮರ್ಥವಾಗಿ ಅಭಿವ್ಯಕ್ತಿಸಲಾಗಿದೆ, ಉಪಲಬ್ಧ ಕನ್ನಡದ ಮೊಟ್ಟಮೊದಲ ಗದ್ಯಕೃತಿ ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ' [ಕ್ರಿ.ಶ. ೯೫೦] ಹತ್ತೊಂಬತ್ತು ಜೈನ ಕಥೆಗಳನ್ನು ಒಳಗೊಂಡಿದ್ದು, ಅವು ಜೈನಧರ್ಮದ ಪ್ರಸಾರವನ್ನು ಶಕ್ಯಾನುಸಾರ ಮಾಡುತ್ತವೆ. ಇದರ ಜತೆಗೆ ಮಹಿಳೆಯೂ ಅಲ್ಲಿ ಸ್ಥಾನ ಪಡೆದಿದ್ದು; ಜಾಣ್ಮೆ, ಬುದ್ಧಿವಂತಿಕೆ, ಗಂಭೀರೆ, ಧೀಮಂತೆ, ಧರ್ಮಪರಿಪಾಲನೆ, ವ್ರತಾವಚರಣೆಗಳ ಪ್ರತಿನಿಧಿಯಾಗಿ ರೂಪುಗೊಂಡಿದ್ದಾಳೆ. ರಾಜಸತ್ತೆಯ ಕಾಲವಾಗಿದ್ದ ಆ ಸಂದರ್ಭದಲ್ಲಿ ರಾಜ ಪ್ರತ್ಯಕ್ಷ ದೇವನಾಗಿದ್ದ. ಮಹಿಳೆಯನ್ನು ಮೊದಲುಗೊಂಡು, ರಾಜ್ಯದ ಎಲ್ಲ ಸಂಪತ್ತು ಅವನಿಗೆ ಸೇರಬೇಕಾಗಿತ್ತು. ಇದನ್ನು ಧ್ವನಿಸುವಂತೆ ವಡ್ಡಾರಾಧನೆಯಲ್ಲಿ 'ನಿಮ್ಮಂಥ: ಪುರಮುಳಿಯ ಹನ್ನೆರಡು ವರ್ಷಂಬರೆಗಂ ಪೆಂಡರ್ಕಳೊಳೆಲ್ಲಂ ಎನ್ನ ಮನ ಮೆಚ್ಚಿದಂತೆ ಸುಯ್ದಂ ಬಾಳ್ವೆನಿದಂ ಬೇಡಿದೆ' ಎಂದು ರಾಜಕುಮಾರ ರಾಜನಲ್ಲಿ ಬೇಡಿಕೊಂಡು, ಹನ್ನೆರಡು ವರ್ಷಗಳವರೆಗೆ ರಾಜ್ಯದ ಎಲ್ಲ ಹೆಣ್ಣುಗಳ ಮೇಲೆ ಅಧಿಕಾರ ಚಲಾಯಿಸುವುದು ತಿಳಿದುಬರುತ್ತದೆ. ಹಾಗೆಯೇ 'ವಡ್ಡಾರಾಧನೆ'ಯ ಇನ್ನೊಂದು ಕಥೆಯಲ್ಲಿ "ಎನ್ನಾಳ್ವಮಂಡಳಂಗಳೊಳ್ ಪುಟ್ಟಿದ ಲೇಸಪ್ಪು ವಸ್ತುವಾರ್ಗಕ್ಕು' ಎಂಬ ಮಾತಿನಲ್ಲಿದ್ದ ಅಧಿಕಾರ ಹೆಣ್ಣನ್ನು ವಸ್ತುವಾಗಿ ಪರಿಗಣಿಸಿರುವ ನೀತಿ, ಇದಕ್ಕೆ ಅನುಮತಿ ಸೂಚಿಸುವ ರಾಜ ಪರಿವಾರದ ಹೆಣ್ಣನ್ನು ಆನೆಯುಂ ಕುದುರೆಯುಂ ಮತ್ತು ಮಾಣಿಕಮುಂ ಸ್ತ್ರೀರತ್ನಮುಂ ಮೊದಲಾಗೊಳೀ

---

[೪] ಗರತಿಯ ಹಾಡು - ಸಂ: ಸಿಂಪಿ ಲಿಂಗಣ್ಣ ಕಾಪಸೆ ರೇವಪ್ಪ - ಪುಟ-೩೬

ತಪ್ಪಗ್ಗಳ"[೫] ವಸ್ತುಗಳೆಲ್ಲ ರಾಜನಿಗೆ ಸೇರುತ್ತಿದ್ದವು ಎಂದು ಚಿತ್ರಿಸಲಾಗಿದೆ. ಅಲ್ಲದೆ 'ವಡ್ಡಾರಾಧನೆ'ಯ ಮೊದಲ ಕಥೆ 'ಸುಕುಮಾರಸ್ವಾಮಿ ಕಥೆ'ಯಲ್ಲಿ ಬರುವ 'ನಾಗಶ್ರೀ'ಯ ಭವಾವಳಿ, ವ್ರತ, ವಿದ್ಯೆಯ ಚಿತ್ರಣ; ಉಪಕಥೆಯಲ್ಲೊಂದಾದ 'ಸುಮತಿಯ ಕಥೆ', 'ಸತ್ಯವಾದಿ ಸುಧಾಮೆಯಂತಹ ಪಾತ್ರಗಳ-ಜಾಣ್ಮೆ', ಬುದ್ಧಿವಂತಿಕೆಗಳ ಅನಾವರಣ, ಸನತ್ಕುಮಾರ ಚಕ್ರವರ್ತಿಯ ಕಥೆಯ 'ಸಂದ್ಯಾವಳಿ' ಎಂಬ ಹೆಣ್ಣೊಬ್ಬಳು ತನ್ನ ಮದುವೆಯ ಕುರಿತು ಗಂಡಿಗೆ ಪತ್ರ ಬರೆದು ತಿಳಿಸುವ ಪ್ರಸಂಗ ಇತ್ಯಾದಿಗಳು ಮಹಿಳೆಯ ಸ್ಥಾನ-ಮಾನ-ಸ್ವಾತಂತ್ರ್ಯದ ಅನನ್ಯತೆಗೆ ಸಾಕ್ಷಿಯಾಗಿವೆ.

ಬಹುಮುಖಿ ಸಂಸ್ಕೃತಿ, ಮೌಲ್ಯ, ತತ್ವ, ಆದರ್ಶಗಳು ಒಟ್ಟಿಗೆ ಸಮಾವೇಶಗೊಂಡು, ಸಮರ್ಥವಾಗಿ ಅಭಿವ್ಯಕ್ತಗೊಂಡ ಕಾಲಘಟ್ಟವೆಂದರೆ, ಅದು ಹತ್ತನೆಯ ಶತಮಾನ. ಪಂಪನು ಕೇವಲ ಆದಿಕವಿ ಮಾತ್ರವಲ್ಲ; ಮಹಾಕವಿ. ಆ ಯುಗದ ಮುಖವಾಣಿಯಾಗಿ, ಸಮಕಾಲೀನ ಸಂದರ್ಭದ ಮನೋಧೋರಣೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಹಾಗೆ ಚಿತ್ರಣಗೊಂಡವರಲ್ಲಿ ಮಹಿಳೆ ಪ್ರಮುಖಳಾಗಿದ್ದಾಳೆ. ಲೌಕಿಕ ಮತ್ತು ಆಗಮಿಕ ಎಂಬೆರಡು ಕಾವ್ಯ ಮಾರ್ಗಗಳ ಹುಟ್ಟಿಗೆ ಕಾರಣನಾದ ಪಂಪ 'ಆದಿಪುರಾಣ' ಎಂಬ ಆಗಮಿಕ, 'ವಿಕ್ರಮಾರ್ಜುನ ವಿಜಯಂ' ಎಂಬ ಲೌಕಿಕ ಕೃತಿಗಳನ್ನು ರಚಿಸಿ, ಮುಂದಿನ ಕವಿಗಳಿಗೆ ದಾರಿ ದೀಪವಾಗಿದ್ದಾನೆ. ತನ್ನ ಈ ಎರಡೂ ಕೃತಿಗಳಲ್ಲಿ ಸಾಂದರ್ಭಿಕವಾಗಿ ಮಹಿಳಾ ಪಾತ್ರಗಳನ್ನು ಸೃಷ್ಟಿಸಿಕೊಂಡು, ಆ ಮೂಲಕ ಅವರ ವ್ಯಕ್ತಿತ್ವ ವಿಶೇಷತೆಗಳನ್ನು ಮನೋಜ್ಞವಾಗಿ ಅಭಿವ್ಯಕ್ತಿಸಿದ್ದಾನೆ.

ಧರ್ಮ ಪ್ರವರ್ತಕನಾದ ಪಂಪ ಧರ್ಮವನ್ನು ಮೆರೆಯುವುದಕ್ಕಾಗಿ 'ಆದಿಪುರಾಣ'ವನ್ನು ರಚಿಸಿದ್ದು, ಗೊತ್ತಿರುವ ಸಂಗತಿಯೇ. ಇದು ಆದಿ ದೇವನ ಮತ್ತು ಭರತ ಬಾಹುಬಲಿಯವರ ಕಥೆಯನ್ನು ಒಳಗೊಂಡಿದೆ. ಆದಿಭಾಗದಲ್ಲಿ ಬರುವ 'ನೀಲಾಂಜನೆಯ ನೃತ್ಯ ಪ್ರಸಂಗ' ಆದಿಪುರಾಣದ ವಿಶೇಷತೆಗಳಲ್ಲಿಯೇ ಮಹತ್ವವಾಗಿದೆ. ಇಲ್ಲಿ ಪಂಪ ನೀಲಾಂಜನೆಯ ನೃತ್ಯ ಮಾಡುತ್ತಲೇ ಆಯುಷ್ಯ ಮುಗಿದು, ತೀರಿ ಹೋಗುತ್ತಾಳೆ. ನೃತ್ಯದ ಸವಿ ಉಣ್ಣುತ್ತಾ, ಸುಖದ ತುತ್ತ ತುದಿಯಲ್ಲಿರುವ ಆದಿದೇವನಿಗೆ ರಸಭಂಗವಾಗಬಾರದೆಂದು, ದೇವೇಂದ್ರನು ಕರಗಿ, ನೀಲಾಂಜನೆಯಳ ಸ್ಥಾನದಲ್ಲಿ ಮತ್ತೊಬ್ಬಳನ್ನು ನಿಲ್ಲಿಸುತ್ತಾನೆ. ಆದರೆ ಆದಿ ದೇವನಿಗೆ ಅದು ತಿಳಿದು, ದೇಹದ ಅನಿಶ್ಚಿತತೆಯ ಅರಿವಾಗಿ, ವೈರಾಗ್ಯವನ್ನು ತಂದುಕೊಳ್ಳುತ್ತಾನೆ. ಗಮನಿಸಬೇಕಾದ ಅಂಶವೆಂದರೆ ಇಲ್ಲಿ ಪಂಪ ಆದಿದೇವನಂತಹ ಒಬ್ಬ ಪಾವನಪುರುಷ, ಸನ್ಯಾಸನ ದೀಕ್ಷೆ

[೫] ಶಿವಕೋಟ್ಯಾಚಾರ್ಯ ವಡ್ಡಾರಾಧನೆ - ಬಿ.ವಿ.ಕೆ. ಮೂರ್ತಿ- ಪುಟ-೧೧೬

ಪಡೆಯಲು ನೀಲಾಂಜನೆಯ ಪಾತ್ರ-ಅವಳ ನೃತ್ಯ ಕಾರಣವಾಗಿಸಿದ್ದು, ತಾತ್ವಿಕವಾಗಿ ಗಮನಾರ್ಹವಾಗಿದೆ. ಹಾಗಾಗಿ ಪಂಪ 'ಪರಮ ಜಿನೇಂದ್ರವಾಣಿಯೇ ಸರಸ್ವತಿ', 'ಬೇರದು ಪೆಣ್ಣ ರೂಪಮಂಧರಿಯಿಸಿ ನಿಂದದಲ್ತು' ಎಂದು ಹೇಳಿದ್ದಾನೆ.

ರಾಜಾಶ್ರಯದಲ್ಲಿ ಬೆಳೆದ ಪಂಪ ಆಶ್ರಯದಾತನ ಕೀರ್ತಿಯನ್ನು ಸಾರಲೆಂದೇ 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿ, ಆ ಕಾವ್ಯವನ್ನು ಕನ್ಯೆಯಂತೆ ರಾಜನಿಗೆ ಅರ್ಪಿಸಿರುದನ್ನು ಕಾಣುತ್ತೇವೆ. ಈ ಕುರಿತು ಪಂಪನೇ ಒಂದೆಡೆ 'ಕಬ್ಬಮಂ ಕೂಸುಮನೀವುದರಿಕೇಸರಿಗಲ್ಲದೆ ವಸ್ತುಗೀವುದೇ' ಎಂದು ಪ್ರತಿಕ್ರಿಯೆಸಿದ್ದಾನೆ. ಹೀಗಾಗಿ ಲೌಕಿಕ ಕಾವ್ಯವನ್ನು ರಚಿಸುವಾಗ ಸಂಸ್ಕೃತ ಕಾವ್ಯವನ್ನು ಆಕರವಾಗಿ ಬಳಸಿಕೊಂಡಿದ್ದರೂ ತನ್ನ ಆಶ್ರಯದಾತನಾದ ರಾಜನ ಗೌರವಕ್ಕೆ ಚ್ಯುತಿ ಬರುವಂತಹ, ದ್ರೌಪದಿಯ ವಸ್ತ್ರಾಪಹರಣದಂತಹ ಪ್ರಸಂಗಗಳನ್ನು ಕೈ ಬಿಟ್ಟಿದ್ದಾನೆ. ಆದರೆ ಘೋರ ಪ್ರತಿಜ್ಞೆಯನ್ನು ಮಾತ್ರ ಮಾಡಿಸದೇ ಬಿಟ್ಟಿಲ್ಲ. ಆ ಮಾತುಗಳು ಹೀಗಿವೆ.

"ಮುಡಿಯಂ ಪಿಡಿದೆಳೆದವನು
ಮುಡಿಯಿಸಿ ಮತ್ತವನ ಕರುಳ ಪಿಣಿಲಂದೆನ್ನ
ಮುಡಿಯಿಸುವಿನೆನಂ ಮುಡಿಯಂ
ಮುಡಿಯೆಂ ಗಡಕೇಳಿವೀಗಳಾನ್ ನುಡಿವೆಂ"[೬]

ಎಂದು, ಪಂಪ ದ್ರೌಪದಿಯ ಈ ಮುಡಿಯೇ ಮಹಾಭಾರತಕ್ಕೆ ಕಾರಣ ಎನ್ನುತ್ತಾನೆ. ತುಂಬಿದ ಸಭೆಯಲ್ಲಿ ಅವಮಾನಿತಳಾದ ದ್ರೌಪದಿಯ ನೋವು-ಪ್ರತಿಕಾರಗಳನ್ನು ಸೇಡಿಗೆ ತಿರುಗಿಸಿಕೊಂಡು ಆಡಿದ ಮಾತುಗಳು ಇಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಲ್ಪಟ್ಟಿವೆ.

ಹಾಗೆಯೇ ಕರ್ಣ ಮತ್ತು ದುರ್ಯೋಧನರ ಸ್ನೇಹದ ಕುರಿತು ಮಾತನಾಡುವಾಗಲೆಲ್ಲ ನಾವು 'ನೆತ್ತಮಾನಾಡಿ ಭಾನುಮತಿಯು ಸೋಲ್ತೆಡೆ'ಯ ಪ್ರಸಂಗವನ್ನು ಮತ್ತೆ ಮತ್ತೆ ಉದಾಹರಿಸುತ್ತೇವೆ. ಈ ಪ್ರಸಂಗದಲ್ಲಿ ವಿಶೇಷವಾಗಿ ಬೆಳಗುವಂತಹವರೆಂದರೆ ದುರ್ಯೋಧನ ಮತ್ತು ಕರ್ಣರೆ ಹೊರತು, ಭಾನುಮತಿ ಅಲ್ಲ. ಭಾನುಮತಿಯ ಪಾತ್ರ ಅವರ ಹೊಳುಹುವಿನಲ್ಲಿ ಮಂದವಾಗಿ ಚಿತ್ರಿತಗೊಂಡಿದೆ.

ಕೊನೆಯದಾಗಿ ಪಂಪ ಅಭಿವ್ಯಕ್ತಿಸಿದ ಸ್ತ್ರೀ ಪಾತ್ರಗಳ ಚಿತ್ರಣದ ಬಗ್ಗೆ ಹೇಳಬೇಕಾದ ಇನ್ನೊಂದು ಮಾತೆಂದರೆ, ಕಥೆಯ ಆರಂಭದಿಂದ ಅಂತ್ಯದವರೆಗೆ ಅವಮಾನ, ದುಃಖ, ಕಷ್ಟ,

---

೬ ವಿಕ್ರಮಾರ್ಜುನ ವಿಜಯಂ – ಕೆ.ವಿ. ಪುಟ್ಟಪ್ಪ – ಪುಟ-೬೭

ವನವಾಸದಂತಹ ತೊಂದರೆಗಳನ್ನು ಅನುಭವಿಸುವವಳು ದ್ರೌಪದಿ. ಆದರೆ ಕೃತಿಯ ಕೊನೆಯಲ್ಲಿ ಅರ್ಜುನನೊಂದಿಗೆ ಪಟ್ಟದರಸಿಯಾಗಿ ಮೆರೆಯುವಂತಹವಳು ಸುಭದ್ರೆಯಾಗಿದ್ದು, ವಿಪರ್ಯಾಸವಾಗಿದೆ. ವಿಕ್ರಮಾರ್ಜುನ ವಿಜಯದಲ್ಲಿ ಕುಂತಿಯಿಂದ ಮೊದಲುಗೊಂಡು, ಬರುವ ದ್ರೌಪದಿ, ಸುಭದ್ರೆ, ಚಿತ್ರಾಂಗದೆ, ನಿತ್ಯವತಿ, ಉತ್ತರೆ, ಭಾನುಮತಿಯಂತಹ ಮೊದಲಾದ ಸ್ತ್ರೀಪಾತ್ರಗಳು, ಕಣ್ಮುಂದೆ ನಡೆದಾಡುವಂತೆ ಚಿತ್ರಿತವಾಗಿದ್ದು, ಕಾಮ-ಪ್ರೇಮದಂತಹ ಅಂಶಗಳು ಸಶಕ್ತವಾಗಿ ಅಭಿವ್ಯಕ್ತಗೊಂಡಿವೆ.

ರತ್ನತ್ರಯರಲ್ಲಿ ಎರಡನೆಯವನಾದ 'ಪೊನ್ನ' ತನ್ನ ಶಾಂತಿ ಪುರಾಣದಲ್ಲಿ 'ನೆಗಳ್ತೆ ವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯೊಳ್ಗುಲದ ಪೊಗಳ್ತೆ ತನ್ನದೆಸೆ' ಇಲ್ಲಿ ಭಕ್ತಿ ಬಹಳ ದೊಡ್ಡದು, ಎನ್ನುವುದರ ಜತೆಗೆ, 'ಮದೀಯ ಕುಲಕ್ಕಿನಿತಾಗ ಲವಳ ನೆಟ್ಟನೆನಗೆ ಪುಟ್ಟಿದವಳಲ್ಲಿಳಾ', ಎಂದು ಒಬ್ಬ ತಂದೆ ಕುಲಕ್ಕೆ ಕೆಟ್ಟ ಹೆಸರು ತಂದವಳು ಮಗಳೇ ಅಲ್ಲವೆಂದು ನಿರಾಕರಿಸುವುದನ್ನು ಕಾಣುತ್ತೇವೆ. ಇದು ಅಂದಿನಿಂದ ಇಂದಿನವರೆಗೂ ಕುಟುಂಬದ ಮುಖೇನ ಸಾಮಾಜಿಕವಾಗಿ ರೂಢಿಯಲ್ಲಿದೆ.

ಪೊನ್ನನ ತರುವಾಯದಲ್ಲಿ ಬಂದ 'ಶಕ್ತಿ ಕವಿ ರನ್ನ' 'ಸಾಹಸ ಭೀಮ ವಿಜಯ', ಮತ್ತು 'ಅಜಿತನಾಥ ಪುರಾಣ' ಎಂಬೆರಡು ಕೃತಿಗಳನ್ನು ರಚಿಸಿದ್ದು, 'ಸಾಹಸ ಭೀಮ ವಿಜಯದಲ್ಲಿ:

"ತುರುಗೋಳೋಳ್ ಪೆಣ್ಣುಯ್ಯಲೊ
ಳೆರವೆಸದೊಳ್ನಂಟನ ನೆಡರೊಳೊರಳಿರನೊಳಂ
ತರಿ ಸಂದು ಗಂಡುತನಮನೆ
ನೆರಿ ಪದವಂ ಗಂಡನಲ್ಲನೆಂತುಂಷಂಡಂ"[೭]

ಇಲ್ಲಿ ಅಪಹರಿಸಿಕೊಂಡು ಹೋಗುತ್ತಿದ್ದ ಕುದುರೆಗಳನ್ನು, ಹೆಣ್ಣನ್ನು ರಕ್ಷಿಸಬೇಕು. ಅದು ಪುರುಷನ ಕರ್ತವ್ಯವೆಂದು ಹೇಳಿದರೆ, ರಕ್ಷಿಸಬೇಕಾದ ಪುರುಷನೇ ಹೊತ್ತೊಯ್ಯುವುದು ವಿಪರ್ಯಾಸದ ಸಂಗತಿಯಾಗಿದೆ.

ರನ್ನನು ಕೌರವ ಮತ್ತು ಪಾಂಡವರ ನಡುವಿನ ಹಗೆತನಕ್ಕೆ ಕಾರಣಗಳನ್ನು ಹುಡುಕುತ್ತ, ದಾಯಾದಿ ದ್ವೇಷಕ್ಕಿಂತ ದ್ರೌಪದಿಯೇ ಮಹಾಭಾರತದ ಕದನಕ್ಕೆ ಕಾರಣ ಎನ್ನುತ್ತಾನೆ. 'ನಿನ್ನೀ ಕೇಶಪಾಶಂ ಕುರುಪತಿಗಯಲ್ತೆ ಕೀನಾಶಪಾಕಂ', 'ಕುರುಕುಲಮಂ ನುಂಗಿದ ಕಾಳರಕ್ಕಸಿ' ಎಂದು

[೭] ಕವಿಚಕ್ರವರ್ತಿ ರನ್ನನ ಗದಾಯುದ್ಧ - ಪುಟ-೬೮

ದ್ರೌಪದಿ ದುಶ್ಶಾಸನನ ಕರುಳಿನಿಂದಲೇ ಮುಡಿಯನ್ನು ಕಟ್ಟಿಕೊಳ್ಳುವ ಹಠವನ್ನು ಗದಾಯುದ್ಧದಲ್ಲಿ ಹೀಗೆ ಅಭಿವ್ಯಕ್ತಿಸಿದ್ದಾನೆ.

> "ಧಾತ್ರಿ ಪತಿಗರುಪಿ ಮರು।
> ತ್ಪುತ್ರಂ ಬಳಿಯಟ್ಟಿಕರೆಸಿ ತೋಲ್ಲೇಕ
> ಚೈತ್ರೀಕೃತಿ ಜಗದ ಹಿತ।
> ಕ್ಷತ್ರಿಯ ಕುಳಕಾಳರಾತ್ರಿಯಂ ದ್ರೌಪದಿಯಂ"[೮]

ಇಷ್ಟೊಂದು ಛಲ, ಹಠ ಹುಟ್ಟಲು ದ್ರೌಪದಿ ತನಗಾದ ಅವಮಾನವೇ ಕಾರಣವಾಗಿದ್ದು, ತುಂಬಿದ ಸಭೆಯಲ್ಲಿ ಅಪಮಾನಕ್ಕೊಳಗಾದ ದ್ರೌಪದಿ ಮಾಡುವ ಪ್ರತಿಜ್ಞೆಯಲ್ಲಿ ಪರಂಪರಾಗತ ಮೌಲ್ಯಕ್ಕೆ ಧಿಕ್ಕಾರವಿದೆ. ತಮ್ಮ ಸ್ವಾರ್ಥಕ್ಕಾಗಿ ಹೆಣ್ಣನ್ನು ಗಾಳವನ್ನಾಗಿಸಿಕೊಂಡವರ ಮೇಲೆ ಪ್ರತಿಕಾರವನ್ನೆಸಗುವ ಛಲವಿದೆ, ಸೇಡಿನ ಕಿಡಿಯಿದೆ.

ಹಾಗೆಯೇ 'ಅಜಿತನಾಥ ಪುರಾಣ'ದಲ್ಲಿ ಅತ್ತಿಮಬ್ಬೆಯನ್ನು 'ದಾನಚಿಂತಾಮಣಿ' ಎಂದು ಬಣ್ಣಿಸಿದ್ದು, ತನ್ನ ಮಕ್ಕಳಿಗೆ 'ರಾಯ'ಮತ್ತು 'ಅತ್ತಿಮಬ್ಬೆ' ಎಂದು ಹೆಸರಿಟ್ಟಿದ್ದ, ರನ್ನನಿಗೆ ಅತ್ತಿಮಬ್ಬೆಯ ಬಗ್ಗೆ ಇದ್ದ ಗೌರವ ಮತ್ತು ಪ್ರೀತಿಯನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಅಭಿನವ ಪಂಪನೆಂದೇ ಪ್ರಸಿದ್ಧನಾದ ಕವಿ 'ನಾಗಚಂದ್ರ' ತನ್ನ 'ಪಂಪರಾಮಾಣ'ದಲ್ಲಿ ರಾಮನು ಸೀತೆಯ ಶೀಲವನ್ನು ಶಂಕಿಸಿದಾಗ ಅವಳ ಸನ್ಯಾಸನವನ್ನು ಸ್ವೀಕರಿಸುವ ಸಂದರ್ಭದಲ್ಲಿ ಪುರುಷನ ದೌರ್ಜನ್ಯಕ್ಕೆ ತೋರಿದ ಪ್ರತಿಭಟನೆಯಾಗಿದೆ.

ಪಂಪ, ಪೊನ್ನ, ರನ್ನ, ನಾಗಚಂದ್ರ, ಜನ್ನ ಕವಿಗಳ ಸ್ತ್ರೀಪರ ನಿಲುವುಗಳನ್ನು ಅವಲೋಕಿಸಿದಾಗ; ನಮ್ಮ ಗ್ರಹಿಕೆಗೆ ಬರುವ ವಿಚಾರವೆಂದರೆ ಪ್ರಭುತ್ವದ ಒತ್ತಡಕ್ಕೆ ಒಳಗಾಗಿ, ಉಳ್ಳವರ, ಮೇಲ್ವರ್ಗದ ಮಹಿಳೆಯರ ಕುರಿತು ಈ ಕವಿಗಳು ಅಭಿವ್ಯಕ್ತಿಸಿದ್ದಾರೆ ವಿನಾಃ ಸಾಮಾನ್ಯ ಮಹಿಳೆಯರ ಧ್ವನಿಯಾಗಿ ಅಲ್ಲ. ಈ ಕುರಿತು ಡಾ. ಮಲ್ಲಿಕಾ ಘಂಟಿಯವರು ಹೇಳುವ ಮಾತುಗಳು ಮಾರ್ಮಿಕವಾಗಿವೆ. "ಪಂಪ, ಪೊನ್ನ, ರನ್ನಾದಿ ಕವಿಗಳು ಸ್ತ್ರೀಪರ ಕಾಳಜಿ ತೋರಿಸುವುದೆಲ್ಲ ಪಟ್ಟದರಸಿ ಉಳಿದ ಅರಸಿಯರನ್ನು ನಡೆಸಿಕೊಂಡಿದ್ದರ ಕುರಿತು. ಸವತಿ ಮಾತ್ಸರ್ಯದಿಂದ ಬಳಲುವವರ ಪರವಹಿಸಿಕೊಂಡು ಮಾತನಾಡುವರೇ ಹೊರತು. ಪ್ರಭುತ್ವದ

---

೮ ಕವಿಚಕ್ರವರ್ತಿ ರನ್ನನ ಗದಾಯುದ್ಧ - ಪುಟ- ೬೯

ಕೌರ್ಯಕ್ಕೆ ಸಿಲುಕಿ ನಡುಗಿದ ಹೆಣ್ಣುಗಳ ಕುರಿತ ಹಾಗೆ ಅಲ್ಲ"[೯] ಎಂದು ಅಭಿಪ್ರಾಯ ಪಟ್ಟಿದ್ದು ಸೂಕ್ತವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನ ಒಂದು ಮಹತ್ವದ ಕಾಲಘಟ್ಟ. ವಸ್ತು ಭಾಷೆ–ಛಂದಸ್ಸು ಹಾಗೂ ಸಾಹಿತ್ಯ ರಚನೆಯ ಉದ್ದೇಶ ಇತ್ಯಾದಿಗಳ ದೃಷ್ಟಿಯಿಂದ ಕನ್ನಡ ಸಾಹಿತ್ಯಕ್ಕೆ ಹೊಸ ಚೈತನ್ಯವನ್ನು ತಂದು ಕೊಟ್ಟ ಕಾಲ. ವಚನಕಾರರು ರಚಿಸಿದ ವಚನಗಳು ಬಿಡಿಬಿಡಿಯಾದ ಮುಕ್ತಕಗಳ ರೂಪದಲ್ಲಿದ್ದು, ಅವೆಲ್ಲವುಗಳ ಆಶಯ, ಮನುಷ್ಯ–ಮನುಷ್ಯನ ಸಂಬಂಧದ ಮತ್ತು ಸಮಾಜ ಹಾಗೂ ಮನುಷ್ಯ, ಹೆಣ್ಣು–ಗಂಡು ಹೊಂದಿದ ಸಂಬಂಧದಲ್ಲಿನ ಹಲವು ಸಮಸ್ಯೆಗಳನ್ನು ಕುರಿತು ಮಾಡಿದ ಚಿಂತನೆಯ ಫಲಶೃತಿಗಳಾಗಿವೆ.

ಸರಳ ಸುಂದರ ಶೈಲಿಯಲ್ಲಿ ರಚನೆಯಾದ ವಚನಗಳು, ಶರಣರ ಅನುಭವದ ಅಭಿವ್ಯಕ್ತಿ. ವಚನಕಾರರು , ಪ್ರಗತಿಪರರು, ಸಮಾನತೆಯ ಹರಿಕಾರರು. ಹೀಗಾಗಿ ಅವರು ವರ್ಗ–ವರ್ಣ, ಲಿಂಗ ಸಮಾನತೆಗಾಗಿ ಹಗಲಿರುಳು ಶ್ರಮಿಸಿದವರು. ಈ ಹಿನ್ನೆಲೆಯಲ್ಲಿ ವಿವೇಚಿಸಿದಾಗ ವಚನಕಾರರು ಸ್ತ್ರೀಪರ ಕಾಳಜಿ ಉಳ್ಳವರಾಗಿದ್ದರು. ಹಾಗೆಂದೆ, ಅನುಭವ ಮಂಟಪದಲ್ಲಿ ಅವರಿಗೆ ಮುಕ್ತವಾದ ಅವಕಾಶ ಕಲ್ಪಿಸಿ, ಸಾಮಾಜಿಕ, ಆಧ್ಯಾತ್ಮಿಕ ನೆಲೆಯಲ್ಲಿ ಸ್ತ್ರೀ ಪುರುಷರಷ್ಟೇ ಸರಿ ಸಮಾನಳು ಎಂದು ಪ್ರತಿಪಾದಿಸಿದರು. ಈ ಕುರಿತು ಆದ್ಯ ವಚನಕಾರ ಜೇಡರ ದಾಸಿಮಯ್ಯನವರು.

"ಮೊಲೆ ಮೂಡಿ ಬಂದಡೆ ಹೆಣ್ಣೆಂಬರು
ಮೀಸೆ ಕಾಸೆ ಬಂದಡೆ ಗಂಡೆಂಬರು
ನಡುವೆ ಸುಳಿವ ಆತ್ಮನು
ಹೆಣ್ಣು ಅಲ್ಲಾ ಗಂಡು ಅಲ್ಲಾ ಕಾಣಾ ರಾಮನಾಥಾ"[೧೦]

ಎಂದು ದಾಸಿಮಯ್ಯ ಇಲ್ಲಿ ಗಂಡು–ಹೆಣ್ಣಿನ ಬಗೆಗಿನ ಭೇದವನ್ನು ವಿವರಿಸುತ್ತಾನೆ. ಈ ಭೇದ ಶರೀರಿಕವಾದುದು. ಬಾಹ್ಯ ಶರೀರದ ಲಕ್ಷಣಗಳನ್ನು ಆಧರಿಸಿ ಗಂಡು–ಹೆಣ್ಣು ಎಂದು ಭಾವಿಸಲಾಗುತ್ತದೆಯೇ ಹೊರತು, ಒಳಗಿರುವ ಆತ್ಮಕ್ಕೆ ಭೇದವಿಲ್ಲ ಎನ್ನುತ್ತಾನೆ. ಸ್ತ್ರೀಯನ್ನು ಮಾನವೀಯ ನೆಲೆಯಲ್ಲಿ ಕಾಣದೆ ಹೆಣ್ಣನ್ನು ರಾಕ್ಷಸಿ, ಚಂಚಲೆ ಎಂದೆಲ್ಲ ಜರಿದ ಜನರಿಗೆ ಸಿದ್ಧರಾಮನು ಈ ರೀತಿ ವಿವರಿಸಿದ್ದಾನೆ.

---

೯ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಹಿಳಾ ಕಾಳಜಿಗಳು – ಸಂ: ಡಾ. ಶೇಖರ – ಪುಟ– ೮
೧೦ ಜೇಡರ ದಾಸಿಮಯ್ಯನ ವಚನಗಳು – ಸಂ: ಎಂ.ಎ. ದೇವೀರಪ್ಪ – ಪುಟ–೩೬

"ತಾ ಮಾಡಿದ ಹೆಣ್ಣು ತಲೆಯನೇರಿತ್ತು
ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಗೆಯನೇರಿತ್ತು
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು
ಅದು ಕಾರಣ।
ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ ನೋಡಾ"[೧೧]

ಎಂದು ತಿಳಿದು ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಭಿವ್ಯಕ್ತಿಗಳನ್ನು ಕೊಟ್ಟು, ಲಿಂಗ ದೀಕ್ಷೆನೀಡಿ, ಮಂತ್ರ ಪಠಣ ಮಾಡಿಸಿ, ಆಧ್ಯಾತ್ಮದ ಹಾದಿ ತೋರಿದರು. ಸ್ತ್ರೀ ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ ಎಂದು ಬಣ್ಣಿಸಿದರು. ಈ ಕಾರಣದಿಂದಾಗಿ ಹನ್ನೆರಡನೆಯ ಶತಮಾನದಲ್ಲಿ ಅಕ್ಕಮಹಾದೇವಿ, ಲಿಂಗಮ್ಮ, ಗಂಗಮ್ಮ, ರೇವಮ್ಮ, ಕಾಳವ್ವ, ಸೂಳೆ ಸಂಕವ್ವ, ಆಯ್ದಕ್ಕಿ ಲಕ್ಕಮ್ಮ-ರಂತಹ ಸ್ತ್ರೀಯರೆಲ್ಲ ಶಿವಶರಣೆ, ವಚನಕಾರ್ತಿಯರಾಗಿ ಬೆಳಗಿದರು. ಇದಕ್ಕೆ ಪ್ರತಿಕ್ರಿಯೆಯಾಗಿ ಅಕ್ಕನಾಗಮ್ಮ 'ನಿಜದ ನಿರ್ವಾಲಯ ಬಾಗಿಲ ತೋರಿದ ಬಸವಣ್ಣ' ಎಂದರೆ ನೀಲಮ್ಮ 'ಆನು ಅನುಭವ ಶೀಲವನರಿದು ಮುಕಾಂಗನೆಯಾದೆನಯ್ಯ ಬಸವ' ಎಂದು ಶರಣರಿಂದ ಆತ್ಮೋನ್ನತಿಯನ್ನು ಸಾಧಿಸಿದನ್ನು ಸ್ಮರಿಸುತ್ತಾರೆ. ತ್ರಿಕಾಲ ಜ್ಞಾನಿ, ಅನುಭವ ಮಂಟಪದ ಅಧ್ಯಕ್ಷ, ಶರಣ ಸಂಕುಲಕ್ಕೆ ಗುರು ಸ್ಥಾನದಲ್ಲಿದ್ದ ಅಲ್ಲಮಪ್ರಭು ಬಂದು ವಚನದಲ್ಲಿ.

"ಹೊನ್ನು ಮಾಯೆಯೆಂಬರು, ಹೆಣ್ಣು ಮಾಯೆಯೆಂಬರು
ಮಣ್ಣು ಮಾಯೆಯೆಂಬರು,
ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ"[೧೨]

ಎಂದು ಅಲ್ಲಮಪ್ರಭು ಹೆಣ್ಣು, ಹೊನ್ನು, ಮಣ್ಣುಗಳ ಮಾಯೆಯಲ್ಲ, ನಮ್ಮ ಮನಸಿನಲ್ಲಿರುವ ಆಸೆಯೇ ಮಾಯೆ ಎಂದು ವ್ಯಾಖ್ಯಾನಿಸಿದ್ದಾರೆ.

ವಿಶ್ವಗುರು, ವಿಭೂತಿ ಪುರುಷ ಬಸವಣ್ಣನವರು ಮಹಿಳೆಯನ್ನು ಮಾನವೀಯ ನೆಲೆಯಲ್ಲಿ ಕಂಡವರು. ವರ್ಗ-ವರ್ಣ-ಲಿಂಗ ಸಮಾನತೆಯಂತಹ ವಿಧಾಯಕ ಕಾರ್ಯಗಳನ್ನು ಕೈಗೊಂಡು ಆ ನೆಲೆಯಲ್ಲಿ ಸಾಗಿದವರು. ಶರಣಸತಿ ಲಿಂಗಪತಿ ಧೋರಣೆಯುಳ್ಳವರು ಅವನ್ನು ಅಕ್ಷರಶಃ

---

೧೧ ಸಿದ್ಧರಾಮನ ವಚನ ಸಂಪುಟ – ಸಂ: ವಿದ್ಯಾಶಂಕರ. ಎಸ್ – ಪುಟ–೨೮

೧೨ 'ಅನುಭಾವಿಗಳ ಕಾಂತಿ' ಮೂಲ ಜಾನ್ ಪೀಟರ್ ಶೌಟನ್, ಕನ್ನಡಕ್ಕೆ – ಟಿ.ಆರ್. ಚಂದ್ರಶೇಖರ – ಪುಟ– ೧೭೯

ಅನುಸರಿಸಿದವರು. ಅವರು ತಮ್ಮ ಒಂದು ವಚನದಲ್ಲಿ 'ಛಲಬೇಕು ಶರಣಂಗ ಪರಸತಿಯು ನೊಲ್ಲೆನೆಂಬ' ಉಕ್ತಿಯ ಮೂಲಕ ಒಂದು ಅನಿಷ್ಟ ಪದ್ಧತಿಯನ್ನು ಖಂಡಿಸಿದ್ದಾರೆ. ಅಲ್ಲದೆ 'ತಂದೆ ನೀನು ತಾಯಿ ನೀನು' ಎಂದು ಕೂಡಲ ಸಂಗಮನಲ್ಲಿಯೇ ಮಾತೃ-ಪಿತೃ ಹೃದಯವನ್ನು ಕಂಡಿದ್ದಾರೆ.

ವಚನಕಾರರಂತೆ ವಚನ ಕಾರ್ತಿಯರು ಮುಕ್ತವಾಗಿ ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸಿ, ತಮ್ಮ ವಿಚಾರಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಅವರಲ್ಲಿ ಅಕ್ಕ ಮಹಾದೇವಿ ಪ್ರಮುಖಳು. ಕನ್ನಡದ ಮೊದಲ ಕವಯತ್ರಿಯೆಂಬ ಹೆಗ್ಗಳಿಕೆಗೆ ಪಾತ್ರಳಾದ ಆಕೆ ಆತ್ಮಾಭಿಮಾನದ ಸಂಕೇತವಾಗಿದ್ದು, ಇಡೀ ಮಹಿಳಾ ಸಮಾಜಕ್ಕೆ ಮಾದರಿಯಾಗಿದ್ದಾಳೆ. ಅವಳು ಮಾಯೆ ಎಂಬುದು ಬರೀ ಪುರುಷನಿಗೆ ಮಾತ್ರವಲ್ಲ ಮಹಿಳೆಗೂ ಕೂಡಾ ಕಾಡುವಂತದಾಗಿದೆ ಎಂದು ಹೇಳಿದ್ದಾಳೆ.

"ಪುರುಷನ ಮುಂದೆ ಮಾಯೆ ಸ್ತ್ರೀಎಂಬ
ಅಭಿಮಾನವಾಗಿ ಕಾಡಿತ್ತು ನೋಡಾ
ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ
ಅಭಿಮಾನವಾಗಿ ಕಾಡಿತ್ತು ನೋಡಾ
-----------------"[೧೩]

ಎನ್ನುತ್ತಾಳೆ. 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಯಂತಯ್ಯ' ಎಂಬಲ್ಲಿ ಅಕ್ಕಮಹಾದೇವಿಯ ಧೀರ, ದಿಟ್ಟ, ಆತ್ಮಸ್ಥೈರ್ಯ ಇತ್ಯಾದಿ ನಿಲುವುಗಳು ವ್ಯಕ್ತವಾಗಿವೆ. ಅಲ್ಲದೆ ಅಕ್ಕಮಹಾದೇವಿ ಸ್ತ್ರೀ ಕುಲಕ್ಕೆ ಸ್ತ್ರೀಯತ್ವದ ದೀಕ್ಷೆಯನ್ನ ನೀಡಿದ್ದಾಳೆ. ಬಸವಣ್ಣನವರ ಒಲವಿನ ಸತಿಯಾದ ನೀಲಮ್ಮ (ನೀಲಲೋಚನೆ) ತನ್ನ ಒಂದು ವಚನದಲ್ಲಿ

"ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ
ಪುಣ್ಯವಿಲ್ಲದ ಪಾಪಿಯ?
ನಾನು ಇಹಪರಕ್ಕೆ ದೂರಳಯ್ಯಾ
ಎನ್ನ ನಾಮ ಹೆಣ್ಣು ನಾಮವಲ್ಲಯ್ಯಾ
---------------------
---------------------
ನನಗೆ ಹೆಣ್ಣು ನಾಮವಿಲ್ಲವಯ್ಯಾ"[೧೪]

---

[೧೩] ಅಕ್ಕಮಹಾದೇವಿ - ಎಸ್. ನಾಗರತ್ನ - ಪುಟ-೪೨

[೧೪] 'ಅನುಭಾವಿಕ ಕ್ರಾಂತಿ' ಮೂಲ ಜಾನ್‌ಪೀಟರ್ ಶೌಟನ್. ಕನ್ನಡಕ್ಕೆ - ಟಿ.ಆರ್. ಚಂದ್ರಶೇಖರ - ಪುಟ - ೧೯೧

ಎಂದು ನೀಲಮ್ಮ ಪುಣ್ಯವಂತೆಯಲ್ಲದ ತನ್ನನ್ನು ಹೆಣ್ಣಾಗಿ ಏಕೆ ಹುಟ್ಟಿಸಿದಿ ಎಂದು ಪ್ರಶ್ನಿಸುವ ಮೂಲಕ ಹೆಣ್ಣಿನ ಜನ್ಮ ಪುಣ್ಯದ ಫಲವಾಗಿದೆಯೇ ಹೊರತು; ಅದು ಪಾಪದ ಫಲವಲ್ಲ ಎಂದು ಸಮರ್ಥಿಸಿ ಕೊಳ್ಳುತ್ತಾಳೆ. ಹಾಗೆಯೇ ಪುರುಷ ಮಹಿಳೆಯನ್ನು ನಿರ್ಜೀವ ವಸ್ತುವಿನಂತೆ ಕಾಣುವ ಭಾವವನ್ನು ಗೊಗ್ಗವ್ವೆ ಪ್ರತಿಭಟಿಸುತ್ತ:

"ಗಂಡು ಮೋಹಿಸಿ ಹೆಣ್ಣ ಹಿಡಿದರೆ
ಅದು ಒಬ್ಬರ ಒಡವೆ ಎಂದರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದರೆ
ಉತ್ತರವಾವುದೆಂದರಿಯಬೇಕು"[೧೫]

ಎಂದು ಸಮಾಜವನ್ನೇ ತಾರ್ಕಿಕವಾಗಿ ವಿಮರ್ಶಿಸುವ ಗೊಗ್ಗವ್ವೆಯ ಈ ಸಂವೇದನೆ, ಪ್ರತಿಭಟನೆಯ ಗುಣ, ಹನ್ನೆರಡನೆಯ ಶತಮಾನದಲ್ಲಿಯೇ ಸ್ತ್ರೀವಾದಿ ಚಿಂತನೆಗೆ ನಾಂದಿಯಾಗಿದೆ ಎನ್ನಬೇಕು.

ಹೀಗೆ ಹನ್ನೆರಡನೆ ಶತಮಾನದಲ್ಲಿ ಬರೀ ವಚನಕಾರರು ಮಾತ್ರವಲ್ಲ; ವಚನಕಾರ್ತಿಯರು ಸಾವಿರಾರು ವಚನಗಳನ್ನು ರಚಿಸುವ ಮೂಲಕ ತಮ್ಮ ನಿಲುವುಗಳನ್ನು, ಮನೋಧರ್ಮವನ್ನು ಸಾಮಾಜಿಕ ನೆಲೆಯಲ್ಲಿ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವುದರೊಂದಿಗೆ ಸ್ತ್ರೀಪರ ವಿಚಾರಗಳನ್ನು ಅಭಿವ್ಯಕ್ತ ಪಡಿಸಿದ್ದಾರೆ. ಹೀಗಾಗಿ ವಚನ ಸಾಹಿತ್ಯಕ್ಕೆ ಮಿಗಿಲು ಬೆಲೆಯಿದೆ.

ವಚನ ಸಾಹಿತ್ಯದ ನಂತರ ಕನ್ನಡದಲ್ಲಿ ರೂಪು ತಳೆದ ಸಾಹಿತ್ಯ ಪ್ರಕಾರಗಳೆಂದರೆ ರಗಳೆ ಮತ್ತು ಷಟ್ಪದಿ. ರಗಳೆಯ ಕವಿ ಎಂದೇ ಕೀರ್ತಿಭಾಜನನಾದ ಹರಿಹರ ರಗಳೆಗೆ ಒಂದು ಘನತೆಯನ್ನು ತಂದುಕೊಟ್ಟುದುದಲ್ಲದೆ ನೂರಾರು ರಗಳೆಗಳ ರಚನೆಗೆ ಕಾರಣನಾಗಿದ್ದಾನೆ. ಅಲ್ಲದೆ 'ಗಿರಿಜಾ ಕಲ್ಯಾಣ'ದಂತಹ ಚಂಪೂ ಕೃತಿಯನ್ನು ರಚಿಸುವ ಮೂಲಕ ಪಾಂಡಿತ್ಯವನ್ನು ಮೆರೆದಿದ್ದಾನೆ. ಅಲ್ಲದೆ ಆತ ತನ್ನ ಕೃತಿಗಳಲ್ಲಿ ಮಹಿಳೆಯರನ್ನು ವಿಶಿಷ್ಟವಾಗಿ ಚಿತ್ರಿಸಿದ್ದಾನೆ ಇದಕ್ಕೆ ಕಾರಣ ವಚನಕಾರರ ಸ್ತ್ರೀಪರ ಚಿಂತನೆಯ ಪ್ರಭಾವ ಹರಿಹರನ ಮೇಲೆ ಗಾಢವಾಗಿ ಉಂಟಾದುದ್ದು ಎನ್ನಬೇಕು.

'ಗಿರಿಜಾ ಕಲ್ಯಾಣ' ಹರಿಹರನ ಪಾಂಡಿತ್ಯ ಪೂರ್ಣ ಕೃತಿ. ಈ ಮೂಲಕ ಪ್ರಥಮ ಬಾರಿಗೆ ಮಹಿಳೆಯೊರ್ವಳನ್ನು ಕುರಿತು ಕಾವ್ಯ ರಚನೆ ಮಾಡಿದ ಕೀರ್ತಿ ಹರಿಹರನಿಗೆ ಸಲ್ಲುತ್ತದೆ. ಹರಿಹರನ

---

[೧೫] ಗೊಗ್ಗವ್ವೆಯ ವಚನಗಳು – ವಚನ ಕಮ್ಮಟ – ಸಂ: ಕೆ. ಮರುಳಸಿದ್ದಪ್ಪಾ, ಕಿ.ರಂ. ನಾಗರಾಜ ಪುಟ–೫೧೦

ಗಿರಿಜಾ ಕಲ್ಯಾಣದಲ್ಲಿ ಬರುವ ಸ್ತ್ರೀಪಾತ್ರಗಳು ಭಾರತೀಯ ಸಂಸ್ಕೃತಿಯ ಪ್ರತೀಕವೆ ಆಗಿವೆ. ಹೆಣ್ಣನ್ನು ಗೌರವದಿಂದ ಕಂಡು ಅವಳ ಸೌಖ್ಯವನ್ನು ಮನಸಾರೆ ಬಣ್ಣಿಸಿದ್ದಾನೆ. ಅವಳ ವ್ಯಕ್ತಿತ್ವದ ಹಿರಿಮೆಯನ್ನು ಕೊಂಡಾಡಿದ್ದಾನೆ.

"ಸಮಯಗುಣಿಯನಭಿಮಾನಿ ಸುಖಕಾರೆಯಂ ಸಮ ಯೌವನದ ಪುಣ್ಯ ಪೊರೆಯಂಧೀರೆಯಂ" ಎಂದಲ್ಲದೆ,

"ನುಡಿಪರವೆ ನಡೆಪರವೆ ಕಂಡುದೆಲ್ಲಾ ಪರವೆ
ಕೊಡುವುದಂ ಕೊಂಬುದುಂ ನೋಳ್ಪದೆಲ್ಲಂ ಪರವೆ"[೧೬]

ಎಂದು ಪ್ರೀತಿಯ ಉತ್ಕಟತೆಯನ್ನು ಬಣ್ಣಿಸುತ್ತ ಅವಳನ್ನು ತಾಯಿ, ಗುರು ಎಂದು ಭಾವಿಸಿದ್ದು ವಿನೂತನವಾಗಿದೆ.

ಹಾಗೆಯೇ ರಾಘವಾಂಕ ಕವಿಯ 'ಹರಿಶ್ಚಂದ್ರಕಾವ್ಯ' 'ಸತ್ಯ ಮೇವ ಜಯತೆ' ಎಂಬ ಲೋಕ ಸತ್ಯವನ್ನ ಸಾರುವ ಉತ್ಕೃಷ್ಟ ಕೃತಿಯಾಗಿದ್ದು, ಇಲ್ಲಿ ಬರುವ ಚಂದ್ರಮತಿಯನ್ನು ರಾಘವಾಂಕ ಕವಿ ಒಬ್ಬ ಭಾರತೀಯ ಸುಸಂಸ್ಕೃತ ಹೃದಯವಂತಿಕೆಯ ಸ್ತ್ರೀಯಾಗಿ ರೂಪಿಸಿದ್ದು ಗಮನಾರ್ಹವಾಗಿದೆ. ಪತಿ ಹರಿಶ್ಚಂದ್ರ ಅರಸೊತ್ತಿಗೆ ಬಿಟ್ಟು ಆಳಾದಾಗ, ಅರಮನೆ ಇನ್ನೊಬ್ಬರ ಸೊತ್ತಾದಾಗ ಅವಳು ಹೊರ ಹಾಕಿದ ದುಃಖ ವರ್ಣಾನಾತೀತವಾದುದು.

'ಓರಂತೆ ತಲ್ಲಣಿಸಿ ಹೆದರಿ ಕಣ್ಗೆಟ್ಟೋಡಿ
ಬಾರದಿರಬಾರದುರೆ ಸಾಯಬಾರದು ಬದುಕ
ಬಾರದೆಂಬಂತೆ ತನ್ನೊಡಲಿಂಗೆ ಬಪ್ಪ ದುಃಖಗಳಿಗೆ ಸಾಕ್ಷಿಯಾಗಿ"[೧೭]

ಎಂದು ಚಂದ್ರಮತಿ ಉಮ್ಮಳಿಸಿ ಬಂದ ದುಃಖವನ್ನು ತೋಡಿಕೊಂಡಿದ್ದಾಳೆ. ಅಲ್ಲದೆ ಲೋಹಿತಾಶ್ವನನ್ನು ಶವ ಸಂಸ್ಕಾರ ಮಾಡುವ ಸಂದರ್ಭದಲ್ಲಿ 'ಅಕಟಕಟ ಹಸುಳೆನೊಂದಿಹನು' ಎಂದು, 'ಕುಲವ ನೋಡದೆ ಬೇಡಿಕೊಂಬೆನ್, ಇವನು ನನ್ನ ಮಗನಲ್ಲ ನಿನ್ನ ಮಗನು' ಸ್ಮಶಾನ ಕಾಯುವ ಹರಿಶ್ಚಂದ್ರನಲ್ಲಿ ಮಗನ ಕಳೆಬರಕ್ಕೆ ಚಿತೆ ಇಡಲು ಅವಕಾಶ ಮಾಡಿಕೊಡಬೇಕೆಂದು ಬೇಡಿಕೊಳ್ಳುವ, ಪ್ರಲಾಪಿಸುವ ದೃಶ್ಯ ಹೃದಯ ಹಿಂಡುವಂತ್ತಿದ್ದು, ಒಬ್ಬ ಉದಾತ್ತ ಹೆಣ್ಣು ಮಗಳ ವಾತ್ಸಲ್ಯಮಯ ಹೃದಯದ ನೋವನ್ನು ಚಿತ್ರಿಸಿದ್ದಾನೆ.

---

೧೬ ಗಿರಿಜಾ ಕಲ್ಯಾಣ – ಸಂ: ಟಿ.ಎಸ್. ವೆಂಕಣ್ಣಯ್ಯ ಪುಟ–೪೯

೧೭ ಕನ್ನಡ ಕಾವ್ಯ ಕಂಡ ಹೆಣ್ಣು – ಡಾ. ಸಿ. ವೀರಣ್ಣ – ಪುಟ–೧೪೯

'ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ'ಯ ಕವಿ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾ ಮಂಜರಿ'ಯಲ್ಲಿ ಸ್ತ್ರೀ ಪಾತ್ರಣ ತುಂಬಾ ಭಿನ್ನವಾಗಿದ್ದು, ಇಲ್ಲಿ ದ್ರೌಪದಿಯ ದಿಟ್ಟತನ, ವ್ಯವಸ್ಥೆಯ ವಿರುದ್ಧ ಅವಳು ಪ್ರತಿಭಟಿಸುವ ರೀತಿ, ಗಂಡಂದಿರನ್ನು ಮೂದಲಿಸುವ , ಛೇಡಿಸುವ ಬಗೆ ಇಂದಿನ ಸ್ತ್ರೀ ಕುಲಕ್ಕೆ ಬಳುವಳಿಯಾಗಿ ಬಂದಂತಿವೆ. ಜೂಜಿನಲ್ಲಿ ಸೋತ ಗಂಡಂದಿರಿಗೆ "ಪತಿಗಳೆನ್ನನು ಮಾರಿ ಧರ್ಮ ಸ್ಥಿತಿಯ ಕೈಕೊಂಡರು"[೧೮] ಗಂಡಂದಿರಿಗೆ ಹೆಂಡತಿಯ ಮಾನಕ್ಕಿಂತ ಧರ್ಮವೆ ಮುಖ್ಯವಾಯಿತೆಂದು ಪ್ರತಿಕ್ರಿಯಿಸುತ್ತಾಳೆ. ಅಲ್ಲದೆ ತನ್ನನ್ನು ಸಭೆಯಲ್ಲಿ ಅಪಮಾನಗೊಳಿಸಿದಾಗಲೂ ಗಂಡರೈವರೂ ಸುಮ್ಮನೆ ತಲೆ ತಗ್ಗಿಸಿಕೊಂಡು, ಕುಳಿತಿದ್ದನ್ನು ನೋಡಿ ಪಿತ್ತ ನೆತ್ತಗೇರಿ "ಗಂಡರೈವರು ಮೂರು ಲೋಕದ ಗಂಡರೊಬ್ಬಳನಾಳಲಾರಿರಿ ಗಂಡರೋ ನೀವ್ ಷಂಡರೋ?"[೧೯] ಎಂಬ ಮಾತುಗಳು ಪಾಂಡವರ ಪುರುಷತ್ವಕ್ಕೆ ಸವಾಲು ಹಾಕಿದಂತಿವೆ. ಹೀಗಾಗಿ ದ್ರೌಪದಿಯ ಪಾತ್ರ ಇಲ್ಲಿ ಧೀರ, ದಿಟ್ಟ ನಿಲುವಿನ ನಾರಿಯಂತೆ ಚಿತ್ರಣಗೊಂಡಿದೆ.

ಉಪಮಾಲೋಲ ಲಕ್ಷ್ಮೀಶ 'ಜೈಮಿನಿ ಭಾರತ'ದಲ್ಲಿ ಕಥಾನಾಯಕ ಅರ್ಜುನನ ಶೌರ್ಯ ಸಾಹಸ ಮತ್ತು ಕೃಷ್ಣ ಪ್ರೀತಿಯ ಜತೆಗೆ ಅರ್ಜುನನ ಬದುಕಿನೊಂದಿಗೆ ಹೆಣೆದುಕೊಂಡ ಕೆಲವು ಸ್ತ್ರೀ ಪಾತ್ರಗಳು ಆದರ್ಶ ಸತಿತ್ವದ ಸಾಂಪ್ರದಾಯಿಕ ಪ್ರತೀಕಗಳಾಗಿ ಹೆಣೆದುಕೊಂಡಿವೆ. ಸೌಂದರ್ಯ-ಸಂಪನ್ನತೆ, ಸತಿತ್ವ-ಪಾತಿವ್ರತ್ಯ, ಮಾತೃತ್ವದಂತಹ ಉದಾತ್ತ ಗುಣಗಳು ಅಲ್ಲಿ ಅಭಿವ್ಯಕ್ತಗೊಂಡಿವೆ. ರಾಜಕುಮಾರಿ ಪ್ರಮಿಳೆಯ ಪಾತ್ರವನ್ನು ಕ್ರೌರ್ಯ-ಸಾಹಸ-ಆತ್ಮ ವಿಶ್ವಾಸವುಳ್ಳ ಮಹಿಳೆಗೆ ಮಾದರಿಯಾಗಿ ಚಿತ್ರಿಸಲಾಗಿದೆ.

ಕೀರ್ತನೆಗಳ ಮೂಲಕ ಕನ್ನಡ ಸಾರಸ್ವತ ಲೋಕಕ್ಕೆ ವಿಶಿಷ್ಟ ಕೊಡುಗೆ ನೀಡಿದ ದಾಸರಲ್ಲಿ ಕನಕದಾಸ, ಪುರಂದರದಾಸ, ಪ್ರಸನ್ನದಾಸ, ಶ್ರೀಪಾದರಾಯ ಮೊದಲಾದರು ಪ್ರಮುಖರು. ಇವರು ತಮ್ಮ ಕೀರ್ತನೆಗಳಲ್ಲಿ ಭಕ್ತಿಸುಧೆಯ ಜೊತೆಗೆ ಸ್ತ್ರೀಪರ ನಿಲುವುಗಳನ್ನು ಅಭಿವ್ಯಕ್ತಿಸಿದ್ದನ್ನು ಕಾಣುತ್ತೇವೆ. ಪುರಂದರದಾಸರು ಭಕ್ತಿ-ಭಾವ ಪರವಶರಾಗಿ ತಮ್ಮ ಹೆಂಡತಿಯನ್ನು ಹಾರೈಸಿದ್ದು ಅನನ್ಯವಾಗಿದೆ.

"ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯಾ"[೨೦]

---

೧೮ ಕುಮಾರವ್ಯಾಸ ಮಹಾಕವಿಯ ಕರ್ಣಾಟಕ ಭಾರತ ಕಥಾ ಮಂಜರಿ - ಸಂ: ಕುವೆಂಪು, ಮಾಸ್ತಿ - ಪುಟ-೨೫೮

೧೯ ಕುಮಾರವ್ಯಾಸ ಮಹಾಕವಿಯ ಕರ್ಣಾಟಕ ಭಾರತ ಕಥಾ ಮಂಜರಿ - ಸಂ: ಕುವೆಂಪು, ಮಾಸ್ತಿ - ಪುಟ-೨೫೯

೨೦ ಪುರಂದರದಾಸರ ಕೀರ್ತನೆಗಳು - ವಸಂತ ಕುಷ್ಟಗಿ, ಮಂದಾಕಿನಿಬಾಯಿ - ಪುಟ-೨೪

ಎಂದು ಸಾಧ್ವಿ ಹೆಂಡತಿಯ ಬಗ್ಗೆ ಮಚ್ಚುಗೆಯ ಮಾತುಗಳನ್ನಾಡಿದ್ದಾರೆ.

ಕಾಲಾಜ್ಞಾನಿಯಾದ ಕನಕದಾಸರು ಹೆಣ್ಣನ್ನು ಮನುಷ್ಯ ಸಂಬಂಧಿ ನೆಲೆಯಲ್ಲಿ ಅಭಿವ್ಯಕ್ತಿಸಿದ್ದಾರೆ. "ವನಿತೆಯ ಬಿಟ್ಟು ತಪವಿರಲು ಬೇಡ"[೨೧] ಎಂದಲ್ಲದೆ "ಮಂದಿಪೆಣ್ಣನು ಸಭೆಯಲ್ಲಿ ಸೀರೆ ಸೆಳೆಯಲು ಗಂಡರೈವರು ನೋಡಿ ಏನು ಮಾಡುತಿರ್ದರಯ್ಯ"[೨೨] ಎಂಬಂತಹ ಮಾತಿನಲ್ಲಿ ಕನಕದಾಸರು ಸ್ತ್ರೀಪರವಾಗಿ ಚಿತ್ರಿಸುತ್ತ, ಹೀನಕೃತ್ಯವನ್ನು ಕಟುವಾಗಿ ಟೀಕಿಸುತ್ತಾರೆ.

ಕನ್ನಡದಲ್ಲಿ ಮಹಿಳಾಪರ ಧ್ವನಿಯನ್ನು ಸಶಕ್ತವಾಗಿ ಅಭಿವ್ಯಕ್ತಿಸಿದ ಕೀರ್ತಿ ಸಂಚಿ ಹೊನ್ನಮ್ಮನಿಗೆ ಸಲ್ಲುತ್ತದೆ. ತನ್ನ 'ಹದಿಬದೆಯ ಧರ್ಮ' ಕೃತಿ ಸ್ತ್ರೀ ಕುಲದ ಮೀಮಾಂಸೆಯಾಗಿದೆ. ಅಲ್ಲಿ ಹೆಣ್ಣಿನ ಪರವಾದ ಪ್ರತಿಭಟನೆ ಮತ್ತು ಸಮರ್ಥನೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.



"ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು ಪೆಣ್ಣು
ಪೆಣ್ಣಿಂದೇಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು"[೨೩]

ಎಂದು ಪ್ರತಿಯೊಬ್ಬರ ಜನನದ ಮೂಲ ಹೆಣ್ಣು ಎಂದು ನಿರೂಪಿಸುವ ಮೂಲಕ ಹೆಣ್ಣನ್ನು ವಿನಾಕಾರಣ ದೂಷಿಸುವ ಮನೋಧರ್ಮವನ್ನು ಟೀಕಿಸುತ್ತಾಳೆ. ಅಲ್ಲದೆ ಹೆಣ್ಣನ್ನು ಭಾರತೀಯ, ಸಂಸ್ಕೃತಿಯ ಭಾಗವಾಗಿ ಚಿತ್ರಿಸಿದ್ದಾಳೆ. ಲಿಂಗ ಭೇದವನ್ನು ಅಲ್ಲಗಳೆಯುವ ಸಂಚಿ ಹೊನ್ನಮ್ಮ ಲಿಂಗ ಸಮಾನತೆಯನ್ನ ಬಲವಾಗಿ ಪ್ರತಿಪಾದಿಸುತ್ತ.

"ಕುವರನಾದೊಡೆ ಬಂದ ಗುಣವೇನದರಿಂದೆ
ಕುವರಿಯಾದೊಡೆ ಕುಂದೇನು?
ಇವರೀರ್ವರೊಳೇಳಿಗೆ ಪಡೆವರಿಂದೆ
ಸವನಿಪುವಿಹ ಪರ ಸೌಖ್ಯ"[೨೪]

---

[೨೧] ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು – ಸಂ: ಸುಧಾಕರ – ಪುಟ-೨೪
[೨೨] ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು – ಸಂ: ಸುಧಾಕರ – ಪುಟ-೨೩
[೨೩] ಕನ್ನಡ ಪ್ರತಿಭಟನೆ ಕಾವ್ಯ – ಸಂ: ಸಿ. ವೀರಣ್ಣ – ಪುಟ – ೬೮
[೨೪] ಕನ್ನಡ ಪ್ರತಿಭಟನೆ ಕಾವ್ಯ – ಸಂ: ಸಿ. ವೀರಣ್ಣ – ಪುಟ-೮

ಎಂದು ಕುವರ–ಕುವರಿ ಯಾರಾದರೇನು ಅವರೀರ್ವರು ಮಕ್ಕಳಲ್ಲವೆ, ಅವರಲ್ಲಿ ಭೇದಭಾವ ಎಣಿಸುವಿರಿ ಏಕೆ ಎಂದು ಪ್ರಶ್ನಿಸುತ್ತಾಳೆ. ಹಾಗೆಯೇ ನಾಗವರ್ಮನ 'ಕರ್ಣಾಟಕ ಕಾದಂಬರಿ'ಯಲ್ಲಿ ಮಹಾಶ್ವೇತೆ ಹಾಗೂ ನೇಮಿಚಂದ್ರನ 'ಲೀಲಾವತಿ ಪ್ರಬಂಧ'ದಲ್ಲಿ ಲೀಲಾವತಿಯ ಪಾತ್ರ ಚಿತ್ರಣ ವಿಶಿಷ್ಟವಾಗಿ ಮೂಡಿ ಬಂದಿವೆ. ಅಲ್ಲದೆ ಜನ್ನನ 'ಯಶೋಧರ ಚರಿತೆ'ಯಲ್ಲಿ ಯಶೋಧರೆಯ ಕಾಮವಾಂಛೆ, ಅವಳು ಅಷ್ಟಾವಂಕನಲ್ಲಿ ಒಂದಾಗುವಿಕೆಯ ಪ್ರಸಂಗ, ಅದರ ಉನ್ಮತ್ತತೆಯಲ್ಲಿ 'ಮಿಕ್ಕ ಗಂಡರ್ ಸಮಸೋದರರೆಂದು ತಿಳಿಪಿದಳ್ ನಂಬುಗೆಯಂ' ಎಂದು ಅಷ್ಟಾವಂಕನಲ್ಲಿ ಹೇಳುವ ಮಾತು ಅವಳ ನಿಷ್ಠೆಗೆ ಸಾಕ್ಷಿಯಾಗಿದೆ.

ಹತ್ತೊಂಬತ್ತನೆಯ ಶತಮಾನದ ಕೊನೆಗೆ ಬರುವ ಕವಿ ಮುದ್ದಣ. ಇತನನ್ನು 'ಹೊಸಗನ್ನಡದ ಮುಂಗೋಳಿ' ಎಂದು ಕರೆಯಲಾಗುತ್ತದೆ. 'ಶ್ರೀರಾಮ ಪಟ್ಟಾಭಿಷೇಕ', 'ಅದ್ಭುತ ರಾಮಾಯಾಣ', 'ರಾಮಾಶ್ವಮೇಧ'ದಂತಹ ಕೃತಿಗಳ ಮೂಲಕ ಕನ್ನಡ ಭಾಷೆ, ವಸ್ತು, ಅಭಿವ್ಯಕ್ತಿಗೆ ಹೊಸರೂಪವೊಂದನ್ನು ತಂದುಕೊಟ್ಟಿದ್ದಾರೆ. ರಾಮಾಶ್ವಮೇಧ ಮುದ್ದಣನ ಮಹತ್ವದ ಕೃತಿ. ಈ ಕೃತಿಯಲ್ಲಿ ಬರುವ 'ಮುದ್ದಣ–ಮನೋರಮೆಯರ ಸರಸ ಸಲ್ಲಾಪ' ಆ ಕೃತಿಗೆ ಸುವರ್ಣದ ಚೌಕಟ್ಟಿನಂತಿದೆ.ಮಳೆಯಿಂದ ಬೇಸತ್ತ ಹೆಂಡತಿಗೆ ಕಥೆ ಹೇಳಲು ಮುದ್ದಣ ಸಂಸ್ಕೃತ ಪದಗಳನ್ನು ಬೆರೆಸಿ ಮಾತನಾಡುತ್ತಾನೆ. ತಕ್ಷಣ ಮನೋರಮೆ ಅದಕ್ಕೆ ಪ್ರತಿಕ್ರಿಯಿಸುತ್ತ 'ಓ ಓ ತಡೆ' ಎನ್ನುತ್ತಾಳೆ. 'ನೀರಿಳಿಯದ ಗಂಟಲೋಳ್ ಕಡಬಂ ತುರಿಕಿದಂತಾಯ್ತು' ಎನ್ನುತ್ತಾಳೆ. "ಕನ್ನಡದ ಸೊಗಸನ್ನೆ ಅರಿಯದ ನನಗೆ ಈ ಸಂಸ್ಕೃತದ ಸಮಾರಾಧನೆಯೆ? ಎಂದು ಕೇಳುತ್ತಾಳೆ"[೨೫] ಪ್ರೇಮ ಸಲ್ಲಾಪದಲ್ಲಿ ಅಭಿವ್ಯಕ್ತಗೊಂಡ ಈ ಸಂಭಾಷಣೆಯೇ ಸಾಹಿತ್ಯ ಎಂಬುದು ಜನ ಸಾಮಾನ್ಯರಿಗೂ ತಿಳಿಯುವ ಸರಳ ಸುಂದರ ಭಾಷೆಯಾಗಿರಬೇಕೆಂಬ ಸ್ತ್ರೀಯೋರ್ವಳ ಸಾಹಿತ್ಯಕ ಸಂವೇದನೆಯಾಗಿದೆ. ಹೀಗೇ ಮುದ್ದಣ ಮನೋರಮೆಯ ಪಾತ್ರ ಚಿತ್ರಣದ ಮೂಲಕ ಸುಂದರ ಸರಳ ಹೊಸಗನ್ನಡದ ಅಗತ್ಯತೆಯನ್ನು ಪ್ರಸ್ತಾಪಿಸಿದ್ದು, ಕನ್ನಡ ಸಾಹಿತ್ಯದಲ್ಲಿಯೆ ವಿನೂತನವಾಗಿದೆ. ಈ ಕುರಿತು ಡಾ. ಚೆನ್ನವೀರ ಕಣವಿಯವರು "ಕನ್ನಡ ಸಾಹಿತ್ಯದಲ್ಲಿ ಆಧುನಿಕತೆ ಎಂಬುದು ಮುದ್ದಣನ ಕಥನ ಶೈಲಿಯಿಂದ ಆರಂಭಗೊಂಡು ಮನೋರಮೆಯು ಪ್ರಶ್ನಿಸುವ ಮನೋಭಾವವೆ ಆಧುನಿಕ ಮನಸ್ಸಿನದು"[೨೬] ಎಂಬುದು ಮನೋಜ್ಞವಾಗಿದೆ.

---

[೨೫] ಹೊಸಗನ್ನಡ ಸಾಹಿತ್ಯ ಚರಿತ್ರೆ – ಎಲ್.ಎಸ್. ಶೇಷಗಿರಿರಾವ ಪುಟ–೨೭, ೨೮

[೨೬] ಸಂಯುಕ್ತ ಕರ್ನಾಟಕ ದಿನಪತ್ರಿಕೆ – ಚನ್ನವೀರ ಕಣವಿ – ಪುಟ–೮

ಹತ್ತೊಂಬತ್ತನೆಯ ಶತಮಾನದ ಕೊನೆ ಇಪ್ಪತ್ತನೆಯ ಶತಮಾನದ ಪ್ರಾರಂಭ ಕಾಲವನ್ನು ಹೊಸ ಹುಟ್ಟುಗಳ ಕಾಲ, ಪುನರುಜ್ಜೀವನ ಕಾಲ, ಆಧುನಿಕ ಕಾಲವೆಂದು ಕರೆಯಲಾಗಿದೆ. ಬ್ರಿಟೀಷರು ನೀಡಿದ ಇಂಗ್ಲೀಷ ಶಿಕ್ಷಣದಿಂದ ಭಾರತೀಯ ಮನಸ್ಸುಗಳು ಜಗತ್ತಿನ ಎಲ್ಲ ಜ್ಞಾನ-ವಿಚಾರ-ಆಡಳಿತ-ಸಾಹಿತ್ಯ-ಸಂಸ್ಕೃತಿಯ ನೆಲೆಗಳನ್ನು ಅರಿತುಕೊಳ್ಳಲು ಸಾಧ್ಯವಾಯಿತು. ಹೀಗಾಗಿ ಭಾರತೀಯ ಮನಸುಗಳು ಅದಕ್ಕೆ ಪ್ರತಿಯಾಗಿ ಸಾಹಿತ್ಯಕ ಸಾಂಸ್ಕೃತಿಕವಾಗಿ ಅಭಿವ್ಯಕ್ತಿಸ ತೊಡಗಿದರು. ಇದರಿಂದಾಗಿ ಹೊಸ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತು. ಜೊತೆಗೆ ಆಧುನಿಕತೆ ಎನ್ನುವುದು ಪ್ರವೇಶವಾಯಿತು. ಇದರಿಂದಾಗಿ ಕನ್ನಡದಲ್ಲಿ ಹೊಸಗನ್ನಡ ಸಾಹಿತ್ಯ ಉದಯವಾಯಿತು. ಕನ್ನಡದ ಆಚಾರ್ಯ ಪುರುಷ ಬಿ.ಎಂ. ಶ್ರೀಯವರು 'ಇಂಗ್ಲೀಷ ಗೀತೆಗಳು' [೧೯೨೧] ಸಂಕಲನವನ್ನು ಪ್ರಕಟಿಸುವ ಮೂಲಕ ನವೋದಯ ಸಾಹಿತ್ಯಕ್ಕೆ ನಾಂದಿ ಹಾಡಿದರು. ಆ ಸಂಕಲನದ 'ಪ್ರಾರ್ಥನೆ' ಎಂಬ ಕವಿತೆಯಲ್ಲಿ 'ಅವಳ ತೊಡುಗೆ ಇವಳಿಗಿಟ್ಟು ನೋಡಬಯಸಿದೆ' ಎಂದು ಚಿತ್ರಿಸಿದ್ದು, ಅನನ್ಯವಾಗಿದೆ. ಅನಂತರದ ಹೊಸಗನ್ನಡದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಸಾಹಿತ್ಯ ಘಟ್ಟಗಳನ್ನು ಮಾಡಲಾಗಿದೆ. ಇವುಗಳಲ್ಲಿ ಮಹಿಳೆಯ ಚಿತ್ರಣ ವಿಶೇಷವಾಗಿ ಅಭಿವ್ಯಕ್ತವಾಗಿದೆ.

ನವೋದಯದ ಪ್ರಸಿದ್ಧ ಕವಿ, ಮಹಾಕವಿ ಕುವೆಂಪುರವರು ತಾಯ್ನಾಡಿನ ದುಃಸ್ಥಿತಿಗೆ ಕುರುಡಾಗಿ ಮೂರ್ತಿಪ್ರಜ್ಞೆಯಲ್ಲಿ ತೊಡಗಿದವರನ್ನು ಎಚ್ಚರಿಸುತ್ತ, ತಾಯ್ನಾಡಿನ ಸೇವೆ ಮಾಡಿದ್ದಾರೆ. ಇದಕ್ಕೆ ಅವರ 'ಪಾಂಚಜನ್ಯ' ಸಂಕಲನದ 'ಇಂದಿನ ದೇವರು' ಕವಿತೆ ಸಾಕ್ಷಿಯಾಗಿದೆ. ಅಲ್ಲಿ 'ನೂರು ದೇವರನೆಲ್ಲ ನೂಕಾಚೆ ದೂರ, ಭಾರತಾಂಬೆಯದೇವಿ ನಿಮಗಿಂದು ಪೂಜಿಸುವೆ ಭಾರ' ಎಂದು ಮನದುಂಬಿ ಹಾಡಿದ್ದಾರೆ. 'ಭಾರತಾಂಬೆ ಜನನಿ' ಕವನದಲ್ಲಿ ಭಾರತಾಂಬೆಯ ಮಡಿಲಲ್ಲಿ ಜನಿಸಿದ ಮಕ್ಕಳ ಜನ್ಮ ಧನ್ಯವಾಯಿತು ಎಂದಿದ್ದಾರೆ. ಅಲ್ಲದೇ 'ಶ್ರೀ ರಾಮಾಯಣ ದರ್ಶಣಂ'ದಲ್ಲಿ

"ಪೆಣ್ಣೊಲಿದ ನಲ್ಲನಿಕೆ ಗಂಡೊಲಿದ ನಲ್ಲೆಯರೆ
ಸಿರಿಬಾಳ್ತೆ ಸಿಂಗಾರ ಸೊಗಕೆ ಹೊಯಿಕೈಹುದೆ
ಪೇಳ್ ಬದುಕಿನಲ್ಲಿ"[೨೭]

---

[೨೭] ಶ್ರೀ ರಾಮಾಯಣ ದರ್ಶನಂ – ಕುವೆಂಪು – ಪುಟ-೫೬

ಎಂದು ಹೆಣ್ಣು ಗಂಡನು, ಗಂಡು ಹೆಣ್ಣನ್ನು ಒಲಿದು ಒಪ್ಪಿದಾಗಲೇ ಸಹಬಾಳ್ವೆ ಎಂದು ಹೇಳುತ್ತಾರೆ. ಅಲ್ಲದೆ ಸೀತೆಯು ಅಗ್ನಿ ಪರೀಕ್ಷೆಯ ಸಂದರ್ಭದಲ್ಲಿ ಸೀತೆಯೊಂದಿಗೆ ರಾಮನನ್ನೂ ಅಗ್ನಿ ಪರೀಕ್ಷೆಗೆ ಒಳಪಡಿಸಿದ್ದು ಗಮನಾರ್ಹವಾಗಿದ್ದು, ಲಿಂಗ ಸಮಾನತೆಗೆ ದಿಕ್ಸೂಚಿಯಾಗಿದೆ.

'ವರಕವಿ' ಎಂಬ ಕೀರ್ತಿಗೆ ಪಾತ್ರರಾದ ದ. ರಾ. ಬೇಂದ್ರೆಯವರು ಮಹಿಳೆಯರ ಸಂವೇದನೆಗಳನ್ನು ಅಭಿವ್ಯಕ್ತಿಸುವ ಅನೇಕ ಕವಿತೆಗಳನ್ನು ಬರೆದಿದ್ದಾರೆ. 'ಹುಬ್ಬಳ್ಳಿಯಾಂವಾ', 'ಮೊದಲಗಿತ್ತಿ', 'ಗಂಗಾವತರಣ', 'ನನ್ನಕಂದ', 'ಗರಿ', 'ನನ್ನಕೈ ಹಿಡಿದಾಕೆ', 'ತಂಗಿ ಜಾನಕಮ್ಮ', 'ಒಲವೇ ನಮ್ಮ ಬದುಕು', ಸಖಿಗೀತ–ಮೊದಲಾದ ಕವಿತೆಗಳಲ್ಲಿ ಮಹಿಳೆಯರ ವ್ಯಕ್ತಿತ್ವದ ವಿಭಿನ್ನ ಮುಖಗಳು ವ್ಯಕ್ತವಾಗಿವೆ.

"ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವೆಯ ಒಲಿಮ್ಯಾಗ
ಸುಟ್ಟು ಹಪ್ಪಳದ್ದಾಂಗ ಸೊರಗಿದ ಸೊಪ್ಪಾಂಗ
ಬಂತಂತ ಮುಪ್ಪು ಬ್ಯಾಗ"[೨೮]

ಎಂದು ಬದುಕಿನ ನಾಯಿಕೆಗೆ ಮುಖಾಮುಖಿಯಾಗುವುದನ್ನು ಕಾಣುತ್ತೇವೆ. ಅಲ್ಲದೇ 'ಸಖಿಗೀತ'ದಲ್ಲಿ 'ಸಖಿ ನಮ್ಮ ಸಖ್ಯದ ಅಖ್ಯಾನ ಕಟುಮಧುರ ವ್ಯಾಖ್ಯಾನ ದೊಡಗೂಡಿ ವಿವರಿಸಲೇ' ಎಂದು ಒಲವಿನಿಂದ ಕೇಳುತ್ತಾರೆ. ಅಲ್ಲದೆ 'ಪುಟ್ಟವಿಧವೆ' ಕವಿತೆಯಲ್ಲಿ ಬಾಲ್ಯವಿವಾಹದ ದುರಂತತೆಯನ್ನು ಚಿತ್ರಿಸುತ್ತಾರೆ.

ಪ್ರೇಮ ಕವಿ ಎಂದೇ ಪ್ರಸಿದ್ಧರಾದ ಕೆ. ಎಸ್. ನರಸಿಂಹಸ್ವಾಮಿಯವರು ತಮ್ಮ ಕವಿತೆಯಲ್ಲಿ ಹೆಣ್ಣಿನ ಭಾವನೆಗಳನ್ನು ಸೂಕ್ಷ್ಮವಾಗಿ ಸಮರ್ಥವಾಗಿ ಚಿತ್ರಿಸಿದ್ದಾರೆ. ಅವರ 'ಮೈಸೂರು ಮಲ್ಲಿಗೆ' 'ಶಿಲಾಲತೆ', 'ದುಂಡು ಮಲ್ಲಿಗೆ', 'ತೆರೆದ ಬಾಗಿಲು' ಮೊದಲಾದ ಕವನಸಂಕನಗಳಲ್ಲಿ ಇಂತಹ ಅನೇಕ ಕವಿತೆಗಳನ್ನು ಕಾಣುತ್ತೇವೆ. ಅಲ್ಲದೆ ಭೂಮಿತಾಯಿಯನ್ನು ನರಸಿಂಹಸ್ವಾಮಿಯವರು ಅನ್ನಪೂರ್ಣೆಯೆಂದು ಚಿತ್ರಿಸಿದ್ದಾರೆ. ತನ್ನ ಸಖಿಯನ್ನು 'ನನ್ನವಳು ನನ್ನದೆಯ ಹೊನ್ನಾಡು ಆಳುವವಳು' ಎಂದು ಬಣ್ಣಿಸಿದ್ದಾರೆ. ಅಲ್ಲದೆ ಹೆಂಡತಿಯನ್ನು ಜಿಟ್ಟರದ ಗಂಡನೊಬ್ಬ ಅವಳ ಅಂತಸ್ತನ್ನು ಕುರಿತು ಹೇಳಿದ್ದನ್ನು ಹೀಗೆ ಅಭಿವ್ಯಕ್ತಿಸಿದ್ದಾರೆ.

---

[೨೮] ಒಲವೇ ನಮ್ಮ ಬದುಕು – ದ.ರಾ. ಬೇಂದ್ರೆ – ಪುಟ–೬೦

“ಹೆಂಡತಿಯೊಬ್ಬಳು ಮನೆಯೊಳಗಿದ್ದರೆ
ನನಗದು ಕೋಟಿ ರೂಪಾಯಿ
ಹೆಂಡತಿಯೊಬ್ಬಳು ಹತ್ತಿರವಿದ್ದರೆ
ನಾನು ಒಬ್ಬ ಸಿಪಾಯಿ”[೨೯]

ಎನ್ನುವಲ್ಲಿ ಗಂಡ ಊರಿಗೆ ಸರದಾರನಾಗಿದ್ದರೂ ಮನೆಯಲ್ಲಿ ಹೆಂಡತಿಗೆ ಸಿಪಾಯಿಯೇ ಎಂದು ನಿರೂಪಿಸಲಾಗಿದೆ. ಜತೆಗೆ ‘ರೈಲ್ವೆ ನಿಲ್ದಾಣ’ದಲ್ಲಿ ಕವಿತೆಯಲ್ಲಿ ಚೊಚ್ಚಿಲ ಹೆರಿಗೆ ಮುಗಿಸಿಕೊಂಡು ಗಂಡನ ಮನೆಗೆ ಹೊರಟ ಮಗಳು (ಮೀನಾ) ತನ್ನ ತಾಯಿಯೊಂದಿಗೆ ನಡೆಸುವ ಸಂವಾದ ಹೃದಯ ಸ್ಪರ್ಶಿಯಾಗಿದೆ. ‘ಇಲ್ಲಿ ಮಗಳು ಇಲ್ಲಿಂದಲೇ ಕೈಮುಗಿವೆ, ಅಲ್ಲಿಂದಲೇ ಹರಸು’ ಎಂದು ತಾಯಿಯಲ್ಲಿ ನಿವೇದಿಸಿ ಕೊಳ್ಳುವ ಮಾತು ಕಣ್ಣಂಚಿನಲ್ಲಿ ನೀರು ಜಿನಿಗಿಸುವಂತಿದೆ. ಜಿ.ಎಸ್. ಶಿವರುದ್ರಪ್ಪನವರು ಮನದನ್ನೆ ಕವಿತೆಯಲ್ಲಿ ಹೆಣ್ಣನ್ನು ಬಾಳಿನ ಆಧಾರ ಸ್ತಂಭ ಎನ್ನುವ ಹಾಗೆ ಚಿತ್ರಿಸಿದ್ದಾರೆ.

“ಮನದನ್ನೆ ಒಲೆಯ ಬಳಿ ಕುಳಿತಾಗ
ಪ್ರಾಚೀನ ಋಷಿಕನ್ಯೆ ಮಧುರ ಮಂಗಳಮೂರ್ತಿ
ಜೀವ ಯಾತ್ರೆಯ ಪಥಕೆ ಸಹಯಾತ್ರಿ ಮೇಣ್ ಸ್ಫೂರ್ತಿ”[೩೦]

ಹೆಣ್ಣು ಕೇವಲ ಪುರುಷನಿಗೆ ಮನದನ್ನೆ ಮಾತ್ರವಲ್ಲ ಬಾಳಿನ ಪಥಕ್ಕೆ ಸಹವರ್ತಿಯಾಗಿ, ಆತನಿಗೆ ಸ್ಫೂರ್ತಿಯಾಗಿ ನಿಲ್ಲಬಲ್ಲ ಶಕ್ತಿಯಾಗಿದ್ದಾಳೆಂದು ಹೇಳಿದ್ದಾರೆ. ಹಾಗೆಯೇ ಕವಿ ಕೃ. ಗೋಕಾಕರು ‘ಬೆಡಗಿ’ ಕವಿತೆಯಲ್ಲಿ ಹೆಣ್ಣಿನ ಶ್ರಮ ಸಂಸ್ಕೃತಿಯ ಜೀವನವನ್ನು ಚಿತ್ರಿಸಿದ್ದಾರೆ.

“ನೂರು ಹೆಣ್ಣಿನ ಹೆಣ್ಣುತನವೆ ಹೋಗಿ
ಕೂಲಿ ಹೆಣ್ಣಾಗಿ ಬರಿ ಯಂತ್ರವಾಗಿ”[೩೧]

ಎಂದು ದುಡಿಯುವುದಕ್ಕಾಗಿಯೇ ಹುಟ್ಟಿದ್ದಾಳೆ. ದುಡಿ ದುಡಿದು ಅವಳಲ್ಲಿಯ ಕೋಮಲವಾದ ಭಾವನೆಗಳೆಲ್ಲ ಕಠೋರವಾಗಿ ಯಂತ್ರ ಸದೃಶ್ಯಳಾದ ಸಂದರ್ಭ ಹೆಣ್ಣಿನ ದೀನಾವಸ್ಥೆಯನ್ನು ದಾಖಲಿಸುತ್ತದೆ. ‘ಚುಟುಕು ಬ್ರಹ್ಮ’ ಎಂದೇ ಹೆಸರಾದ ದಿನಕರ ದೇಸಾಯಿಯವರು ವೇಶ್ಯೆಯ ವ್ಯವಹಾರಿಕ ಬದುಕನ್ನು ಹೀಗೆ ಬಿಂಬಿಸಿದ್ದಾರೆ.

---

[೨೯] ಆಯ್ದ ಕವಿತೆಗಳು – ಕೆ.ಎಸ್. ನರಸಿಂಹ ಸ್ವಾಮಿ – ಪುಟ-೩೦

[೩೦] ಮನದನ್ನೆ, ಚಲವು ಒಲವು – ಜಿ.ಎಸ್. ಶಿವರುದ್ರಪ್ಪ – ಪುಟ-೧೮

[೩೧] ಬೆಡಗಿ, ಕನ್ನಡ ಪ್ರತಿಭಟನಾ ಕಾವ್ಯ – ಸಂ: ಸಿ. ವೀರಣ್ಣ – ಪುಟ-೧೨೯

"ಸೂಳೆಯಾದರು ರಾಮಪುರಂ ಸಾಂತಕ್ಕ
ಅವಳ ವ್ಯವಹಾರ ಚೊಕ್ಕ
ದೊಡ್ಡ ಹದಿಬದೆಯಾದರೂ ಅವಳ ತಂಗಿ ಏನವಳ ಭಂಗಿ"[೩೨]

ವೇಶ್ಯೆಯಾಗಿದ್ದರು ವ್ಯವಹಾರಿಕವಾಗಿ ಚೊಕ್ಕ ಗುಣಗಳನ್ನು ಹೊಂದಿದವಳನ್ನು ಗರತಿಯೊಂದಿಗೆ ಹೋಲಿಕೆ ಮಾಡುವದರೊಂದಿಗೆ ಅವರ ಬಗ್ಗೆ ಪ್ರೀತಿ, ಅನುಕಂಪವನ್ನು ಅಭಿವ್ಯಕ್ತ ಪಡಿಸುವಂತಹ ಸಂವೇದನೆಗಳನ್ನು ಇಲ್ಲಿ ಕಾಣುತ್ತೇವೆ. ಅಲ್ಲದೆ ಮಧುರಚೆನ್ನರ ನನ್ನನಲ್ಲ, ಕೆ. ಎಸ್.ನಿಸ್ಸಾರ ಅಹಮ್ಮದ್‌ರ 'ಸಮಗ್ರ ಕವಿತೆಗಳಲ್ಲಿ' ಚೆನ್ನವೀರ ಕಣವಿಯವರ 'ಹೊಂಬೆಳಕು' ಕವಿತೆಗಳು, ಸಿದ್ಧಲಿಂಗ ಪಟ್ಟಣಶೆಟ್ಟಿಯವರ 'ಪ್ರತೀಕ್ಷೆ', ಗೋವಿಂದ ಪೈಯವರ 'ಹೃದಯರಂಗ,' ಎಮ್.ಆರ್. ಶ್ರೀನಿವಾಸ ಮೂರ್ತಿಯವರ 'ಒಂದು ಕಾಗದ' ಕವನ-ಸಂಕಲನಗಳಲ್ಲಿ ಮಹಿಳೆಯರ ಚಿತ್ರಣವಿರುವುದನ್ನು ಕಾಣುತ್ತೇವೆ. ಪ್ರಗತಿಶೀಲರಲ್ಲಿ ಕೆಲವರು ಕವಿತೆಗಳನ್ನು ರಚಿಸಿದ್ದಾರೆ. ಅವರಲ್ಲಿ ಸು.ರಂ. ಎಕ್ಕುಂಡಿಯವರು ಪ್ರಮುಖರು. ಅವರು ದಲಿತ ವರ್ಗದ ಮಹಿಳೆಯ ಬದುಕಿನ ಬವಣೆಯನ್ನು ಒಂದು ಕವಿತೆಯಲ್ಲಿ ಹೀಗೆ ಚಿತ್ರಿಸಿದ್ದಾರೆ.

"ಇಲ್ಲಿ ಸಾಲು ಕುಳಿತ ಹೆಣ್ಣೆ
ಎಲ್ಲೋ ಮುಗಿಲಿನತ್ತ ಕಣ್ಣೆ
ಕುಳಿತರಿನಲ್ಲಿ ಮತ್ಸ್ಯಗಂಧಿ
ಉಟ್ಟುಕೊಂಡು ಹರಕು ಚಿಂದಿ
ನೊಂದ ಜೀವ ನೂಲು ಕಿತ್ತು
ಸುಖ ಸ್ವಪ್ನ ದರ್ಶನ"[೩೩]

ಇನ್ನು ನವ್ಯ ಕವಿಗಳು ಪಾಶ್ಚಾತ್ಯರಿಂದ ಪ್ರಭಾವಿತರಾಗಿ ಆಧುನಿಕತೆಯನ್ನು ದೇಸಿ ಸಾಹಿತ್ಯದಲ್ಲಿ ಅಳವಡಿಸಿಕೊಂಡಿದ್ದರಿಂದ ಹೆಣ್ಣಿನ ಯಾವ ಸ್ಥಾನಗಳಿಗೂ ಬೆಲೆ ಸಿಗಲಿಲ್ಲ. ಅವಳ ಸೌಂದರ್ಯದ ವರ್ಣನೆ ಬಿಟ್ಟರೆ ಬದುಕಿನ ಯಾವ ಮುಖವೂ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳಲಿಲ್ಲ ಈ ನೆಲೆಯಲ್ಲಿ ಅಡಿಗರು, ಪಿ ಲಂಕೇಶ, ಯು.ಆರ್. ಅನಂತಮೂರ್ತಿ, ಬಿ.ಆರ್. ಲಕ್ಷ್ಮಣರಾವ್, ಬಿ. ಸಿ. ರಾಮಚಂದ್ರ. ಶರ್ಮಾ, ಕೆ.ಎ. ರಾಮಾನುಜನ್ ಮೊದಲಾದವರು ಹೆಣ್ಣನ್ನು ನಗ್ನವಾಗಿಯೇ ಕಂಡಿದ್ದಾರೆ. ಆದರೆ ಇದಕ್ಕೆ ಕೆಲವು ಅಪವಾದ ಕವಿತೆಗಳು ಇವೆ. ಇದಕ್ಕೆ ಲಂಕೇಶರ 'ಅವ್ವ' ಕವಿತೆ ಸಾಕ್ಷಿಯಾಗಿದೆ.

---

[೩೨] ಚೌಪದಿಗಳು - ದಿನಕರ ದೇಸಾಯಿ - ಪುಟ-೪೬೬

[೩೩] ಮೀನ ಪೇಟೆ - ಸು.ರಂ. ಎಕ್ಕುಂಡಿ - ಪುಟ-೩೧೯

"ನನ್ನವ್ವ ಫಲವತ್ತಾದ ಕಪ್ಪ ನೆಲ
ಅಲ್ಲಿ ಹಸಿರು ಪತ್ರದ ಹರವು, ಬಿಳಿಯ ಹೂ ಹಬ್ಬ
ಸುಟ್ಟಷ್ಟು ಕಸವು ನೊಂದಷ್ಟು ಹೂ ಹಣ್ಣು
ಮಕ್ಕಳೊದ್ದರೆ ಅವಳ ಅಂಗಾಂಗ ಪುಲಕ"[೩೪]

ಕನ್ನಡ ಕವಿಗಳು, ನೆಲವನ್ನು ತಾಯಿಗೆ ಹೋಲಿಸಿದ್ದೇ ಅಧಿಕ ಆದರೆ ಲಂಕೇಶರವರು ತಾಯಿಯನ್ನು ನೆಲಕ್ಕೆ ಹೊಲಿಸಿದ್ದು ಅನನ್ಯವಾಗಿದೆ. ಅಲ್ಲದೆ ಅವಳನ್ನು ಬನದ ಕರಡಿಗು ಕೂಡಾ ಹೊಲಿಸಿದ್ದು. ಕನ್ನಡ ಕಾವ್ಯ ಪರಂಪರೆಯಲ್ಲಿಯೇ ವಿಶಿಷ್ಟ ಮತ್ತು ವಿನೂತನವಾಗಿದ್ದು, ಅವ್ವನ ವಿಶ್ವವಿಶಾಲ ವ್ಯಕ್ತಿತ್ವಕ್ಕೆ ನಿದರ್ಶನ ವಾಲಾಗಿದೆ.

ಮಹಿಳೆ ಸಂಪೂರ್ಣವಾಗಿ ಅನಾವರಣಗೊಂಡಿದ್ದು ದಲಿತ ಬಂಡಾಯ ಸಾಹಿತ್ಯದ ಕಾಲಘಟ್ಟದಲ್ಲಿ. ಇಲ್ಲಿ ಹೆಣ್ಣನ್ನು ಮಾನವೀಯ, ಮನುಷ್ಯ ಸಂಬಂಧಿ ನೆಲೆಯಲ್ಲಿ ಕಂಡು, ಅವಳ ಎಲ್ಲ ಅವ್ಯಕ್ತ ಭಾವನೆಗಳಿಗೆ ಧ್ವನಿಯಾಗಿದ್ದನ್ನು ಕಾಣುತ್ತೇವೆ. ಸಿದ್ಧಲಿಂಗಯ್ಯ, ದೇವನೂರು ಮಹಾದೇವರನ್ನು ಮೊದಲುಗೊಂಡು ಅರವಿಂದ ಮಾಲಗತ್ತಿ, ಸತ್ಯಾನಂದ ಪಾತ್ರೋಟ, ಬರಗೂರು ರಾಮಚಂದ್ರಪ್ಪ , ಚಂದ್ರಶೇಖರ ಪಾಟೀಲ, ವಿಜಯಾ ದಬ್ಬೆ, ಎಚ್.ಎಲ್. ಪುಷ್ಪ, ಕೆ.ಶರೀಫಾ ,ರಾಜೇಶ್ವರಿ ಎನ್. ವರೆಗಿನ ಕವಿ-ಕವಯತ್ರಿಯರಲ್ಲಿ ಈ ಅಂಶಗಳನ್ನು ಕಾಣುತ್ತೇವೆ. ಈ ಕುರಿತು ಎರಡನೆಯ, ನಾಲ್ಕನೆಯ ಹಾಗೂ ಐದನೆಯ ಅಧ್ಯಾಯಗಳಲ್ಲಿ ವಿಸ್ತೃತವಾಗಿ ನಿರೂಪಿಸಲಾಗಿದೆ.

ಹೀಗೆ ಪ್ರಾಚೀನ ಕಾವ್ಯದಲ್ಲಿ ಜೈನ ಕವಿಗಳು ಮೇಲ್ಪಂಕ್ತಿಯ ಮಹಿಳೆಯರನ್ನು, ವಚನಕಾರರು ಸಾಮಾನ್ಯ ಮಹಿಳೆಯರನ್ನು, ಹರಿಹರ-ರಾಘವಾಂಕ-ನಾಗಚಂದ್ರ ಮೊದಲಾದ ಕವಿಗಳು ಹೆಣ್ಣಿನ ಮನೋವೇದನೆಗಳನ್ನು ಚಿತ್ರಿಸಿದ್ದಾರೆ. ಮುಂದೆ ಬಂದ ಹೊಸಗನ್ನಡದ ನವೋದಯ ಕವಿಗಳು ಹೆಣ್ಣಿನ ಕನಸು-ಕಲ್ಪನೆ-ಆದರ್ಶಗಳನ್ನು, ಪ್ರಗತಿಶೀಲರು ಹೆಣ್ಣಿನ ಸಾಮಾಜಿಕ ಬದುಕನ್ನು, ನವ್ಯ ಕವಿಗಳು ಹೆಣ್ಣಿನ ಸೌಂದರ್ಯವನ್ನು ಚಿತ್ರಿಸಿದರೆ, ದಲಿತ-ಬಂಡಾಯ ಕವಿಗಳು ಮಾನವೀಯ ನೆಲೆಯಲ್ಲಿ ಹೆಣ್ಣನ್ನು ಕಂಡಿದ್ದಾರೆ, ಹಾಗೆಯೇ ತಾತ್ವಿಕವಾಗಿ ಅಭಿವ್ಯಕ್ತಿಸಿದ್ದಾರೆ.

---

[೩೪] ಅವ್ವ, ಶತಮಾನದ ಕಾವ್ಯ ಸಂ: ಎಚ್.ಎಸ್. ವೆಂಕಟೇಶ ಮೂರ್ತಿ - ಪುಟ-೨೭೩

ಅಧ್ಯಾಯ-೪

# ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು

ಅಧ್ಯಾಯ-೪

# ದಲಿತ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು

ಸಾಹಿತ್ಯ ನಿಂತ ನೀರಿನ ಹೊಂಡವಲ್ಲ, ಅದು ನಿರಂತರವಾಗಿ ಹರಿಯುತ್ತಿರುವ ಜೀವಂತ ಪ್ರವಾಹ. ಆದುದರಿಂದ ಅದು ಕಾಲ ಕಾಲಕ್ಕೆ ತನ್ನ ದಿಕ್ಕುಗಳನ್ನು ಬದಲಾಯಿಸುತ್ತಿರುತ್ತದೆ. ಆಯಾ ಕಾಲದ ಜೀವನ ಪರಿಸರಕ್ಕೆ ತಕ್ಕಂತೆ ಸಾಹಿತ್ಯವಾದರೂ ನವೋನ್ಮೇಷಶಾಲಿಯಾಗಿ ಹೊಸ ರೂಪವನ್ನು ಧರಿಸಿ ನಿಲ್ಲುತ್ತದೆ. ಆದುದರಿಂದ ಆಯಾ ಕಾಲಕ್ಕೆ ಎಂತಹ ಸಾಹಿತ್ಯ ಮತ್ತು ಸಾಹಿತಿಕ ಮೌಲ್ಯಗಳ ಅವಶ್ಯಕತೆಯಿದೆಯೋ ಅಂತಹ ಅವಶ್ಯಕತೆಯನ್ನು ಒದಗಿಸುತ್ತ ಪ್ರಯತ್ನಶೀಲವಾಗಿರುತ್ತದೆ, ಆಗಲೇ ಬೇಕು. ಈ ಕಾರಣದಿಂದಲೇ ಸಾವಿರ ವರುಷದ ಹಳಮೆಯುಳ್ಳ ಕನ್ನಡ ಸಾಹಿತ್ಯದಲ್ಲಿ ಹಲವಾರು ಘಟ್ಟಗಳು ಕಾಣುವುದಕ್ಕೆ ಸಾಧ್ಯವಾಯಿತು. ಹಳಗನ್ನಡದಿಂದ ಹೊಸಗನ್ನಡಕ್ಕೆ ಬರುವಾಗ ಈ ಸಾಹಿತ್ಯವು ಕ್ರಮಿಸಿದ ಘಟ್ಟಗಳು ಹಲವಾರು. ಹಾಗೆಯೇ ಹೊಸಗನ್ನಡದಲ್ಲಿಯೂ ಇಂದು ಹಲವಾರು ಘಟ್ಟಗಳನ್ನು ದಾಟಿಕೊಂಡು ಬಂದ ಕನ್ನಡ ಸಾಹಿತ್ಯವು ದಿನೇ ದಿನೇ ಬೆಳೆಯುತ್ತಿರುವುದನ್ನು ಕಾಣಬಹುದಾಗಿದೆ. ಆ ಪ್ರಮುಖ ಘಟ್ಟಗಳಲ್ಲಿ ದಲಿತ ಸಾಹಿತ್ಯ ಘಟ್ಟವು ಒಂದಾಗಿದೆ.

ದಲಿತ ಸಾಹಿತ್ಯ ಘಟ್ಟವು ನವ್ಯದ ನಂತರ ಬಂದ ಒಂದು ಸಾಹಿತ್ಯ ಘಟ್ಟವಾಗಿರುವಂತೆ ಅದೊಂದು ಸಾಮಾಜಿಕ ಕ್ರಾಂತಿಯ ಘಟ್ಟವೂ ಆಗಿದೆ. ಸಾವಿರಾರೂ ವರ್ಷಗಳಿಂದ ಮೇಲು ವರ್ಗದವರು ತಮ್ಮ ಮೇಲೆ ಮಾಡುತ್ತ ಬಂದಿರುವ ಅನ್ಯಾಯ, ದಬ್ಬಾಳಿಕೆ, ದೌರ್ಜನ್ಯಗಳಿಗೆ ಪ್ರತಿಭಟನೆಯನ್ನು ವ್ಯಕ್ತಪಡಿಸಿದಾಗ ಅದು ದಲಿತ ಸಾಮಾಜಿಕ ಕ್ರಾಂತಿ ಎಂದು ಹೆಸರು ಪಡೆಯಿತು. ಈ ಕ್ರಾಂತಿಯ ಕಿಡಿಗಳು ಬರಹದ ರೂಪ ಪಡೆದು ಸಾಹಿತ್ಯದಲ್ಲಿ ಇಳಿದಾಗ ಆ ಸಾಹಿತ್ಯವೇ ದಲಿತ ಸಾಹಿತ್ಯವಾಯಿತು.

ಹಲವು ಶತಮಾನಗಳ ಪ್ರಾಚೀನತೆಯನ್ನು ಹೊಂದಿರುವಂತಹ ಕನ್ನಡ ಕಾವ್ಯ ತನ್ನ ಇತಿಹಾಸದುದ್ದಕ್ಕೂ ಸಂಸ್ಕೃತ ಕಾವ್ಯವನ್ನೇ ಅನುಸರಿಸುತ್ತ ಬಂದಿದೆ. ಯಾವ ಕಾವ್ಯ ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಚಿಂತನೆ ಮಾಡುವುದಿಲ್ಲವೋ ಅದು ಜೀವ ರಹಿತ ಕಾವ್ಯವಾಗುತ್ತದೆ.ಹಳಗನ್ನಡ ಕಾಲಘಟ್ಟದ ಸಾಹಿತ್ಯ ಕೇವಲ ಪಂಡಿತ ವರ್ಗದವರಿಗೆ ಮಾತ್ರ ಸೀಮಿತವಾಗಿತ್ತು. ಈ ಒಂದು ನಿಟ್ಟಿನಲ್ಲಿ ದಲಿತ-ಬಂಡಾಯದಂಥ ಹಿಂದುಳಿದವರ. ಅದರಲ್ಲೂ

ದಲಿತರ ನೋವಿನ ದನಿಯಾಗಿ ಕಾಣಿಸಿಕೊಂಡಿದ್ದು ಸಾಹಿತ್ಯಲೋಕದಲ್ಲಿ ಹೊಸ ಸಂಚಲನೆಗೆ ಕಾರಣವಾಯಿತು. ಕುವೆಂಪು, ಕಾರಂತರ ಕಾವ್ಯ ಕಾದಂಬರಿಗಳಲ್ಲಿಯೂ ದಲಿತರ ಚಿತ್ರಣವಿರುವುದು ಗಮನಾರ್ಹ ಅಂಶವಾಗಿದೆ.

ಮಹಿಳೆಯು ದಲಿತರಲ್ಲಿ ದಲಿತಳಾಗಿದ್ದು ಶೋಷಣೆ, ಅನ್ಯಾಯ, ಅತ್ಯಾಚಾರಗಳನ್ನು ಅನುಭವಿಸುವಳು. ಈ ಚಿತ್ರಣವನ್ನು ಅಥವಾ ಅಂಥ ಮಹಿಳಾ ಅಸ್ತಿತ್ವಗಳನ್ನು ದಲಿತ ಕಾವ್ಯಗಳು ಹೇಳುವುದರ ಜೊತೆಗೆ ಇಂಥ ದಲಿತ ವರ್ಗಕ್ಕೆ ಸೇರಿರುವ ಲೇಖಕ, ಲೇಖಕಿಯರು, ಕಥೆ ಕಾದಂಬರಿಗಳಲ್ಲಿ ವ್ಯಕ್ತಪಡಿಸಿದ್ದಾರೆ. ಅದಕ್ಕೆ ಉದಾಹರಣೆಯಾಗಿ ಗೀತಾ ನಾಗಭೂಷಣರ 'ಹಸಿ ಮಾಂಸ ಮತ್ತು ಹದ್ದುಗಳು' ಕಾದಂಬರಿ ಅಮಾಯಕ ಹೆಣ್ಣಿನ ಬದುಕನ್ನು ಪ್ರತಿಬಿಂಬಿಸುತ್ತದೆ.

"ಬದುಕಿನ ಪ್ರತಿ ಕ್ಷಣ ಅನ್ಯಾಯ, ಅತ್ಯಾಚಾರ, ಶೋಷಣೆಯನ್ನು ಅನುಭವಿಸಿದ 'ಲಚ್ಚಿ' ಬದುಕಿನ ಹೋರಾಟದಲ್ಲಿ ಸತ್ತು ಸತ್ತು ಹುಟ್ಟುತ್ತಾಳೆ. ಎಲ್ಲಾ ದಾರಿಗಳೂ ಒಂದೇ ಬಗೆಯಾದಾಗ ಬದುಕು ಬೀದಿ ಪಾಲಾದಾಗ, ಸಾವನ್ನೇ ಅರಸುತ್ತಾಳೆ. ಸಾಯಲು ಹೊರಟವಳು ತಂದೆಗೂ ಬೇಡುವಾದಾಗ ಮಗುವನ್ನು ಸ್ವೀಕರಿಸಿ ಉತ್ತಮ ನಾಗರಿಕನನ್ನಾಗಿಸುವ ಭರವಸೆ ಇಲ್ಲದ ಸ್ಥಿತಿಯಲ್ಲಿ ಇನ್ನೊಬ್ಬ ಸ್ತ್ರೀ ಕಂಟಕವನ್ನು ಕಲ್ಪಿಸಲು ಒಲ್ಲದ ಲಚ್ಚಿ ತನ್ನೊಂದಿಗೆ ಆ ಮಗುವನ್ನು ಇಲ್ಲವಾಗಿಸಲು ಹೊರಡುತ್ತಾಳೆ."[೧] ಲೇಖಕರಿಗೆ ಅವರ ಬಗ್ಗೆ ಅನುಕಂಪ, ಕಾಳಜಿ ಇದೆ. ಎಲ್ಲಕ್ಕೂ ಮಿಗಿಲಾಗಿ ನೋವಿಗೆ ತಕ್ಷಣ ಸ್ಪಂದಿಸುವ ಮನಸ್ಸಿದೆ.

ಮೇಲ್ಜಾತಿಯವರ ನಿರ್ದಯವಾದ ಧೋರಣೆಯಿಂದ ದಲಿತರು ಅನುಭವಿಸಿದ ಮಾನಸಿಕ ನೋವು ಅಪಾರವಾದುದು ಎಲ್ಲಾ ವಲಯಗಳಲ್ಲಿ ಪ್ರಬಲರಾದ ಮೇಲಿನ ಜನ ಕೆಳಜಾತಿಯವರನ್ನು ತಮ್ಮ ಸಮಾನರಾಗಿ ಬೆಳೆಯಲು ಆಸ್ಪದ ಕೊಡಲಿಲ್ಲ. ಸಾಮಾಜಿಕ, ಆರ್ಥಿಕವಾಗಿ ಮುಂದೆ ಬರದೆ ಇರುವಂತಹ ತಾರತಮ್ಯ ನೀತಿ ಅದು ವಹಿಸಿತ್ತು. ಈ ಅನ್ಯಾಯಿಕ ಪದ್ಧತಿಯಿಂದ ದಲಿತವರ್ಗ ತನ್ನ ಅಂತಃಸತ್ವವನ್ನೇ ಕಳೆದುಕೊಂಡು ಜೀವಿಸುತ್ತ ಬಂದಿರುವುದು. ಐತಿಹಾಸಿಕ ಸತ್ಯ. ಉಳ್ಳವರ ಕರಾಳ ಭಯಾನಕ ಸ್ಥಿತಿಯಲ್ಲಿ ಕಾಲ ಕಳೆದಿರುವ ಜನರ ಜೀವನ ನಿಜಕ್ಕೂ ಶೋಚನಿಯ. ಈ ಉಸಿರುಗಟ್ಟಿಸುವ ಸಮಾಜದಿಂದ ಬಿಡುಗಡೆಗೊಳಿಸುವ ಮಹತ್ವದ ಹಂಬಲ ದಲಿತ ಕವಿಗಳದಾಗಿದ್ದು, ಅಂತೆಯೇ ಅನೇಕ ಕೃತಿಗಳು ದಲಿತರ ನೋವನ್ನೇ ತಮ್ಮ ಪ್ರಮುಖ ಉಸಿರನ್ನಾಗಿಸಿ ಪ್ರಕಟಗೊಂಡಿವೆ. ಸಿದ್ಧಲಿಂಗಯ್ಯನವರ 'ಹೊಲೆಯ ಮಾದಿಗರ ಹಾಡು'

---

೧ ಮಹಿಳಾ ಬದುಕು ಹೈದ್ರಾಬಾದ ಕರ್ನಾಟಕ ಕಥನ ಸಾಹಿತ್ಯದಲ್ಲಿ ಡಾ. ಜಿವರಿ ಚಂದ್ರಕಲಾ-ಪುಟ೧೬೧

ಶೋಷಿತರ ದುಃಖಕ್ಕೆ ಮೊದಲ ಮುನ್ನುಡಿ ಬರೆದ ಕೃತಿ. ಇದರ ಜಾಡನ್ನೇ ಹಿಡಿದ ಮಾಲಗತ್ತಿಯವರ 'ಮೂಕನಿಗೆ ಬಾಯಿ ಬಂದಾಗ' ವಾಲೀಕಾರರ 'ಬಂಡೆದ್ದ ದಲಿತರ ಜೀದಿ ಹಾಡುಗಳು' ರಚನೆಯಾಗಿವೆ. ತಮ್ಮ ಜನರು ನೋವಿನ ಛಾಯೆಯಲ್ಲಿ ಬದುಕುತ್ತಿರುವ ಸಂದರ್ಭದಲ್ಲಿ ಅವರ ಕಷ್ಟಕ್ಕೆ ಸ್ಪಂದಿಸಬೇಕಾಗಿರುವುದು ದಲಿತ ಲೇಖಕನ ಬಹುಮುಖ್ಯ ಹೊಣೆಗಳಲ್ಲಿ ಒಂದಾಗಿತ್ತು. ಹೀಗೆ ಈ ನಿಟ್ಟಿನಲ್ಲಿಯೇ ಸೃಷ್ಟಿಯಾದ ಅನೇಕ ಕೃತಿಗಳು ದಲಿತರ ಒಡಲಾಳದ ನೋವನ್ನು, ಕಥೆ-ವ್ಯಥೆಯನ್ನೇ ಹೇಳಿಕೊಳ್ಳಲು ಹುಟ್ಟಿದಂತಹವುಗಳು.

ದಲಿತ ಸಂಸ್ಕೃತಿಯ ಮರು ಹುಟ್ಟು ಇಲ್ಲಿಯ ಬಹುತೇಕ ಕಾವ್ಯದ ಆಶಯ. ಕನ್ನಡದಲ್ಲಿ ಪ್ರತಿಭಟನೆಯ ಬರವಣಿಗೆ ಹುಟ್ಟಿದ್ದೆ ದಲಿತ ಸಂಸ್ಕೃತಿಯ ಉಸಿರಿನ ಬೇರಿನಿಂದ. ಇಲ್ಲಿ ಪ್ರತಿನಿಧಿಸುವ ಹೆಚ್ಚಿನ ಕವಿಗಳು ನೋವಿನ ಹಿನ್ನೆಲೆಯಿಂದ ಬಂದಿದ್ದಾರೆ. ದಲಿತ ಬದುಕಿನ ದುರಂತವನ್ನು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ತಮ್ಮ ಜನಾಂಗ ಶತಶತಮಾನಗಳಿಂದ ಅನುಭವಿಸುತ್ತ, ಎದುರಿಸುತ್ತ ಬಂದ ಹಲವು ಸಮಸ್ಯೆಗಳು ವ್ಯವಸ್ಥೆಯ ಬುಡದಲ್ಲಿರುವುದನ್ನು ಗಂಭೀರವಾಗಿ ಪರಿಗಣಿಸಿದ್ದಾರೆ. ಸಮಾಜದ ಅಂಧ ಶ್ರದ್ಧೆಯಲ್ಲಿ ಬದುಕಿರುವ ದಲಿತ ಸಮುದಾಯಕ್ಕೆ ಸತ್ಯದ ಅರಿವು ಮೂಡಿಸುವಲ್ಲಿ ಇಲ್ಲಿಯ ಹಲವು ಕೃತಿಗಳಲ್ಲಿ ಪ್ರಯತ್ನಿಸಿರುವುದು, ವ್ಯವಸ್ಥೆಯಲ್ಲಿರುವ ಭೇದ ನೀತಿಯನ್ನು ಖಂಡಿಸುವ ಭಾವವನ್ನು ತಾಳಿರುವುದು ಸ್ಪಷ್ಟವಾಗುತ್ತದೆ. ಈ ಪೂರ್ವಾಪರ ಮಾಹಿತಿಯೊಂದಿಗೆ ದುಡಿದಿರುವ ಲೇಖಕರು ಹೊಸ ಅನುಸಂಧಾನದ ಹಾದಿಯಲ್ಲಿ ತಮ್ಮ ಬರವಣಿಗೆಯನ್ನು ಕರೆದೊಯ್ದಿದ್ದಾರೆ. ಸಿದ್ಧಲಿಂಗಯ್ಯನವರು ದಲಿತ ಕಾಳಜಿಯ ವೈಚಾರಿಕ ಚಿಂತನೆಯ ಪ್ರಸಿದ್ಧ ಲೇಖಕ ಎಂಬುದನ್ನು ಅವರ ಕಾವ್ಯ ಕೃತಿಗಳೇ ರುಜುವಾತುಗೊಳಿಸಿವೆ. ಅವರ 'ಹೊಲೆಮಾದಿಗರ ಹಾಡು' ದಲಿತರ ನೋವಿನಲ್ಲಿ ಎದ್ದಿ ತೆಗೆದಂತಹ ಕೃತಿ. ದಲಿತ ಜೀವನಾನುಭವಗಳ ಹಸಿ ಹಸಿಯಾದ ನೋವು ಪ್ರತಿಭಟನೆಯ ಭಾವಗಳು ಇಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡಿದ್ದನ್ನು ಕಾಣುತ್ತೇವೆ.

ಕೆ. ಬಿ. ಸಿದ್ಧಯ್ಯನವರ 'ಬಕಾಲ' ಪುರಾಣ ಮತ್ತು ದಲಿತ ಜೀವನದ ತುಳುಕು ಅರ್ಥ ಪೂರ್ಣವಾಗಿ ವಿವರಿಸಲ್ಪಟ್ಟ ಮಹತ್ವದ ಕಲಾ ಕೃತಿಯಾದರೆ, ಮಾಲಗತ್ತಿಯವರ 'ಮೂಕನಿಗೆ ಬಾಯಿ ಬಂದಾಗ' ಸಂಕಲನ ಅಪ್ಪಟ ದಲಿತ ಜಗತ್ತನ್ನೇ ಅಧೋ ಮುಖಗಳನ್ನು ಅನಾವರಣಗೊಳಿಸುವ ಕಾವ್ಯವಾಗಿದೆ. ಹೀಗೆ ಶೋಷಿತ ಲೋಕವನ್ನೇ ತೆರೆದಿಡುವ ಹಲವು ಕೃತಿಗಳು ನೊಂದ ಮನಸ್ಸಿನ ಅಭಿವ್ಯಕ್ತಿಯಾಗಿ ಮೂಡಿ ಬಂದಿರುವುದು ಗಮನಾರ್ಹ. ಮಾತು ಕಳೆದುಕೊಂಡವರ ದನಿಯಾಗಿ ನಿಲ್ಲುವ ಇಲ್ಲಿಯ ಕವನಗಳು ದಲಿತ ಪ್ರಜ್ಞೆಯಿಂದಲೇ

ಹುಟ್ಟಿದಂತವು. ಇಲ್ಲಿ ದಲಿತರ ಸಂಕಷ್ಟದ ಬದುಕು ವಾಸ್ತವವನ್ನು ತೆರೆದಿಡುತ್ತದೆ. ಈ ರೀತಿ ದಲಿತತ್ವವನ್ನು ಯಾವುದೇ ಮೈಲಿಗೆ, ಮಡಿವಂತಿಕೆಯಿಲ್ಲದೆ ಬಿಂಬಿಸುವುದು ಮತ್ತು ತನ್ನ ಒಳ ಅರಿವನ್ನು ಹೊರ ಹಾಕುವುದು ದಲಿತ ಕಾವ್ಯದ ಒಟ್ಟಾರೆ ಆಶಯವಾಗಿದೆ. ಡಾ. ಸಿದ್ಧಲಿಂಗಯ್ಯನವರು ಸ್ವತಃ ದಲಿತ, ಶೋಷಿತ, ದಾರಿದ್ರ್ಯದಿಂದ ಕೂಡಿದ ಸಮುದಾಯದಿಂದ ಬಂದವರು, ಜೊತೆಗೆ ನೋವುಂಡವರು. ಹೀಗಾಗಿ ಅವರ ಕಾವ್ಯ ನೋವಿನಲ್ಲಿ ಹುಟ್ಟಿ, ಅರಳಿದೆ. ದನಿ ಇಲ್ಲದವರ ದನಿಯಾಗಿದೆ. ದಲಿತ, ಶೋಷಿತರಿಗೆ ಬಲತುಂಬುವ ಶಕ್ತಿಯಾಗಿ ಮೈದಾಳಿದೆ. ಅವರ 'ಹೊಲೆ ಮಾದಿಗರ ಹಾಡು' ಅಸಹಾಯಕ ಜನತೆಯ ಬದುಕಿನ ಪ್ರತಿನಿಧಿಯೆನಿಸಿದೆ. ಹೀಗಾಗಿ ದಲಿತ ಚಳವಳಿ, ದಲಿತ ಸಾಹಿತ್ಯ, ದಲಿತ ಪ್ರಜ್ಞೆಯ ಬರವಣಿಗೆಗೆ ಸ್ಫೂರ್ತಿ ಮತ್ತು ಮಾರ್ಗದರ್ಶನ ಸಿದ್ಧಲಿಂಗಯ್ಯನವರ ಕಾವ್ಯ ನೀಡಿದೆ. ನೋವುಂಡ ಮನಸ್ಸಿಗೆ ಪ್ರತಿಭಟಿಸುವ ಧೈರ್ಯ ಕಾವ್ಯದಲ್ಲಿ ವ್ಯಕ್ತವಾಗುವುದು ಸಾಮಾನ್ಯ. ಇಂತಹ ನೋವಿನ ಮನಸ್ಸು ಕಾವ್ಯವಾಗಿ ಹೊರಹೊಮ್ಮಿದ್ದು ಸಿದ್ಧಲಿಂಗಯ್ಯನವರಿಂದ

"ಇಕ್ರಲಾ ವದೀರ್ಲಾ
ಈ ನನ್ನ ಮಕ್ಕಳ ಚರ್ಮ ಎಬ್ರಲಾ
ದೇವ್ರು ಒಬ್ನೇ ಅಂತಾರೆ
ಓಣಿಗೊಂದೊಂದ್ ತರಾ ಗುಡಿ ಕಟ್ಸವ್ರೆ
ಎಲ್ಲಾರು ದೇವ್ರ ಮಕ್ಳು ಅಂತಾರೆ
ಹೊಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ"[೨]

ಈ ತರಹದ ಆಕ್ರೋಶದ ಪದ್ಯ ಕನ್ನಡ ಕಾವ್ಯಕ್ಕೆ ಹೊಸದು. ಬಯ್ಗುಳ ರೀತಿಯಲ್ಲಿ ಕಾವ್ಯ ಹೊರಹೊಮ್ಮಿದ್ದು ವಿಶೇಷ. ಮೇಲಿನವರ ಧೋರಣೆಯಿಂದ ಬೇಸತ್ತ ದಲಿತ ಜನ ಈ ರೀತಿಯ ಆವೇಶದ ಮಾತು ಹೊರ ಹಾಕುವುದು ಸಹಜ. ದೇವರ ಧರ್ಮದ ಹೆಸರಿನಲ್ಲಿ ಕೆಳ ಜನರೂ ಮೇಲೇಳದಂತೆ ಚಾಣಾಕ್ಷ್ಯ ತಂತ್ರವನ್ನು ಉಪಯೋಗಿಸಿಕೊಂಡು ಬಂದಿರುವುದಕ್ಕೆ ಇಡೀ ಇತಿಹಾಸವಿದೆ. ಸವರ್ಣೀಯರ ದೌರ್ಜನ್ಯವನ್ನು ಸ್ವೀಕರಿಸುತ್ತಲೇ ಬಂದ ಈ ಜನಕ್ಕೆ ಕೇವಲ ಮೌನದಿಂದ ಪರಿಸ್ಥಿತಿ ಸುಧಾರಿಸುವುದಿಲ್ಲ ಎಂಬ ಆಳವಾದ ಅನುಭವವಿದೆ. ಅದಕ್ಕಾಗಿಯೇ ಸಿದ್ಧಲಿಂಗಯ್ಯನವರಂತ ಕವಿ ಈ ಅಮಾನವೀಯ ನೆಲೆಯ ವಿರುದ್ಧ ಗುಡುಗಿದ್ದಾರೆ. ಅವರ ಕಾವ್ಯ ಕೇವಲ ಕವಿಯ ಅಭಿವ್ಯಕ್ತಿಯಾಗಿರದೇ ಅದರ ಮೂಲಕ ಇಡೀ ದಲಿತ ಸಮುದಾಯ ಪ್ರತಿನಿಧಿಯಾಗಿದೆ. ಸಿದ್ಧಲಿಂಗಯ್ಯ ದಲಿತ ಬದುಕಿನ ಒಳ ಆರ್ತತೆಗಳನ್ನು ಚೆನ್ನಾಗಿ

---

[೨] ಮೆರವಣಿಗೆ–ಡಾ.ಸಿದ್ಧಲಿಂಗಯ್ಯ–ಪುಟ–೫೯

ತಿಳಿದುಕೊಂಡವರು. 'ನನ್ನ ಜನದೊಡನೆ ನಾನಾಡಿದ ಮಾತು! ನಾನು ಕೊಡುವ ಕವನ! ನನ್ನ ಜನರ ನಾ ನೋಡಿದ ರೀತಿ ನನ್ನ ಒಡಲ ಕವನ' ಎಂದು ಹೇಳುವ ಕವಿ ತಮ್ಮ ಜನಗಳೊಡನೆ ಹೊಂದಿರುವ ತಾದಾತ್ಮ್ಯವನ್ನು ತೋರಿಸುತ್ತದೆ. ದೇವರು ಧರ್ಮಗಳ ಹೆಸರಿನಲ್ಲಿ ಶೋಷಿಸುತ್ತಾ ಬಂದ ಉಚ್ಚ ಸಂಸ್ಕೃತಿ ತನ್ನನ್ನು ತಾನು ಉಳಿಸಿಕೊಳ್ಳಬೇಕಾದರೆ ದಲಿತರು ಇದನ್ನು ಉಗ್ರವಾಗಿ ಪ್ರತಿಭಟಿಸಬೇಕಾದ ಅನಿವಾರ್ಯತೆ ಇದೆ ಎಂಬುದನ್ನು ಈ ಕವಿತೆ ಸೂಚ್ಯವಾಗಿ ಧ್ವನಿಸುತ್ತದೆ.

ಕೆಳವರ್ಗದವರ ಮೇಲೆ ಹೇರಲ್ಪಟ್ಟ ಅಮೌಲಿಕ ಆಚರಣೆಗಳನ್ನು ಇಲ್ಲಿಯವರೆಗೆ ಪವಿತ್ರವೆಂದುಕೊಂಡು ಸಂಪ್ರದಾಯವನ್ನು ನಾಶಗೊಳಿಸಬೇಕಾಗಿದೆ. ಅಂದಾಗ ಮಾತ್ರ ಕೆಳವರ್ಗದ ಜನಾಂಗ ಸಂಪೂರ್ಣವಾಗಿ ಬಿಡುಗಡೆಗೊಳ್ಳಲು ಸಾಧ್ಯ. ಇಲ್ಲಿ ಪಾವಿತ್ರ್ಯ ನಾಶವೆಂದರೆ, ಯಾವ ಯಜಮಾನ ಸಂಸ್ಕೃತಿಯು ದುಡಿಯುವ ಜನರ ಲೋಕಕ್ಕೆ ಸಂಬಂಧಿಸಿದ್ದು ಹೀನವೆಂದೂ ತನ್ನದನ್ನು ಶ್ರೇಷ್ಠವೆಂದೂ ಮೂಡಿಸಿದ ನಂಬಿಕೆಗಳಿವೆಯೋ, ಅವನ್ನು ಅಪಮೌಲೀಕರಣಗೊಳಿಸುವುದು, ಪವಿತ್ರೀಕರಿಸಿರುವ ಸಂಕೇತಗಳನ್ನು ನಿರಾಕರಿಸುವುದು ಇದೊಂದು ಜಾಗತಿಕ ಪ್ರತಿಭಟನಾ ಸಾಹಿತಿಗಳ ಸಾಮಾನ್ಯ ಲಕ್ಷಣವೇ ಆಗಿದೆ. "ಧಣಿಗಳ ಹಿತಕ್ಕಾಗಿ ಸಂಸ್ಕೃತಿಯನ್ನೇ ತಮ್ಮದೆಂದು ನಂಬಿದ್ದ ಜನ, ಇದು ಹೇಗೆ ನಮ್ಮದು? ತಮಗೆ ಕೇಡು ಬಯಸುವ ಆಳುವವರ ಸಂಸ್ಕೃತಿಯನ್ನು ಆಳಾಗಿದ್ದ ವರ್ಗಗಳು ವೈಚಾರಿಕವಾಗಿ ವಿಶ್ಲೇಷಿಸುವುದು ಹಾಗೂ ಅದರ ನಾಶ ಸಾಧಿಸುವುದು, ಕೆಟ್ಟದರ ನಾಶದ ನಂತರ ಒಳ್ಳೆಯದೊಂದನ್ನು ಬದಲಿಗೆ ಕಟ್ಟಿಕೊಳ್ಳುವ ಹೊಣೆಯು ಇರಲೇಬೇಕು. ಯಾಕೆಂದರೆ ಕೆಡಹುವ ಕ್ರಿಯೆಗೆ ಕಟ್ಟುವ ಕನಸಿಲ್ಲದಾಗ ಬೆಲೆಯಿರುವುದಿಲ್ಲ"[೨] ಇಂಥ ಹೊಸದನ್ನು ಕಟ್ಟುವ ಕ್ರಿಯೆಗೆ ತೊಡಗಿಸಿಕೊಂಡದ್ದು ಬಂಡಾಯ ಕಾವ್ಯ. ದಲಿತರಲ್ಲಿ ಹೆಚ್ಚಿನ ಕವಿಗಳೆಲ್ಲ ತಮ್ಮ ಸಂಸ್ಕೃತಿಯ ಪ್ರಭಾವದಿಂದ ಸಂಪೂರ್ಣವಾಗಿ ಬಿಡಿಸಿಕೊಳ್ಳಲಾರದೆ ಮೇಲಿನ ಸಂಸ್ಕೃತಿಗೆ ಪ್ರತಿರೋಧ ಸೂಚಿಸಿರುವುದನ್ನು ಹಲವು ಕವಿತೆಗಳ ಮುಖಾಂತರ ಕಾಣುತ್ತೇವೆ. ಹಿಂದೂ ಧರ್ಮದ ಆಚರಣೆಗಳು ಬಹುತೇಕ ಕೆಳವರ್ಗವನ್ನು ಶೋಷಿಸಲೆಂದೇ ಆಚರಿಸಲ್ಪಡುವಂತವು. ಹೀಗಾಗಿ ಇಂಥ ಶೋಷಿತ ಪರಿಸರದಿಂದ ಬಿಡುಗಡೆಗೊಳ್ಳಲು ಸಿದ್ಧಲಿಂಗಯ್ಯನವರಂತಹ ಕವಿಗಳ ಕಾವ್ಯ ಪ್ರಮುಖ ಮಾನದಂಡವಾಯಿತು. ಸಾಮಾಜಿಕ ಕೀಳರಿಮೆಯನ್ನು ಬದಿಗೊತ್ತಿ, ತಮ್ಮ ಬದುಕಿನ ಹಿಂದಿರುವ ಕರಾಳ ನೋವುಗಳನ್ನು ಮರೆಯಲು ತಮ್ಮ ಜನರನ್ನು ಪ್ರಜ್ಞಾವಂತ ಸ್ಥಿತಿಗೆ ತಲುಪಿಸಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ.

---

[೨] ಪ್ರತಿ ಸಂಸ್ಕೃತಿ-ರಹಮತ್ ತರೀಕೆರೆ-ಪುಟ-೧

## ೪.೧ ದಲಿತ ಕವಿತೆಗಳಲ್ಲಿ ಭಾರತಾಂಬೆ ಮತ್ತು ಕನ್ನಡಾಂಬೆ :

"ಭಾರತೀಯ ಸಮಾಜ ಎರಡು ವಿಧದ ನೆಲಗಳಿಂದ ನಿರ್ಮಾಣಗೊಂಡಿದೆ. ಪ್ರತಿವರ್ಷವೂ ಸ್ವಾತಂತ್ರ್ಯ ದಿನ ಮತ್ತು ಗಣರಾಜ್ಯೋತ್ಸವ ದಿನಗಳನ್ನು ಕಪ್ಪು ದಿನಗಳನ್ನಾಗಿ ಆಚರಿಸುತ್ತ ಬಂದ ದಲಿತ ತನ್ನ ಬೇಡಿಕೆಗಳ ಈಡೇರಿಕೆಗೆ ಸೀಮಿತವಲ್ಲದ ವಿಶಾಲಾರ್ಥದಲ್ಲಿ ಚಳವಳಿ ಈ ಎರಡು ರಾಷ್ಟ್ರೀಯ ಹಬ್ಬದ ದಿನಗಳು ದೀನ ದಲಿತರಿಗೆ ಶೋಷಿತರಿಗೆ ದಕ್ಕಿಲ್ಲವೆಂಬುದನ್ನು ತೋರಿಸಲು ಹೆಣಗಿದರು."[೪] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆ ಕವಿತೆ ಹೀಗಿದೆ.

"ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಟಾಟಾ ಬಿರ್ಲಾ ಜೋಬಿಗೆ ಬಂತು
ಕೋಟ್ಯಾಧೀಶನ ಕೋಣೆಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ"[೫]

ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಶೋಷಣೆಗೆ ಒಳಗಾದ ಮಹಿಳೆಗಾಗಲಿ, ದಲಿತ ವರ್ಗದವರಿಗಾಗಲಿ ಸ್ವಾತಂತ್ರ್ಯ ಸಿಗಲೇ ಇಲ್ಲ. ಅದಕ್ಕಾಗಿ ಕವಿ ಸಿದ್ಧಲಿಂಗಯ್ಯನವರು ಯಾವಾಗ ? ಯಾರಿಗೆ ? ಎಲ್ಲಿಗೆ ? ಹೇಗೆ ? ಎಂದು ಪ್ರಶ್ನಿಸುತ್ತಾರೆ. ಸ್ವಾತಂತ್ರ್ಯ ಎನ್ನುವುದು ಶೋಷಿತ ವರ್ಗಕ್ಕೆ ಸಿಕ್ಕಿಲ್ಲ. ಶ್ರೀಮಂತ ವರ್ಗಕ್ಕೆ, ಪಾರ್ಲಿಮೆಂಟಿನ ಕುರ್ಚಿಯಲ್ಲಿರುವವರಿಗೆ ಮಾತ್ರ ಸ್ವಾತಂತ್ರ್ಯ ಸಿಕ್ಕಿರುವುದು. ಶೋಷಣೆಗೆ ಒಳಗಾದ ಮಹಿಳೆಗೂ ಸಹಿತ ಸಿಕ್ಕಿಲ್ಲ ಎಂದು ಅಸಹನೆಯಿಂದ ಗುಡುಗುತ್ತಾರೆ. ಇಡೀ ಜಗತ್ತನ್ನು ನೋಡಿದಾಗ ನಮ್ಮೆಲ್ಲರನ್ನು ಹಡೆದವಳು ತಾಯಿ, ಭೂಮಿಯು ತಾಯಿ, ಭಾರತ ಮಾತೆಯು ತಾಯಿ, ಕನ್ನಡಾಂಬೆಯು ತಾಯಿ, ಕರುಣೆ, ಪ್ರೀತಿ, ತಾಳ್ಮೆ, ಸಹನೆ, ಕ್ಷಮೆ ಎಲ್ಲಕ್ಕೂ ಹೆಸರಾದವಳು. ತಾಯಿ ಭಾರತಾಂಬೆಯ ಉದರದಲ್ಲಿ ಜನಿಸಿರುವೆವು ನಾವು ನೀವುಗಳೆಲ್ಲ ಎನ್ನುವುದಕ್ಕೆ ಕವಿ ಅರವಿಂದ ಮಾಲಗತ್ತಿಯವರು 'ಭಾರತಾಂಬೆಗೆ' ಎಂಬ ಕವನದಲ್ಲಿ.

---

[೪] ಕರ್ನಾಟಕ ದಲಿತ ಚಳುವಳಿ ಮತ್ತು ಡಾ.ಅಂಬೇಡ್ಕರ್ ಪ್ರಭಾವ-ಚಾಂಡಾಳ-ಪುಟ-೭೭

[೫] ಮೆರವಣಿಗೆ-ಡಾ॥ ಸಿದ್ಧಲಿಂಗಯ್ಯ - ಪುಟ-೧೩೮, ೧೩೯

"ಯವ್ವ ಹಡೆದವ್ವ ನಮ್ಮವ್ವ ......................
ಇವ್ರ ನಮ್ಗ ನೋಡಿದ್ರ
ಅಂಗಾಲ್ಗಿ ಹೇಸ್ಗಿ ಹತ್ತದ್ಹಾಂಗ ಮಾಡತಾರ
ಯಾಕ? ನಾವು ನಿನ್ನ ಮಕ್ಕಳಲ್ಲ?
ಏನ ನಿನ್ನ ಸವತಿಗೆ ಹುಟ್ಟಿದಾ ಮಕ್ಕಳಾ?
ಇಲ್ಲಾ, ನಿನ್ನ ಮಿಂಡ್ರಿಗಿ ಹುಟ್ಟಿದೋರಾ"[೬]

ಭಾರತ ಪವಿತ್ರವಾದ ಸಂಸ್ಕೃತಿ, ಏಕತೆ, ಧಾರ್ಮಿಕತೆ ಹೊಂದಿರುವ ದೇಶ. ವಿವಿಧತೆಯಲ್ಲಿ ಏಕತೆಯನ್ನು ಸಾರುವುದು. ಇದು ನಮ್ಮ ದೇಶದ ಹಿರಿಮೆ. ಹೀಗಾಗಿ ಯಾರೂ ಮೇಲಲ್ಲ, ಯಾರೂ ಕೀಳಲ್ಲ. ಇಂತಹ ಪವಿತ್ರವಾದ ಭಾರತಾಂಬೆಯ ಮಡಿಲಲ್ಲಿ ಹುಟ್ಟಿದವರು ನಾವೆಲ್ಲ ಆದರೂ ಮೇಲು, ಕೀಳು ಮಾಡುತ್ತಿ. ತಾಯಿ ನೀನು ನಮ್ಮ ಹೇಗೆ ಬೇಕಾದರೂ ಹೆತ್ತಿರು ಗಂಡನಿಗಲ್ಲದೆ ಬೇರೆಯವರಿಗೆ ಹುಟ್ಟಿದರು ಸರಿ ? ತಾಳ್ಮೆಯಲ್ಲಿ ನಿನಗೆ ಯಾವ ಮಕ್ಕಳಾದರೂ ಏನು ? ಎಲ್ಲಾ ಮಕ್ಕಳೊಂದೇ ಅಲ್ಲವೇ ನಮಗೂ ನ್ಯಾಯ ದೊರಕಿಸಿಕೊಡು ಎಂದು ಕವಿಯ ಭಾವೋದ್ವೇಗ ತಾಳುವುದನ್ನು ಇಲ್ಲಿ ಕಾಣುತ್ತೇವೆ. ಅಲ್ಲದೇ ಅಸ್ಪೃಶ್ಯತೆಯ ನೋವನ್ನು ಗಟ್ಟಿಯಾಗಿ ಹೇಳುತ್ತಾರೆ.

ಸಾಮಾಜಿಕ ಅರಿವು ಇಲ್ಲಿಯ ಮುಖ್ಯ ಕಾಳಜಿ, ಹೆತ್ತ ತಾಯಿಯಲ್ಲಿ ಮಕ್ಕಳು ತಮ್ಮ ಪಾಲು ಕೇಳುವ ರೀತಿಯಲ್ಲಿ ಭಾರತ ಮಾತೆಯಲ್ಲಿ ಕಳಂಕಿತ ಸಮಾಜದ ಪ್ರತಿನಿಧಿಯಾಗಿ ತಮ್ಮ ಪಾಲಿನ ಭಾಗ ಕೇಳುವುದು ಇಲ್ಲಿ 'ನಮಗೂ ಹಕ್ಕ ಐತಿ' ಎಂಬ ಮಾತು ಅವಮಾನಿತನೊಬ್ಬ ಸ್ವಾಭಿಮಾನಿಯಾಗುತ್ತಾನೆ. ಲೇಖಕರು ಪ್ರಮುಖವಾಗಿ ಅಂಬೇಡ್ಕರರ ವಿಚಾರಗಳಿಂದ ಪ್ರಭಾವಿತರಾದವರು. ನಾವು ಈ ದೇಶದ ಪ್ರಜೆಗಳೆಂದ ಮೇಲೆ ನಮಗೂ ಸರಿ ಸಮಾನತೆಯ ಅಧಿಕಾರ ಬೇಕು, ಆದರೆ ಇದು ಮೇಲ್ವರ್ಗದವರ ಕುತಂತ್ರದಿಂದ ದಲಿತರು ಸಾಮಾಜಿಕವಾಗಿ ಕೆಳಗುಳಿಯಲು ಸ್ಪಷ್ಟವಾದ ನಿದರ್ಶನವಿದೆ. ಒಂದೆಡೆ ಕವಿ ಕೀಳು, ಅಸ್ಪೃಶ್ಯತೆ, ಹಕ್ಕು ನ್ಯಾಯವನ್ನು ಬಯಸಿ ಭಾರತಾಂಬೆಗೆ ಸ್ಮರಿಸಿದರೆ, 'ಅರ್ಜುನ ಗೊಳಸಂಗಿ' ಯವರು ತಮ್ಮ 'ಭಾರತಾಂಬೆ' ಕವನದಲ್ಲಿ ನಾಡಿನ ಸಂಸ್ಕೃತಿ, ಸಮೃದ್ಧಿ ವಿಶೇಷತೆ ಎಷ್ಟು ಉದಾತ್ತವಾದುದು ಎಂಬುದನ್ನು ಕುರಿತು ಹೀಗೆ ಹೇಳುತ್ತಾರೆ.

"ಸಂಸ್ಕೃತಿ ಕಲೆಗಳಿಗೆ ಹೆಸರಾದ ಬಿಡು
ಶಿಲ್ಪಕಾರ ಜಕ್ಕಣ್ಣನು ಹೊಂದಿದ ನಾಡು
ಎಲ್ಲಿ ನೋಡಿದಲ್ಲಿ ಶಿಲ್ಪಕಲೆಯ ಗೂಡು
ಭಾರತದ ಇತಿಹಾಸದಿ ಮೆರೆದಿಹ ಕಲೆ ನೋಡು"[೭]

---

[೬] ಮೂಕನಿಗೆ ಬಾಯಿ ಬಂದಾಗ-ಲೇ.ಅರವಿಂದ ಮಾಲಗತ್ತಿ-ಪುಟ-೭

[೭] ನಮ್ಮಜ್ಜಿ ಅವ್ವ ನನ್ನಾಕೆ-ಡಾ. ಅರ್ಜುನ ಗೊಳಸಂಗಿ-ಪುಟ-೭೩

ಭಾರತಾಂಬೆ ಸರ್ವ ಧರ್ಮ ಸಮನ್ವಯವನ್ನು ತೋರುಂತಹವಳು. ಇಂತಹ ನಾಡಲ್ಲಿ ಗಂಗೆ, ತುಂಗೆ ಹರಿಯುತ್ತಾರೆ. ಯಾರೂ ಮೇಲು, ಕೀಳು ಎನ್ನುವುದಿಲ್ಲ. ಭಾರತ ಮಾತೆಯ ಉಡಿಯಲ್ಲಿ ಸಮೃದ್ಧಿ, ಸಿರಿವಂತಿಕೆ ಎಲ್ಲವೂ ಇದೆ. ಸಾಮಾಜಿಕ ಸಮನ್ವಯತೆ ಏಕ ದೃಷ್ಟಿಯುಳ್ಳ ನಮ್ಮ ನಾಡು ಎಂದು ಕವಿ ಹೇಳುತ್ತಾರೆ. ಒಂದೆಡೆ ಸಂಸ್ಕೃತಿ, ದೇಶದ ಸಮನ್ವಯತೆ ವಿವಿಧತೆಯಲ್ಲಿ ಏಕತೆಯನ್ನು ಸಾರಿ ಸಾರಿ ಹೇಳುತ್ತಾರೆ. ಇನ್ನೊಂದೆಡೆ ದೇಶಕ್ಕೆ ಸ್ವಾತಂತ್ರ್ಯ ಬಂದಿದೆ ಆದರೆ ಎಲ್ಲಿ, ಯಾವಾಗ ಅದು ದಲಿತರಿಗೆ ಎಂತಹ ಸಮಾಜವನ್ನು ಸೃಷ್ಟಿಸಿದೆ ಎನ್ನುವ ದಲಿತರ ಸಂವೇದನೆ ಇದೆ.

"ದೇಶಕ್ಕೆ ಸ್ವಾತಂತ್ರ್ಯ ಬಂದಾಗ ದಲಿತರ ಬಾಳಿನಂಗಳದಲ್ಲಿ ಲೆಕ್ಕವಿಲ್ಲದಷ್ಟು ಹೊಂಗನಸುಗಳು ತುಂಬಿದ್ದವು. ಸ್ವತಂತ್ರ ಭಾರತದ ಸ್ವತಂತ್ರ ಪ್ರಜೆಗಳಾಗಿ ಜೀವನ ಸಾಗಿಸಬೇಕೆಂದು ಕನಸು ಕಂಡರು. ಆದರೆ ದಲಿತರಿಗೆ ತಮ್ಮ ಜೀವನಕ್ಕೆ ಯಾವುದು ಮುಳ್ಳು ಬೇಲಿಯಾಗ ಬಾರದಿತ್ತೋ ಆ ವಿಷ ಸರ್ಪದಂತಿರುವ ಜಾತೀಯತೆ, ಶೋಷಣೆ ದೇಶದ ತುಂಬೆಲ್ಲ ವಿಷವನ್ನು ಸಂಗ್ರಹಿಸುತ್ತ, ಹೊಂಚು ಹಾಕಿ, ಆಗಾಗ ಕಾರುತ್ತ-ವಾಂತಿ ಮಾಡಿಕೊಳ್ಳುತ್ತ, ಈ ದೇಶದ ದಲಿತರ ಎದೆಯ ಮೇಲಿನ ಹುಣ್ಣಿನ ಮೇಲೆ ರಂಗೋಲಿ ಬರೆಯುತ್ತ, ಬರೆದು ಅಳಿಸುತ್ತ ಅಳಿಸಿ ಬರೆಯುತ್ತ ಏನೆನೋ ಕೆಟ್ಟ ಖುಷಿ ಪಡೆಯುವುದರ ಫಲವೇ ಈ ನಾಡಿನ ದಲಿತರು ಹೀಗೆ ಹಿಂದುಳಿಯುವುದಕ್ಕೆ ಕಾರಣವಾಯಿತು."[೮] ದಲಿತರು ನೊಂದು ಬೆಂದಿದ್ದಾರೆ. ಅವೆಲ್ಲ ಭಾರತಾಂಬೆಯ ಎದುರಿನಲ್ಲಿ ಸ್ಪಷ್ಟವಾಗಿದೆ.

"ನಲವತ್ತೇಳರ ಸುವರ್ಣ ಮಹೋತ್ಸವ ನೋಡಮ್ಮ
ಓ....ಓ..... ಕೇಳು ಭಾರತಾಂಬೆಯಮ್ಮ ॥
ಮಾನಭಂಗ ಅತ್ಯಾಚಾರ ನಿತ್ಯ ನೋಡ
ದಲಿತ ರೈತ ಕೂಲಿಗಳ ದಮನ ನೋಡಮ್ಮ
ಕೋಮು ಜಾತಿ ಗಲಭೆಗಳಿಗೆ ಕೊನೆಯ ಇಲ್ಲವಮ್ಮ
ಮೇವು ಹವಾಲ ಹಗರಣಗಳ ಸಾಲು ನೋಡವ್ವ."[೯]

"ಸ್ವಾತಂತ್ರ್ಯ ಬಂದು ಭಾರತ ಮಾತೆ ಮುಕ್ತಳಾಗಿ ಎಲ್ಲರನ್ನೂ ನೋಡುತ್ತಿದ್ದಾಳೆ. ಆದರೂ ಭಾರತದಲ್ಲಿ ಇನ್ನೂ ಕೂಡ ಕರಿಯರು ಬಿಳಿಯರು ಎನ್ನುತ್ತಿರುವ ಕೂಗು ಕೇಳುವುದರ ಜೊತೆಗೆ ಹಲವಾರು ಬಗೆಯ ಅನ್ಯಾಯ, ಅತ್ಯಾಚಾರ, ಮೇಲು, ಕೀಳು ಎಂಬ ಭಾವನೆ ಮಾತ್ರ ಅಳಿದಿಲ್ಲ.

---

[೮] ಅಂಬೇಡ್ಕರವಾದ : ದಲಿತರು-ಡಾ.ಟಿ.ಎಂ.ಭಾಸ್ಕರ್-ಪುಟ-೭೩
[೯] ಹೋರಾಟದ ಹಾಡುಗಳು-ಬೆಳ್ಳಿ ಚುಕ್ಕಿ ಪುಸ್ತಕಾಲಯ-ಪುಟ-೭೧

ಬ್ರಿಟಿಷರು ಮಾತ್ರ ಭಾರತದಿಂದ ಹೊರ ಹೋಗಿದ್ದಾರೆ. ೧೯೫೬ ರಲ್ಲಿ ಅಂಬೇಡ್ಕರ್ ಅವರ ಜಾತಿವಿನಾಶ ಸಮಾಜವಾದಿ ಕ್ರಾಂತಿ, ಬೌದ್ಧ ಧರ್ಮ-ಮಾರ್ಕ್ಸ್‌ವಾದಗಳು ಬಗ್ಗೆ ಮಾತನಾಡುತ್ತಿದ್ದ ಚಾರಿತ್ರಿಕ ಘಟ್ಟದಲ್ಲಿ ಬಂಡವಾಳವಾದಿ, ನವಸಾಮ್ರಾಜ್ಯವಾದಿ ಶೋಷಣೆ ತೀವ್ರವಾಗಿರಲಿಲ್ಲ."[೧೦] ಕರ್ನಾಟಕದಲ್ಲಿ ಭೂಮಿಗೆ ಸಂಬಂಧಿಸಿದಂತೆ ದಲಿತರ ಹತ್ಯೆಗಳು ಅವ್ಯಾಹತವಾಗಿ ನಡೆಯುತ್ತ ಬಂದಿವೆ. ಈ ಬಗ್ಗೆ ಇತ್ತೀಚೆಗೆ ಕೋಲಾರ ಜಿಲ್ಲೆ ಬಂಗಾರ ಪೇಟೆ ತಾಲೂಕು ನಾಗಲಾಪಲ್ಲಿಯಲ್ಲಿ ನಡೆದ ಬರ್ಬರ ಹತ್ಯಾಕಾಂಡದ ಬಗ್ಗೆ ಮುಕ್ತ ಸಮಾಜವಾದಿ ಮಾತುಕತೆ ಪತ್ರಿಕೆ ಹೀಗೆ ಬರೆದಿದೆ.

"ಕಳೆದ ಎರಡು ದಶಕಗಳಿಂದ ದಲಿತರ ಮೇಲಾದ ಹಲ್ಲೆ, ಕೊಲೆ ಪ್ರಕರಣಗಳನ್ನು ನೋಡಿದ್ದೇವೆ. ಎಷ್ಟೋ ನೊಂದವರ ನಿಟ್ಟುಸಿರು ಕೇಳಿದ್ದೇವೆ. ಹುಣಸಿಕೋಟೆಯ ಶೇಷಗಿರಿಯಪ್ಪನ ಕೊಲೆ ಕಣ್ಣಲ್ಲಿದೆ. ಬಾಳ್ಯಪೇಟೆಯಲ್ಲಿ ಕಡಿದ ಕಾಲುಗಳ ಹೆಜ್ಜೆ ಗುರುತು ಮಾಸಿಲ್ಲ, ದಾಸನಾಪುರದ ಚಿಕ್ಕ ತಿಮ್ಮಯ್ಯನ ಮೈ ಸಿಗಿದಿದ್ದ ನೂರಾರು ಮಚ್ಚಿನ ಏಟುಗಳ ಗುರುತಿದೆ. ಇತ್ತೀಚೆಗೆ ಕಂಬಾಲಪಲ್ಲಿಯಲ್ಲಿ ಸುಟ್ಟು ಹೋದ ದಲಿತರ ಬೂದಿ ಕಣ್ಣ ಮುಂದೆ ಇನ್ನೂ ಹೊಗೆಯಾಡುತ್ತಿದೆ. ಕೊನೆಯಲ್ಲಿ ಹೆಣ್ಣೊಬ್ಬಳನ್ನು ಬೆತ್ತಲೆ ಮಾಡಿ ಇಡೀ ಊರೇ ನೋಡಿ ಕೇಕೆ ಹಾಕಿದ ಸವಣೂರಿನ ನೀಚತನದಿಂದ ಇನ್ನೂ ತತ್ತರಿಸುತ್ತಿದ್ದೇವೆ. ಆದರೂ ನಾಗಲಾಪಲ್ಲಿಯ ಕಗ್ಗೊಲೆ ಇದುವರೆಗಿನ ಇಂಥ ಕ್ರೌರ್ಯಗಳನ್ನೆಲ್ಲಾ ನಾಚಿಸುವಷ್ಟು ಬರ್ಬರವಾಗಿದೆ. ಊರಿಗೆ ಊರೇ ಒಂದಾಗಿ, ಹೆತ್ತ ತಾಯಿಯ ಎದುರೇ ಬೆಳೆದ ಮಕ್ಕಳಿಬ್ಬರನ್ನು ತುಂಡು ತುಂಡಾಗಿ ಕೊಚ್ಚಿ ತಾಯಿಗೆ ಮಕ್ಕಳ ಸಾವನ್ನು ಕಾಣಿಸಲಾಗಿದೆ. ಸಾಯುತ್ತಿರುವ ಮಕ್ಕಳ ಕಣ್ಣಿಗೆ ತಾಯಿಯ ಮೊಲೆ ಕತ್ತರಿಸಿ ತೋರಿಸಲಾಗಿದೆ. ಮರ್ಮಾಂಗಕ್ಕೆ ರಿಪೀಸ್ ಪಟ್ಟಿ ತುರುಕಲಾಗಿದೆ."[೧೧] ಇದೆಲ್ಲವನ್ನು ಕಂಡರೂ ಏನು ಮಾಡದಿರುವ ಪೊಲೀಸರು, ಸರಕಾರ ಇದೆಯಲ್ಲ ಅದಕ್ಕೆ ಚಂದ್ರಶೇಖರ ಕಂಬಾರರು 'ನಮಗೆ ಸ್ವಾತಂತ್ರ್ಯವೆ ಇಲ್ಲ' ಎಂಬ ಕವಿತೆಯಲ್ಲಿ ಹೀಗೆನ್ನುತ್ತಾರೆ.

---

[೧೦] ಕಪ್ಪು ಕಾಲಿನ ಕಡಗ-ಡಾ. ಬಾಬುರಾವ್ ಮುಡಬಿಯವರ ಅಭಿನಂದನಾ ಗ್ರಂಥ-ಸಂ.ಡಾ.ಜೋಗನ್ ಶಂಕರ್.ಡಾ.ಮಹೇಶ ತಿಪ್ಪಶೆಟ್ಟಿ, ಡಾ. ಮಲ್ಲಿಕಾ ಘಂಟಿ-ಡಾ.ವೆಂಕಟಗಿರಿ ದಳವಾಯಿ-ಪುಟ-೧೦೫ (ಅಂಬೇಡ್ಕರ್ ಮತ್ತು ದಲಿತ ಚಳುವಳಿ-ಎಸ್.ಚಂದ್ರಶೇಖರ)

[೧೧] ಕಪ್ಪು ಕಾಲಿನ ಕಡಗ-ಡಾ. ಬಾಬುರಾವ್ ಮುಡಬಿಯವರ ಅಭಿನಂದನಾ ಗ್ರಂಥ - ಸಂ: ಡಾ.ಜೋಗನ್ ಶಂಕರ್.ಡಾ.ಮಹೇಶ ತಿಪ್ಪಶೆಟ್ಟಿ, ಡಾ. ಮಲ್ಲಿಕಾ ಘಂಟಿ-ಡಾ.ವೆಂಕಟಗಿರಿ ದಳವಾಯಿ-ಪುಟ-೮೪(ಅದೇ)

“ಮನುಷ್ಯನಿಗೆ ಸ್ವಾತಂತ್ರ್ಯವೇ ಇಲ್ಲ
ಗೊತ್ತ ಇವಳ್ಯಾರೆಂದು, ಗುರುತು ಹಿಡಿಯೆಂದು
ನಮ್ಮಿಬ್ಬರ ಹಳೆಯ ಫೋಟೊ ತೋರಿಸಿದೆ
ಹೋ ಉರಿದ ಸಂಭ್ರಮ ಹಾ ಕಳೆದ ಹಂಗಾಮ
ಗೆಳೆಯಾ, ನಾವೀಗ ಬೇರೆ ದೇಶದಲ್ಲಿದ್ದಂತೆ
ಅನಿಸೋದಿಲ್ಲವೆ?”[೧೨]

ಭಾರತೀಯ ಸಂಸ್ಕೃತಿ ಪರಂಪರೆಯಲ್ಲಿ ಪ್ರಸ್ತುತದ ಸಂದರ್ಭದೊಳಗೆ ಸಮಾಜದ ಬದಲಿ ಮುಖವಾದ ಅಲಕ್ಷಿತರ ಬದುಕು, ಸ್ಥಿತಿಗತಿಗಳು ಇವೆಲ್ಲವುಗಳ ವೀಕ್ಷಣೆಯಿಂದ ಕವಿ ಬೇಸತ್ತು ಇದು ಭಾರತ ಹೌದೋ ಅಲ್ಲೋ ಎಂದು ಪ್ರಶ್ನಿಸುವುದು ಪ್ರಸ್ತುತವಾಗುತ್ತದೆ.

“ಪ್ರಸ್ತುತ ನೆಲೆಯಲ್ಲಿ ನಿಂತು ಮುಖಾಮುಖಿಯಾಗುವುದಾದರೆ, ಪ್ರಸಕ್ತ ಕೋಮುವಾದ, ಜಾತೀಯಯತೆ, ಅಸಮಾನತೆ, ಧರ್ಮ, ಧಾರ್ಮಿಕತೆಗಳ ಹೆಸರಿನಲ್ಲಿ ಸಾಮಾನ್ಯರ ಹರಣ ಮುಖ್ಯವಾಗಿದೆ.”[೧೩]

ಸ್ವಾತಂತ್ರ್ಯ ಬಂದರೂ ಇಂತಹ ಭಾವನೆ ಅಸೂಯೆಗಳು ಹಾಗೆಯೇ ಉಳಿದಿವೆ. ಗಾಂಧಿಜೀ, ಅಂಬೇಡ್ಕರ ಇವೆಲ್ಲವುಗಳ ವಿರುದ್ಧ ಸಿಡಿದೆದ್ದು ಸಮಾನತೆಗಾಗಿ ಹೋರಾಡಿದರು. ಭಾರತ ಮಾತೆಗೆ ಸರಪಳಿಯಿಂದ ಹೊರ ತೆಗೆದರೂ ಅವಳ ಕಣ್ಮುಂದೆ ಇಂತಹ ಅನೇಕ ವಿಷಯಗಳು ಹಾಗೆಯೇ ಉಳಿದಿವೆ. ಹೀಗಾಗಿ ಇನ್ನೂ ಸ್ವಾತಂತ್ರ್ಯ ದೊರಕಿಲ್ಲ ಎನ್ನುವ ಭಾವನೆ ಕವಿದಾಗಿದೆ. ಬ್ರಿಟಿಷರು ಭಾರತಕ್ಕೆ ಬರುವ ಮುನ್ನ ಕಸಗೂಡಿಸುವವರು ಮತ್ತು ಮಲಹೊರುವವರಾಗಿದ್ದರು. ಇನ್ನೂರು ವರ್ಷಗಳ ಬ್ರೀಟಿಷ ಆಳ್ವಿಕೆಯ ನಂತರವೂ ಪರಸ್ಥಿತಿ ಹಾಗೆಯೇ ಇದೆ. ಅದಕ್ಕೇ ನಮಗೆ ಇನ್ನೂ ಸ್ವಾತಂತ್ರ್ಯ ಸಿಕ್ಕಿಲ್ಲ ಎಂದು ಭಾರತಾಂಬೆಗೆ ಕವಿ ಕೇಳುತ್ತಾರೆ. ಎಲ್ಲರಿಗೂ ಸ್ವಾತಂತ್ರ್ಯ ದೊರೆಯಬೇಕೆಂದರೆ ಕೇವಲ ಮೃದುವಾದ ವಿಷಯ ಆಯ್ಕೆ ಮಾಡಿಕೊಂಡರೆ ಸಾಲುವುದಿಲ್ಲ ಅದಕ್ಕೆ ಸ್ವಾತಂತ್ರ್ಯ ದೊರೆಯುವುದಕ್ಕೆ ಮುಂಚಿತವಾಗಿ ಭಗತ್ ಸಿಂಗ್ ಒಂದು ಮಾತನ್ನು ಹೇಳುತ್ತಾರೆ.

“ಮೃದುವಾದ ವಿಧಾನಗಳಿಂದ ಪರಕೀಯ ಆಳ್ವಿಕೆಯನ್ನು ಪರಾಭವಗೊಳಿಸಲು ಸಾಧ್ಯವಿಲ್ಲ. ಅದಕ್ಕೆ ವಜ್ರ ಮುಷ್ಠಿಯೇ ಬೇಕಾಗುತ್ತದೆ. ಆಗಾಧ ಇಂಥ ವಿಧಾನ ಅನಿವಾರ್ಯ ಆಕ್ರಮಣಕಾರಿಯಾಗಿ ಬಳಸಿದ ಶಕ್ತಿಯೇ ಹಿಂಸೆ. ಇದನ್ನು ನೈತಿಕವಾಗಿ ಸಮರ್ಥಿಸಿಕೊಳ್ಳಲು

---

[೧೨] ಚಂದ್ರಶೇಖರ ಕಂಬಾರ ಅವರ ಆಯ್ದ ಕವಿತೆಗಳು–ಕೆ.ವಿ.ಸುಬ್ಬಣ್ಣ ನೆನಪಿನ 'ಮೊದಲ ಓದು' ಪುಸ್ತಕ ಮಾಲೆ–ಪುಟ–೭೫
[೧೩] ಜನಪದ ಕಾವ್ಯಗಳಲ್ಲಿ ದಲಿತ ಸಂವೇದನೆ–ಡಾ.ಜಿ.ಹನುಮಂತರಾಯ–ಪುಟ–೧

ಸಾಧ್ಯವಿಲ್ಲ ಆದರೆ ಇದನ್ನು ನ್ಯಾಯ ಸಮ್ಮತ ಉದ್ದೇಶಕ್ಕಾಗಿ ಬಳಸಿಕೊಂಡಾಗ ಇದಕ್ಕೆ ಸಮರ್ಥನೆ ಬರುತ್ತದೆ."[೧೪] ಭಗತ್‌ಸಿಂಗ್ ಕೆಲವು ಸಂದರ್ಭ ಸನ್ನಿವೇಶಗಳಲ್ಲಿ ಗಾಂಧಿಜೀಯವರ ಮಾರ್ಗವನ್ನು ಪ್ರತಿರೋಧಿಸುತ್ತಿದ್ದರು. ಆದರೆ ದಲಿತ ಕವಿ ಡಾ. ಸದಾಶಿವ ದೊಡಮನಿಯವರು ಗಾಂಧಿಯವರನ್ನು ಹೀಗೆ ನೆನೆಯುತ್ತಾರೆ.

"ಭಾರತಾಂಬೆಯ ಸುವರ್ಣ ಸ್ವಾತಂತ್ರ್ಯ ಮರು
ಮರುದಿನ.....................
ಹಿಂಗ ಸುತ್ತಾಡಿ ಬರೋಣಂತ ಹೊಂಟಿದ್ದೆ
ಪಂಚೆ ಉಟ್ಟು, ಕೋಲು ಹಿಡಿದು
ಎದುರಿಗೆ ಬಂದ, ಗಾಂಧೀ ಅಜ್ಜಾನ ಕಂಡು
ದಂಗಾಗಿ ಮಾತು ಬಾರದೆ ಮೂಕನಾದೆ
ನಿಂತಲ್ಲೆ ಗೊಮ್ಮಟನಾದೆ."[೧೫]

ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣೀಭೂತನಾದ ಗಾಂಧಿಯನ್ನು ಕವಿ ಇಲ್ಲಿ ಸ್ಮರಿಸುತ್ತಾರೆ. ಭಾರತಾಂಬೆ ಸ್ವತಂತ್ರಳಾಗಿದ್ದಾಳೆ. ಸ್ವತಂತ್ರ ಭಾರತದಲ್ಲಿ ಕವಿ ಸುತ್ತಾಡುತ್ತಾ ಇರುವಾಗ ಗಾಂಧೀಜಿಯನ್ನು ಕಂಡ ಕವಿ ಗಾಂಧೀ ಸತ್ಯ. ಶಾಂತಿ, ಅಹಿಂಸೆಯ, ಸ್ವಾತಂತ್ರ್ಯ ತಂದು ಕೊಟ್ಟವರು ಎಂದು ಹೇಳುತ್ತಾ ಸ್ವತಂತ್ರ ಭಾರತದಲ್ಲಿಯ ಮೋಸ, ವಂಚನೆ, ಭ್ರಷ್ಟಾಚಾರ, ಹಗರಣಗಳ ಪಾಪದ ಕಂತುಗಳನ್ನು ಹಾಗೂ ಉಳ್ಳವರ ಅಟ್ಟಹಾಸವನ್ನು ವ್ಯಂಗ್ಯವಾಗಿ ವಿಡಂಬಿಸುತ್ತಾ 'ನೀ ಇದನ್ನೆಲ್ಲ ನೋಡಾಕ ನಿನ್ನೇ ಬರಬೇಕಾಗಿತ್ತು' ಎಂದು ಹೇಳುತ್ತಾ ಗಾಂಧೀಜಿ ಇಲ್ಲದ ಸ್ವಾತಂತ್ರ್ಯ ಭಾರತದ ಇಂದಿನ ಕರಾಳ ಸ್ಥಿತಿಗೆ ಕನ್ನಡಿ ಹಿಡಿಯುತ್ತಾರೆ.

"೧೯೭೫ ರಿಂದಾಚೆಗೆ ದಲಿತರು ಹೊಸ ಪ್ರಜ್ಞಾವಂತ ಜನಾಂಗವಾಗಿ ಕರ್ನಾಟಕದಲ್ಲಿ ಸಿದ್ಧಲಿಂಗಯ್ಯನವರ ಕವಿತೆಗಳ ಎರಕದಲ್ಲಿ ರೂಪಗೊಂಡರು. ಅದಕ್ಕಾಗಿಯೇ ದಲಿತರ ಮೆರವಣಿಗೆ ಬೀದರನಿಂದ ಕೋಲಾರದ ತನಕ ಯಾವುದೇ ಮೂಲೆಯಲ್ಲಿ ನಡೆದರೂ ಅಲ್ಲಿ ಕವಿಯ ಹಾಡುಗಳು ಅದಕ್ಕಾಗಿಯೇ ಇದು ಸಾರ್ವಜನಿಕ ಕಾವ್ಯದ ಅಂತಿಮ ಯಶಸ್ಸು. ಈ ಕವಿತೆಗಳನ್ನು ವ್ಯಕ್ತಿಯೊಬ್ಬ ತನ್ನ ಅತ್ಯಂತ ಖಾಸಗಿ ದುಃಖ, ರೋಮಾಂಚನದ ದಿಗ್ಭ್ರಮೆಗಳ ಗಳಿಗೆಗಳಲ್ಲಿ ಓದಿಕೊಂಡಾಗ ಹೇಗೆ ಭಾವಿಸುತ್ತಾನೋ ಅಷ್ಟು ಖಚಿತವಾಗಿ ಹೇಳಲಾಗದು. ಇವು ತೀರಾ ಸಾರ್ವಜನಿಕವೆನ್ನಿಸಿ ಬಿಡುವ ಸಾಧ್ಯತೆಯೇ ಹೆಚ್ಚು. ಆದರೆ ಆತ ತನ್ನ ಸಾಮಾಜಿಕ ಸಾರ್ವಜನಿಕ

---

[೧೪] ಅಂಬೇಡ್ಕರ್ ವಾದ : ದಲಿತರು–ಡಾ.ಟಿ.ಎಂಭಾಸ್ಕರ–ಪುಟ–೯೪
[೧೫] ನೆರಳಿಗೂ ಮೈಲಿಗೆ–ಸದಾಶಿವ ದೊಡಮನಿ–ಪುಟ–೧೦

ಗಳಿಗೆಗಳಲ್ಲಿಯಂತೂ ಈ ಕಾವ್ಯಕ್ಕೆ ಪ್ರತಿಸ್ಪಂದಿಸದೆ ಇರಲಾರ. ಸಾರ್ವಜನಿಕ ರಾಜಕೀಯ ಬದುಕಿನ ಉತ್ಸಾಹ, ರೋಷ, ಭೀತಿಗಳನ್ನು ಕವಿ ಪರಿಣಾಮಕಾರಿಯಾಗಿ ಹಿಡಿದಿಟ್ಟಿದ್ದಾರೆ. ಸಾರ್ವಜನಿಕ ಕಾವ್ಯಕ್ಕೆ ಒಂದು ಭಾಷಣದ ಗುಣವಿರದಿದ್ದರೆ ರುಚಿಸುವುದೇ ಇಲ್ಲ. ಅದಕ್ಕಾಗಿಯೇ ಕ್ರಾಂತಿ ಕವಿಗಳು ಉತ್ಪ್ರೇಕ್ಷೆ ಆಯ್ದುಕೊಳ್ಳುತ್ತಾರೆ. ಇಲ್ಲವೆ ಬ್ರೆಕ್ಟನ್ ಹಾಗೆ ವ್ಯಂಗ್ಯವನ್ನು, ವೈರುಧ್ಯಗಳನ್ನು ಕೋಪ, ಶೋಕ ಅಥವಾ ವ್ಯಂಗ್ಯ ನಗು–ಹೀಗೆ ಯಾವುದೇ ಆದರೂ ಸಾರ್ವಜನಿಕ ಸಭೆ ಎಂಬಂತಹ ಸ್ಥಿತಿಯಲ್ಲಿಯೇ ಕಾವ್ಯ ಅನುರುಣಿಸುತ್ತದೆ. ಹೀಗೆ ಸಾರ್ವಜನಿಕ ಕಾವ್ಯ ತನ್ನ ಅತ್ಯುತ್ತಮ ಕ್ಷಣಗಳಲ್ಲಿ ಒಂದು ಅದಿಮ ಸಮಷ್ಟಿಯನ್ನು ಸೃಷ್ಟಿಸುತ್ತದೆ. ಒಂದು ರೀತಿಯ ಭಾವುಕ ಏಕತೆ ಕವಿ ಮತ್ತು ಸಮಷ್ಟಿಯನ್ನು ಜೋಡಿಸುತ್ತದೆ. ಈ ದೃಷ್ಟಿಯಿಂದ ಬೇಂದ್ರೆಯ ನಂತರ ಅತ್ಯಂತ ಹೆಚ್ಚು ಸಾರ್ವಜನಿಕ ಅಸ್ತಿತ್ವವುಳ್ಳ ಕಾವ್ಯ ಬರೆದ ಕವಿಯೆಂದರೆ ಸಿದ್ಧಲಿಂಗಯ್ಯನವರೇ ಇರಬೇಕು"[೧೬] ಎಂದು ಅಭಿಪ್ರಾಯ ಪಡುತ್ತಾರೆ.

ಕನ್ನಡ ತಾಯಿಯ ವೈಭವ ಎಂಥದ್ದು ಎಷ್ಟು ಪುಣ್ಯವಂತೆ ಬಂಗಾರ, ಮುತ್ತು, ರತ್ನಗಳಲ್ಲಿ ಮುಳುಗಿಸಿದ್ದಾರೆ ಎಂದು ಕವಿ ಇಂಥ ಕನ್ನಡ ತಾಯಿಯ ವೈಭವವನ್ನು, ಕನ್ನಡ ನಾಡಿನ ಚರಿತ್ರೆಯನ್ನು ಹೇಳುತ್ತಾರೆ. ಜೊತೆಗೆ ಇವೆಲ್ಲ ಇದ್ದರು ದಲಿತರ ಸ್ಥಿತಿ ಎಂತಹದ್ದು, ನೀನು ಎಂದಾದರೂ ನೋಡಿದಿಯಾ? ಒಮ್ಮೆಯಾದರು ಕಣ್ಣು ಬಿಟ್ಟು ನೋಡು ಎಂದು ನಿವೇದಿಸಿದ್ದಾರೆ.

"ಸೊಳೆಯರಿಲ್ಲದ ನಾಡೊಂದು ನಾಡೆ ?
ಹದವಾದ ಚರ್ಮವ ಹರಾಜಿಗಿಟ್ಟು ಜನವ ಬದುಕಿಸಿದ
ಕರ್ನಾಟಕ ರತ್ನ ಸಿಂಹಾಸನಾಧೀಶ್ವರ
ಕನಸಿನಲ್ಲಿ ಕಂಡು ಸಲುಗೆಯ ಮಾತಾಡಿದವಳೆ
ನಿನ್ನ ಕೀರ್ತಿ ಕಡಿಮೆಯೇನೆ ?
ರೈತರ ಬೆವರ ನೆಕ್ಕಿ ನೆಕ್ಕೂದಿದ
ಜಮೀನುದಾರರ ಜೊತೆಗಾತಿ
ಕಾರ್ಮಿಕರ ರಕ್ತದ ರೆವೆವುಂಡೆಯ ಉಂಡು ಕಾರಿನ
ಹಾರನಿನ್ನಂತೆ ತೇಗುವ ಮಾಲೀಕ ಮಿಂಡಗಾತಿ
ಎಲ್ಲೇಲ್ಲು ನೀನೆ ನಿನ್ನ ಮಕವೆ
ಕುಣಿಸುತಾರೆ ಮೆರಸುತಾರೆ
ಯಂಗೆ ಬಿಡಿಸಲೆ ನಿನ್ನ
ಯಂಗೆ ಕಯ್ಯೆತ್ತಿ ಮುಗಿಯಲೆ ನಿಂಗೆ ?[೧೭]

[೧೬] ಮೆರವಣಿಗೆ–ಡಾ. ಸಿದ್ಧಲಿಂಗಯ್ಯ–ಪುಟ–೧೫
[೧೭] ಮೆರವಣಿಗೆ– ಡಾ. ಸಿದ್ಧಲಿಂಗಯ್ಯ–ಪುಟ–೬೯, ೭೦

ಈ ಕವಿತೆಯ ಕವಿಯಲ್ಲಿ ಶೋಷಣೆ ದಬ್ಬಾಳಿಕೆಯ ವಿರುದ್ಧ ಸಿಡಿದೆಳುವ ಮನಸ್ಸು ತಾನು ಕಂಡ ತನ್ನ ಜನಗಳ ಬಗ್ಗೆ ಅನುಕಂಪವಿದೆ. ಅದಕ್ಕಾಗಿ ಕನ್ನಡ ತಾಯಿಯನ್ನು ಮಿಂಡಗಾತಿ ನಿನಗ ಹೇಗೆ ನಮಸ್ಕರಿಸಲಿ ಇಲ್ಲಿ ಸಿಟ್ಟು ಆವೇಶ ಉಕ್ಕಿ ಹರಿಯುತ್ತಿದೆ.

ಕನ್ನಡ ತಾಯಿಯ ವೈಭವವನ್ನು ಹೇಳುತ್ತಾ "ಈ ಜಮೀನು ನಿಮ್ಮದಂತ ಆ ದೇವರು ಏನ್ ಕಾಗದಾ ಪತ್ರ ಕೊಟ್ಟು ನಿಮ್ಮನ್ನು ಈ ಭೂಮ್ಯಾಗ ಕಳಿಸ್ಯಾನೇನು ? ನಾವು ಈ ಭೂಮಿಗೆ ಹ್ಯಾಂಗ್ ಬಂದ್ವೋ, ನೀವೂ ಹಂಗ ಬಂದ್ರಿ ಫರ್ಕ್ ಇಷ್ಟೆ ನಾವು ಗುಡಿಸಲದೊಳ್ಗ ಹುಟ್ಟದ್ರ ನೀವು ಬಂಗ್ಲೆಯೊಳಗೆ ಹುಟ್ಟದ್ರಿ. ಮೂಲದೊಳ್ಗ ಈ ಜಮೀನು ನಮ್ಮದು ಬಡತನದ ಕಾರಣಕ್ಕೆ ಈಗ ಅದು ನಿಮ್ಮ ಕಡೀಕ್ಕ ಇರಬೌದು. ಅದರ ಮ್ಯಾಲ ನಿಮ್ಮ ಹಕ್ಕು ಇರಬೌದು. ಆದ್ರ ಅದರ ಮ್ಯಾಲ ನಮ್ಮ ಪ್ರೀತಿ ಐತಿ. ಅದು ನಮ್ಮ ತಾಯಿ ಇದ್ದಾಂಗ. ತಾಯಿಯನ್ನು ಯಾಂವಾರ ಬ್ಯಾರೆಯವರಿಗೆ ಬಿಟ್ಟು ಕೊಡ್ತಾನೇನು? ಏಳೇಳು ಜನ್ಮ ಹೋದ್ರೂ ಅದು ನಿಮ್ಮದಾಗಾಂಗಿಲ್ಲ"[೧೮] ಕನ್ನಡ ತಾಯಿ ಮೇಲ್ಜಾತಿಯವರು ಹೇಗೆ ಇದ್ದರೂ ಏನೇ ಮಾಡಿದರೂ ಅವರಿಗೆ ಸಲಾಮ ಹೊಡೆಯುವ ಇವಳು ಮಾಲೀಕರ ಮಿಂಡಗಾತಿಯಾಗಿರುವಳು ಎಂದು ದೂರುತ್ತಾರೆ.

"ಬನ್ನಿರಿ ಬನ್ನಿರಿ ಬನ್ನಿರಿ
ಕನ್ನಡಮ್ಮನ ತಾಯ್ನೆಲಕ್ಕಾಗಿ
ಉಸಿರಿರುವ ತನಕ ಹೋರಾಡೋಣ
ಒಂದೆಡೆ ತಮಿಳರ ದುರಾಕ್ರಮಣ
ಮತ್ತೊಂದೆಡೆ ಮರಾಠರ ಆಕ್ರಮಣ
ನಡುವೆ ಕನ್ನಡಮ್ಮನ ಹೋರ ಪಯಣ
ನಮ್ಮ ಜನ ಸಾಧು ಸಂತರು
ಹೋರಾಡುವರು ಸಹನೆ ಶಾಂತಿಯಿಂದ
ವಿಜಯಿಯಾಗುವ ಕನ್ನಡ ತಾಯ ದಯೆಯಿಂದ."[೧೯]

ಕನ್ನಡ ತಾಯಿಯ ರಕ್ಷಣೆ ನಮ್ಮ ಹೊರೆಯಾಗಿದೆ ಕನ್ನಡ ನಾಡಿನ ರಕ್ಷಣೆ ನಮ್ಮ ರಕ್ಷಣೆ ಇವೆಲ್ಲವುಗಳಿಂದ ರಕ್ಷಣೆ ಪಡೆಯಬೇಕು ಕನ್ನಡ ತಾಯಿ ಸಹನೆ, ಶಾಂತಿ ಸೂಚಕಳಾದವಳು. ಅವಳನ್ನು ಕಾಪಾಡುವುದು ನಮ್ಮ ಕರ್ತವ್ಯ.

---

[೧೮] ಆಧುನಿಕ ಕನ್ನಡ ಸಾಹಿತ್ಯ ಮೊದಲ ತಲೆಮಾರಿನ ದಲಿತ ಸಾಹಿತಿಗಳು-ಸಂ.ಡಾ.ಎಂ.ಎಸ್.ಶೇಖರ್-ಪುಟ-೧೩

[೧೯] ದಲಿತೋದಯ-ಸಂ.ಟಿ.ಆರ್. ಮಹಾದೇವಯ್ಯ-ಪುಟ-೧೧(ತಾಯಿ ನೆಲ-ಆರ್.ರಘುರಾಮ್)

ಕವಿ ಅರವಿಂದ ಮಾಲಗತ್ತಿಯವರು ಕನ್ನಡ ನಾಡಿಗೆ ಎಂಥ ಅದ್ಭುತ ಶಕ್ತಿ ಇದೆ ಎನ್ನುವುದನ್ನು ತಮ್ಮ 'ವಿದ್ಯುತ್ ತಂತಿಗಳು' ಎಂಬ ಕವನದಲ್ಲಿ ಹೇಳುತ್ತಾರೆ. ಕನ್ನಡಿಗರನ್ನು ಹಾವುಗಾರನೆನ್ನುತ್ತ, ಇಡೀ ಭಾರತದ ಪ್ರತಿಬಿಂಬ ಮೂಡುವಂತೆ ಚಿತ್ರಿಸುತ್ತಾರೆ.

> "ಕನ್ನಡದ ಹಾವುಗಾರಗೆ ಗೊತ್ತು
> ದೇಶಿಸರ್ಪಗಳ ಕೆಣಕಿದರೆ
> ಕೈಯಲ್ಲಿ ಮಂತ್ರದಂಡವೂ ಇಲ್ಲ ಮಾಯದ
> ಟಾಪೆ, ಟೋಪಿಯೂ ಇಲ್ಲ
> ಈ ಸ್ವದೇಶಿ ಬಡಹಾವುಗಳು ಬದುಕುಳಿಯಲು
> ವಿದೇಶಿ ಸರ್ಪಗಳೇ ಮದ್ದು."[೨೦]

ಪಾರ್ನಾದಲ್ಲಿ "ಸಾಹೇಬರು ಯುದ್ಧ ಮಾಡುತ್ತಾರೆ. ಕನು ಸಿದ್ದು ಮತ್ತು ಮಂಜಿ ಯುದ್ಧ ಮಾಡುವುದಿಲ್ಲ. ಠಾಕೂರನೇ ಸ್ವತಃ ಯುದ್ಧ ಮಾಡುತ್ತಾನೆ. ತಾಯಿ ಗಂಗೆ ಠಾಕೂರನ ನೆರವಿಗೆ ಬರುತ್ತಾಳೆ. ಆಕಾಶದಿಂದ ಬೆಂಕಿಯ ಮಳೆ ಬೀಳುತ್ತದೆ ಎಂದು ಹೇಳಲಾಗಿದೆ. ತಮ್ಮ ಕಡೆ ನ್ಯಾಯವಿದೆ. ಆದ್ದರಿಂದ ದೇವರು ತಮಗೇ ಸಹಾಯ ಮಾಡುತ್ತಾನೆ ಎಂದು ನಂಬಿ ಎಲ್ಲಾ ಸಂಚಾಲರೂ ಹೋರಾಟಕ್ಕೆ ಇಳಿದರು. ಮುಖ್ಯಸ್ಥರೆಲ್ಲ ಕುದುರೆಗಳ ಮೇಲೆ ಅಗ್ರನಾಯಕರಾದ ಕನು ಮತ್ತು ಸಿದ್ದು ಆನೆಯ ಮೇಲೆ ಇಲ್ಲವೇ ಪಲ್ಲಕ್ಕಿಯಲ್ಲಿ ಕುಳಿತು ಹೋರಾಟಕ್ಕಿಳಿದರು. ಇವರೊಂದಿಗೆ ಸಾವಿರಾರು ಸಂಚಾಲರು ತಮ್ಮ ನಗಾರಿಗಳನ್ನು ಬಾರಿಸುತ್ತ, ಕೆಂಪು ಬಣ್ಣದ ಉಡುಪು ಧರಿಸಿ ಹೊರಟರೆಂದರೆ ಅವರು ಏನು ಪರಾರಿಯಾಗುತ್ತಿದ್ದರು."[೨೧] ಈ ಉದಾಹರಣೆಗಳನ್ನು ಇಟ್ಟುಕೊಂಡು ಕವಿ ನಮ್ಮ ದೇಶದ ಹಾವುಗಳು ಉಳಿಯಬೇಕೆಂದರೆ ವಿದೇಶಿ ಹಾವುಗಳು ಬೇಕು ಎಂದು ಈ ಕವಿತೆಯ ಮೂಲಕ ಹೇಳ ಬಯಸುತ್ತಾರೆ. ಕನ್ನಡ ನಾಡು ಶ್ರೀಮಂತ ನಾಡು ಪಾರಂಪರಿಕ, ಕಲೆ, ಸಂಸ್ಕೃತಿ, ಸಾಹಿತ್ಯ ಸಂಪ್ರದಾಯಗಳ ನೆಲೆ ಬಿಡು ಆಚರಣೆಗಳು ಎಲ್ಲವನ್ನು ಒಳಗೊಂಡ ಈ ಕನ್ನಡಾಂಬೆಯನ್ನು ಕುರಿತು ಒಬ್ಬ ಕವಿಯು ಕನ್ನಡವ್ವನಿಗೆ ಬರಮಾಡಿಕೊಳ್ಳಲು ಬಯಸುತ್ತಾರೆ. ಅದಕ್ಕಾಗಿ ನಮ್ಮ ಕನ್ನಡಾಂಬೆ ಎಂಥ ಸಮೃದ್ಧ ಸೊಬಗನ್ನು ಹೊಂದಿದ್ದಾಳೆ ಎಂಬುದನ್ನು ಕವಿ ಡಾ. ಅರ್ಜುನ ಗೊಳಸಂಗಿಯವರು ತಮ್ಮ ಒಂದು ಕವಿತೆಯಲ್ಲಿ

---

[೨೦] ಅರವಿಂದ ಮಾಲಗತ್ತಿ ಅವರ ಆಯ್ದ ಕವಿತೆಗಳು-ಸಂ.ಎಚ್.ಎಸ್.ರಾಘವೇಂದ್ರರಾವ್-ಪುಟ-೧೦೭(ವಿದ್ಯುತ್ ತಂ-ತಿಗಳು- ಅರವಿಂದ ಮಾಲಗತ್ತಿ)

[೨೧] ದಲಿತ ಅಧ್ಯಯನ-ಸಂ.ಡಾ.ಟಿ.ಆರ್.ಚಂದ್ರಶೇಖರ-ಪುಟ-೩೩೮

"ನಮ್ಮಿ ಕರುನಾಡು
ಕಲೆ ಸಾಹಿತ್ಯದ ಬೀಡು
ಕನ್ನಡಾಂಬೆಗೆ ನಾವು ಕರಮುಗಿದು ಕರೆಯುತ್ತ॥ [೨೨]
॥ಸ್ವಾಗತವ॥

ಕನ್ನಡನಾಡು ಕಲೆ, ಸಾಹಿತ್ಯ, ಸಂಸ್ಕೃತಿಯ ನೆಲೆವೀಡು, ಅಂತಹವಳಿಗೆ ಕೈಮುಗಿದ ಆಶೆಯವನ್ನು ಇಲ್ಲಿ ವ್ಯಕ್ತಪಡಿಸುತ್ತಾರೆ. ಡಾ. ಎಲ್. ಹನುಮಂತಯ್ಯ ಅವರು 'ತಾಯಿ ಭಾರತಿ' ಕವಿತೆಯಲ್ಲಿ

"ತಾಯೆ
ನಮ್ಮ ತಾತ ಮುತ್ತಾತರು
ಮಣ್ಣಿನ ಕಣ ಕಣವ ಕಣ್ಣೀರಲ್ಲಿ
ಕಲಸಿ, ಎಂಟೆ ತೊಂಟೆಗಳ ಬೆರಸಿ
ಕಟ್ಟಿರುವ, ಇಪ್ಪತ್ತೈದು ಅಂಕಣದ
ಎಂಟು ಬಾಗಿಲಿನ ಈ ಮನೆಯ
ಜಂತೆ ಜಂತೆಗಳಲ್ಲಿ ತೊಲೆಗಂಭ
ರಿಪೀಸುಗಳಲ್ಲಿ ನಮ್ಮದೂ ಪಾಲಿದೆ
ಅಂಗಳದಿ ಬಂದು ನಿಂತಿದ್ದೇವೆ
ಹೇಳು! ಇನ್ನೆಷ್ಟು ದಿನ ಕಾಯುತ್ತಾ ನಿಲ್ಲೋಣ."[೨೩]

ಎಷ್ಟು ದಿನ ಕಾಯೋಣ ಎನ್ನುವ ಕವಿ ಎಲ್ಲರಿಗೂ ಸ್ವಾತಂತ್ರ್ಯ ಬಂತು, ನಮಗಿನ್ನು ಬಂದಿಲ್ಲ. ಹೆತ್ತ ತಾಯಿಯಲ್ಲಿ ಮಕ್ಕಳು ತಮ್ಮ ಪಾಲು ಕೇಳುವ ರೀತಿಯಲ್ಲಿ ಭಾರತ ಮಾತೆಯಲ್ಲಿ ಕಳಂಕಿತ ಸಮಾಜದ ಪ್ರತಿನಿಧಿಯಾಗಿ ತಮ್ಮ ಪಾಲಿನ ಭಾಗ ಕೇಳುವುದು ಅವಮಾನಿತನೊಬ್ಬ ಸ್ವಾಭಿಮಾನಿಯಾದಾಗ ಹೊರ ಬರುವ ಸತ್ಯದ ಕೂಗು ಇದು. ನಾವು ಈ ದೇಶದ ಪ್ರಜೆಗಳೆಂದ ಮೇಲೆ ನಮಗೂ ಸರಿ ಸಮಾನತೆಯ ಅಧಿಕಾರ ಬೇಕು.

ಈ ಶೋಷಣೆ ಬಾಳು ಸಾಕು ಎಂದು ಕನ್ನಡಾಂಬೆಯಲ್ಲಿ ನಿವೇದಿಸಿಕೊಳ್ಳುವುದನ್ನು ಕಾಣುತ್ತೇವೆ. ಸಂಪ್ರದಾಯಗತ ಕಪಿಮುಷ್ಠಿಯಲ್ಲಿ ತೊಳಲಾಡುತ್ತಿರುವ ಇಂಡಿಯಾದ ವಸ್ತುಸ್ಥಿತಿಯಲ್ಲಿ ಕವಿಯೋರ್ವ ಹೀಗೆ ಚಿತ್ರಿಸಿದ್ದಾನೆ.

---

[೨೨] ನಮ್ಮಜ್ಜಿ ಅವ್ವ ನನ್ನಾಕೆ-ಡಾ.ಅರ್ಜುನಗೊಳಸಂಗಿ-ಪುಟ-೭೨
[೨೩] ಅವ್ವನ ಕವಿತೆ-ಡಾ.ಎಲ್.ಹನುಮಂತಯ್ಯ-ಪುಟ-೧೧

“ಇಂಡಿಯಾ ನಿನ್ನ ಚರಿತ್ರೆಯುದ್ದಕ್ಕೂ ಬರೀ ಹಾದರಾಟ
ಸತ್ಯ ಮರೆ ಮಾಡಿ ನೀ ಇದುವರೆಗೂ ಕಲಿಸಿದ ಶಿಕ್ಷಣವ
ನಾ ನಿರ್ದಾಕ್ಷಿಣ್ಯವಾಗಿ ಒದೆಯುವೆ........
ನಿನಗೆ ಧಿಕ್ಕಾರ, ನಿನ್ನ ವ್ಯವಸ್ಥೆಗೆ ಧಿಕ್ಕಾರ
ನಿನ್ನ ಪರಂಪರೆ ಪುರಾಣಗಳಿಗೆ ಧಿಕ್ಕಾರ ಧಿಕ್ಕಾರ.”[೨೪]

“ಮನುಸ್ಮೃತಿ, ವೇದಸೂತ್ರ, ಭಗವದ್ಗಿತೆಗಳನ್ನು ಸುಡಬೇಕು ಎಂದು ಕರೆಕೊಟ್ಟ ಅಂಬೇಡ್ಕರ್ ಅವರು ಪ್ರತಿಪಾದಿಸಿದ ವೈದಿಕ ವಿರೋಧಿ ಧೋರಣೆಗಳು ಕವಿತೆಯ ಆಶಯಗಳಾಗಿರುವುದನ್ನು ನಾವಿಲ್ಲಿ ನೋಡಬಹುದು. ಶೋಷಕರನ್ನು ಪ್ರತಿಭಟಿಸುವುದಕ್ಕಿಂತ, ಶೋಷಕರ ಶೋಷಣೆಗೆ ಆಧಾರವಾಗಿರುವ ಶಾಸ್ತ್ರಗಳನ್ನೆಲ್ಲಾ ಸುಡಬೇಕೆಂಬ ಅಂಬೇಡ್ಕರರ ಮಾತು ಪ್ರಾಯಶಃ ಎಲ್ಲ ದಲಿತ ಬರಹಗಾರರಲ್ಲಿ ಕವಿತೆಯ ಆಕಾರ ಪಡೆದುಕೊಂಡಂತಿದೆ.”[೨೫]

“ಬದುಕು ಕಲಿಸಿದ ಮಹಾವಾದ
ಮಾರ್ಕ್ಸ್ ಗಾಂಧಿ ಅಂಬೇಡ್ಕರ್
ಆದರೆ
ಎಲ್ಲೆಲ್ಲೂ ಬದುಕೇ ಅಲ್ಲದ ಬದುಕು
ಈಗದರ ಶೋಧನೆ ಮುನ್ನಡೆಯ ಬೇಕು ನಾಡಿಗದು ಈಗ ಬೇಕೆಬೇಕು
ನಾಡನ್ನು ಇನ್ನಾದರೂ ಕಟ್ಟಿ ಆಳಬೇಕು.
ಆದರೆ...
ಯಾರು ಆಳಬೇಕು ?
ಕಾಣದಾಗಿಹ–
ಬದುಕ ತರಬಲ್ಲಳೆ ಮಾನಿನಿ ?
ನೋಡಬೇಕು.ಇಲ್ಲವೆ ಆಳಬಹುದೆ ಸೇನಾನಿ ?
ಆದರೆ ಎಷ್ಟು ದಿನ ?
ಬಡತನವೆ ? ಭಿಕ್ಷಾಟನೆಯೆ?
ಕೊಂಚವಾದರೂ ಕರಗದೆ–
ನಮ್ಮ ಲಂಚ ಸಂಸ್ಕೃತಿ?”[೨೬]

“ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡ ದಲಿತ ಬಂಡಾಯ ಚಳುವಳಿ ಮತ್ತು ಸಾಹಿತ್ಯ, ಧರ್ಮ, ದೇವರು, ಅಸ್ಪೃಶ್ಯತೆ ಜಾತೀಯತೆ ಹೆಸರಿನಲ್ಲಿ ದಮನಕ್ಕೊಳಪಟ್ಟ ದಲಿತ, ಶೋಷಿತ ವರ್ಗಗಳಲ್ಲಿ ಹೊಸದೊಂದು ಅರಿವನ್ನು ಮೂಡಿಸಿದವು. ಅಕ್ಷರ ಸಂಸ್ಕೃತಿಯ ಪ್ರತಿಫಲದಿಂದಾಗಿ ದನಿ ಇಲ್ಲದವರಂತಿದ್ದು, ನ್ಯಾಯದ ಹಕ್ಕನ್ನು ಪ್ರತಿಪಾದಿಸಿದರು. ಜನ ಸಮುದಾಯದಿಂದ ಬಂದ

---

[೨೪] ಬಂಡಾಯ ಕಾವ್ಯ – ಬರಗೂರು ರಾಮಚಂದ್ರಪ್ಪ–ಪುಟ–೩೬

[೨೫] ದಲಿತ–ಬಂಡಾಯ ಕಾವ್ಯ ಮತ್ತು ವಿಚಾರವಾದಗಳು–ಡಾ.ಪ್ರಹ್ಲಾದ ಅಗಸನ ಕಟ್ಟೆ–ಪುಟ–೧೪೯

[೨೬] ಗುಲಾಮಿ–ಮನಜ–ಪುಟ–೨೬.೨೭

ಲೇಖಕರು ಸಮಾಜ ಮತ್ತು ಸಂಸ್ಕೃತಿಯನ್ನು ಕುರಿತು ಗಂಭೀರವಾಗಿ ಚಿಂತಿಸತೊಡಗಿದರು. ಆ ಮೂಲಕ ತಮ್ಮ ಅಸ್ತಿತ್ವವನ್ನು ದಾಖಲಿಸಿದರು. ಈ ಬಗೆಯ ಎಚ್ಚರದ ಪ್ರಜ್ಞೆಗೆ ಪ್ರಧಾನವಾಗಿ ಅಂಬೇಡ್ಕರವಾದವೇ ಉಸಿರಾಯಿತು."[೨೭]

ದಲಿತರಿಗೆ ಅಂಬೇಡ್ಕರ್, ಮಾರ್ಕ್ಸ್, ಗಾಂಧಿ ದಾರಿ ದೀಪವಾದವರು, ದಲಿತರ ಬದುಕೇ ಹಾಳಾಗಿ ಹೋಗಿದೆ. ಹಾಳಾಗಿ ಹೋದ ಬದುಕನ್ನು ಮರಳಿ ತಂದು ಕೊಡುವಳೇ ಭಾರತ ಮಾತೆ. ಈ ಕಾಲ ಮುಗಿದು ಹೊಸದೊಂದು ಕಾಲ ಬರುವುದೇ ? ಎನ್ನುವ ಪ್ರಶ್ನೆಗಳು ಕಪಿಯಲ್ಲಿವೆ.

"ಭಾರತಿ
ಶಿವರಾತ್ರಿ ಶೃಂಗಾರವೇ ಗಂಡಿಲ್ಲದ ಗಯ್ಯಾಳಿಯೇ
ಸಂಪ್ರದಾಯದ ಸಂಗತಿಗಳ ಸಂಕೋಲೆಯ
ಬರಗಾಲದ ಬಂಗಾರವೇ ಬೆಂಕಿ ಕೆಂಡಗಳಂಥವಳೇ
ಭ್ರಮೆ ಎನಿಸುವ ಕಾಲ್ಪನಿಕ ಸುಖವೇ
ಕ್ಷಣ ಕ್ಷಣಕ್ಕೂ ಆವರಿಸುತ್ತಿರುವ ಆಸೆಗಳಿಗೆ
ಪ್ರಾಣ ಕೊಟ್ಟು ಆಡಿಸಲಾರದ ತಾಯಿಯೇ
ನಿನಗೆ ಏನೆಂದು ಮುತ್ತಿಕ್ಕಲೆ
ನಿನ್ನಲ್ಲಿ ಏನಂತ ನಾ ಬಾಳಲಿ
ನಿನ್ನಿಂದ ಏನಂತ ಸುಖ ಪಡೆಯಲಿ"[೨೮]

ಭಾರತದಾಗ ಹುಟ್ಟಿದವರಿಗೆಲ್ಲ ನೀನು ತಾಯಿ ಆದರೆ ನೀನು ನಮಗೇನು ಮಾಡಿರುವೆ. ನಿನ್ನ ಮಕ್ಕಳಲ್ಲವೇ ನಾವು ? ದೇಶ ಪ್ರೇಮದ ಜೊತೆಗೆ ಕವಿ ತಾಯಿಯನ್ನು ಮಲತಾಯಿ ಧೋರಣೆಗೆ ಒಳ ಪಡಿಸುತ್ತಾರೆ. ತಾಯಿಯೇ ಮಕ್ಕಳನ್ನು ಒಬ್ಬನಿಗೆ ಒಂದು, ಇನ್ನೊಬ್ಬರಿಗೆ ಇನ್ನೊಂದು ರೀತಿಯ ಭೇದವೆಸಗಿದರೇ ನಾವು ಎಲ್ಲಿಗೆ ಹೋಗಬೇಕು. ಹೊಲ ಕಾಯುವ ಬೇಲಿಯೇ ಹೊಲ ನುಂಗಿದರೇ ಏನು ಪ್ರಯೋಜನ. ಕೆಲಸಕ್ಕೆ ಮಾತ್ರ ನಾವು ಸುಖ ಪಡುವುದಕ್ಕೆ ಬೇರೆಯವರು ಅಂದಾಗ, ನೀನು ತೋರುವುದು ಮಲತಾಯಿ ಧೋರಣೆ ಅಲ್ಲದೆ ಮತ್ತೇನು ಎಂದು ಗಂಗಾರಾಂ ಚಾಂಡಳರು ಪ್ರಶ್ನಿಸುತ್ತಾರೆ.

---

[೨೭] ದಲಿತ ಲೋಕ-ಡಾ.ಎಚ್.ಟಿ.ಪೋತೆ-ಪುಟ-೮೨

[೨೮] ಬಂಡಾಯ ಕಾವ್ಯ-ಬರಗೂರು ರಾಮಚಂದ್ರಪ್ಪ-ಪುಟ-೭೨

"ಇಲ್ಲೆ ಇರುವೆ ನಾನು ಇಲ್ಲೆ ಇರುವೆ
ಕನ್ನಡ ತಾಯಿ ಮಡಿಲಲ್ಲಿ
ಕನ್ನಡ ತಾಯಿ ಮಡಿಲಲ್ಲಿ
ಮಣ್ಣಿನ ಮಗುವಾಗಿ
ತಾಯಿಯ ಉಡಿಯಲ್ಲಿ
ಜೋಗುಳ ಕೇಳಿಕೊಂಡು
ಹಾಯಾಗಿ ಮಲಗುವೆ
ಹೊಸಗನಸು ಕಾಣುವೆ
ಅಂಬುಗಾಲು ಹಾಕಿಕೊಂಡು
ತೊದಲು ಮಾತು ಆಡಿಕೊಂಡು
ತಾಯಿಯ ಮಮತೆಯಲ್ಲಿ
ನಾಡಿನ ಜನತೆಯಲ್ಲಿ."[೨೯]

ಮಮತೆ, ಸಹನೆ, ಪ್ರೀತಿ, ಕರುಣೆ ಇನ್ನೊಂದು ರೂಪವೇ ತಾಯಿ ಈ ಕನ್ನಡ ತಾಯಿಯ ನಾಡಿನಲ್ಲಿ ತನ್ನೆಲ್ಲ ಹಾವ ಭಾವಗಳನ್ನು ವ್ಯಕ್ತಪಡಿಸುತ್ತ ಇರುವೆನು ಎಂದು ನಾಡಿನ ಜೊತೆಗ ಕವಿ ಇದ್ದಾರೆ ಎನ್ನುವ ಭಾವಾಭಿವ್ಯಕ್ತಿ ಇಲ್ಲಿದೆ.

ದಲಿತ ಕವಿಗಳು ತಮ್ಮ ಆಕ್ರೋಶ, ಸಿಟ್ಟು ದ್ವೇಷವನ್ನು ಭಾರತಮಾತೆಗೆ ಹೇಳಿದರೆ ಇನ್ನೊಂದೆಡೆ ಭಾರತಾಂಬೆ ಕನ್ನಡಾಂಬೆ ನನ್ನ ತಾಯಿಯೆಂದು ಕರೆಯುತ್ತ ಈ ತಾಯಿಯ ಒಡಲಲ್ಲೆ ನಮ್ಮ ವಾಸವಿದೆ. ದಲಿತರು ತಮಗಾದ ಶೋಷಣೆ, ಅನ್ಯಾಯ, ಅತ್ಯಾಚಾರಗಳನ್ನು ಭಾರತಾಂಬೆ, ಕನ್ನಡಾಂಬೆಗೆ ಹೇಳುತ್ತಾ ತಾತ್ವಿಕವಾಗಿ ಸಂವಾದಕ್ಕಿಳಿದು ಮುಖಾಮುಖಿಯಾಗುವುದನ್ನು ಇಲ್ಲಿ ಕಾಣುತ್ತೇವೆ.

### ೪.೨ ದಲಿತ ಕವಿತೆಗಳಲ್ಲಿ ಅವ್ವ ಮತ್ತು ಇತರ ಪಾತ್ರಗಳು :

ದಲಿತರಲ್ಲಿ ಮಾನವೀಯ ಮೌಲ್ಯಗಳು ಅಚಲವಾಗಿದ್ದವು. ದಿನನಿತ್ಯ ನೋವು, ಶೋಷಣೆ, ದೌರ್ಜನ್ಯಗಳನ್ನು ಅನುಭವಿಸುವ ಹೃದಯದಲ್ಲಿ ತನ್ನ ತಾಯಿ–ತಂದೆಯರ ಮೇಲಿನ ಅನ್ಯಾಯಗಳನ್ನು ನೋಡಿ ರೋಸಿ ಹೋಗಿದ್ದರು. ಜೊತೆಗೆ ಪರಂಪರೆ ಹೇಳಿಕೊಟ್ಟ ಪಾಠವನ್ನೇ ಅನುಸರಿಸುತ್ತಾ ಬಂದ ಕೆಳವರ್ಗದವರು, ಸವರ್ಣೀಯರು ಹೇಳಿದ್ದನ್ನು ಮಾಡುವುದರಲ್ಲಿ ತಮ್ಮ ಜೀವನ ಸವೆಸಿದ್ದಾರೆ. ಆದರೆ ಈ ದಾಸ್ಯದಿಂದ ಅನುಭವಿಸಿದ ಕಷ್ಟಗಳಿಂದ ಅವರು ಬಿಡುಗಡೆ

---

[೨೯] ಮಾತಾಡುವ ಎಲುಬುಗಳು–ಡಾ.ಟಿ.ಎಂ.ಭಾಸ್ಕರ್–ಪುಟ–೧೪

ಹೊಂದುತ್ತಾರೆಯೋ ಎಂಬುದು ಗಹನವಾದ ವಿಷಯ. ಸ್ವಾತಂತ್ರ್ಯ ಪೂರ್ವದಲ್ಲಿ 'ಬಿಡುಗಡೆ' ಎನ್ನುವುದು ಜೀವನದ ಪ್ರಮುಖ ಪ್ರಶ್ನೆಯಾಗಿತ್ತು. ಮೇಲ್ವರ್ಗದವರಿಗೆ ಬ್ರಿಟೀಷರ ವಸಾಹತುಶಾಹಿಯಿಂದ ಬಿಡುಗಡೆ ಹೊಂದುವ ಬಯಕೆಯಿತ್ತು. ಆದರೆ ಕೆಳವರ್ಗದವರಿಗೆ ಇದಕ್ಕಿಂತ ಮುಖ್ಯವಾಗಿ ಪರಂಪರೆ ಹೇರಿದ ಅಮೌಲಿಕ ಸಂಪ್ರದಾಯದಿಂದ ಮುಕ್ತಿಗೊಳ್ಳುವ ಹಂಬಲವಿತ್ತು. ಅದಕ್ಕೆ ಡಾ॥ ಬಾಬಾಸಾಹೇಬ ಅಂಬೇಡ್ಕರರು ಬಯಸಿದ್ದು, ಭಾರತ ಸ್ವಾತಂತ್ರ್ಯಕ್ಕಿಂತ ತಮ್ಮ ಸಮುದಾಯದ ಶೋಷಿತ ಬದುಕಿನಿಂದ ಕಳಚಿಕೊಳ್ಳುವುದು. ಈ ಅರ್ಥದಲ್ಲೆ ಅವರು ನನಗೆ ಅನ್ನಕ್ಕಿಂತ ಸ್ವಾಭಿಮಾನ ಮುಖ್ಯ ಎಂದು ಹೇಳಿದ್ದರು.

ಈ ನಿಟ್ಟಿನಲ್ಲಿಯೇ ಕಾರ್ಯಪ್ರವೃತ್ತರಾದ ದಲಿತ ಲೇಖಕರು ನೋವಿಗೆ ಸಿಲುಕಿರುವ ತಮ್ಮ ಜನರನ್ನು ಆ ನೆಲೆಯಿಂದ ಪಾರುಮಾಡುವುದರಲ್ಲಿ ಹೆಚ್ಚಿನ ಪ್ರಯತ್ನವಹಿಸಿದ್ದಾರೆ. ಸತ್ಯಾನಂದ ಪಾತ್ರೋಟರ 'ಕಲ್ಲಿಗೂ ಗೊತ್ತಿರುವ ಕತೆ' ಕವಿತೆಯಲ್ಲಿ ದಲಿತರ ಶ್ರಮದ ಚಿತ್ರಣವಿದೆ.

"ನನ್ನವ್ವ ಹೇಳವಳು
ಊರಿಗೆ ಊರೇ ಕುಳಿತಿದೆ ತಂಪಾದ ನೆರಳಲ್ಲಿ
ನಿಮ್ಮಪ್ಪ ಕುಳಿತಿದ್ದಾನೆ ಸುಡುವ ಕಡು ಬಿಸಿಲಲ್ಲಿ
ಗುಡಿ-ಗುಂಡಾರ ಮನೆ ಮಠ
ಅವರ ಬೆವರಿನ ಫಲ
ಇದರಲೆಲ್ಲಾ ಅಡಗಿದೆ ಅವನ ಬಲ
ಇದು
ಒಂದೊಂದು ಕಲ್ಲಿಗೂ ಗೊತ್ತಿರುವ ಕತೆ."[೩೦]

ಕವಿಯು ಹೇಳುವ ಮಾತಿನಲ್ಲಿ ತನ್ನ ತಂದೆಯ ಕಷ್ಟದ ಅರಿವಾಗುತ್ತದೆ. ಊರೇ ಒಂದು ಕಡೆ ಇದ್ದಾಗ ಅದು ತಂಪಾದ ನೆರಳಲ್ಲಿ ಕುಂತಿರುವುದು. ಆದರೆ ದಲಿತರು ಊರಿನ ಹೊರಗಿದ್ದಾರೆ. ಮನೆ-ಮಠ, ಗುಡಿ-ಗುಂಡಾರವನ್ನು ಕಟ್ಟಿದವರು ಆ ದಲಿತರು. ಅದರಲ್ಲಿ ಬದುಕುವ ವಾಸಿಸುವ ಹಕ್ಕು ಅವರಿಗಿಲ್ಲ. ಊರಿನ ಹೊರಗೆ ಗುಡಿಸಿಲಲ್ಲಿ ಕಡು ಬಿಸಿಲಲ್ಲಿದ್ದಾರೆ. ಊರಿಂದ ಬಹಿಷ್ಕರಿಸಿ ಹೊಲಗೇರಿ ನಿರ್ಮಿಸಿ ಕಷ್ಟ ಕಾರ್ಪಣ್ಯಗಳನ್ನೇ ಬಾಳಲ್ಲಿ ಒಂದು ಪ್ರಮುಖ ಅಂಗವಾಗಿಸಿಕೊಂಡು ಬಾಳುತ್ತಿರುವ ತಾಯಿಯ ಜೀವನದ ವ್ಯಥೆ ಎಲ್. ಹನುಮಂತಯ್ಯ ಅವರ 'ಅವ್ವ' ಕವನದಲ್ಲಿದೆ.

---

[೩೦] ಸತ್ಯಾನಂದ ಪಾತ್ರೋಟ-ಕರಿನೆಲದ ಕಲೆಗಳು-ಪುಟ-೩೦

“ಬರಿಗೊರಳ ತುಂಬ
ಕರಿಮಣಿ ಪೋಣಿಸಿ
ತನಗಿಲ್ಲದ ಅಕ್ಷರದ ಅಡ್ಡಿಕೆಯ
ಬಯಕೆಯಲಿ ನಡೆಸಿ ನಡಿಗೆಯ ತಪಸು
ಹುತ್ತಗಳ ಬಾಯ್ಗೆ ಮುತ್ತನಿಕ್ಕಿ
ಸರ್ಪಗಳ ಸಂಗ ಸಿಹಿಯ ಬೇಡಿದ ತಾಯೆ”[೩೧]

ಕಹಿಯನ್ನೆ ಸಿಹಿಯನ್ನಾಗಿ ಸ್ವೀಕರಿಸಿ ಸರ್ಪಗಳ ಸಂಗ ಶಬ್ದವು ವಿಷದ ಸಂಕೇತವಾಗಿದೆ. ಅವೆಲ್ಲಕ್ಕೂ ಮುತ್ತಿಕ್ಕಿ ಸಿಹಿಯಾಗಿಸಿದವಳು.

“ಹರಿದ ಚಡ್ಡಿಗೆ
ಬಿಳಿದಾರದ ಚಿತ್ತಾರ ಹೆಣೆದು
ಹರಳೆಣ್ಣೆ ಕಾಸಿ ಬೈತಲೆ ಬಾಚಿ
ಹಣೆಯಂಗಳದಿ ಬೊಟ್ಟನಿಟ್ಟು
ಬಾಡುಬೇಯಿಸಿದ
ಮಡಕೆತಳದ ಮಸಿಯ
ಕಣ್ಣುಬ್ಬಿಗೆ ಬಳಿದು
ಮಾರಿಮಸಣಿ ಕಣ್ಣುಗಳು
ಚಟ್ಟುಪಿಟ್ಟಿನಲ್ಲಿ ಎಂದು ಸುರಿ
ದಿಷ್ಟಿನೀವಳಿಸಿ ಮೂರು ದಾರಿಯ
ಕೂಡಿನಲಿ ಕುಟ್ಟುತ್ತಿದ್ದಮ್ಮಾ.”[೩೨]

ತಾಯಿ ಬಡತನದ ಬೇಗೆಯಲ್ಲಿಯೂ ತನ್ನ ಮಗುವನ್ನು ಸಾಕುವ ಬಗೆ ಇದು. ಇದ್ದುದರಲ್ಲಿ ಹರಿದ ಚಡ್ಡಿಗೆ ಚಿತ್ತಾರ ಬಿಡಿಸಿ, ಸಿಂಗಾರಗೊಳಿಸಿ, ಹರಳೆಣ್ಣೆ ಹಚ್ಚಿ ಕಾಡಿಗೆ ಮಗುವಿಗೆ ದೃಷ್ಟಿ ತಾಕಬಾರದೆಂದು ನೀವಳಿಸಿ ಮೂರು ದಾರಿ ಸೇರುವಲ್ಲಿ ಒಗೆದವಳು. ತಾಯಿ ಅವಳಿಗೆ ಅಂತಹ ಬಡತನದಲ್ಲಿ ಮಗುವಿನ ಮೇಲಿನ ಮಮತೆ ಅಗಾಧವಾದುದು.

---

[೩೧] ಕನ್ನಡ ಬಂಡಾಯ ಸಾಹಿತ್ಯ-ಸಂ.ಸರಜೂ ಕಾಟ್ಕರ್-ಪುಟ-೮೬(ಅವ್ವ-ಎಲ್. ಹನುಮಂತಯ್ಯ)
[೩೨] ಕನ್ನಡ ಬಂಡಾಯ ಸಾಹಿತ್ರ-ಸಂ.ಸರಜೂ ಕಾಟ್ಕರ್-ಪುಟ-೮೬

"ಮಾದಾರ ತಾಯಿ
ಎದೆಯ ಮೇಲೆ
ಸೂರ್ಯ ಚಂದ್ರರಾದರು
ಮಾದಾರ ತಾಯಿ ಸ್ವತ್ತು
ಅಳುಬರುಕಿ ನಕ್ಷತ್ರಗಳು
ತಾಯಿ ಮೂಗು ನತ್ತು
ಕಲ್ಲು ಮುಳ್ಳು ಕರೆಗೂ
ಹೊತ್ತು
ಭೂತ ಪ್ರೇತದ ನೃತ್ಯ
ಗುಡಿಲ ಸುತ್ತ
ಕಾಲ ಚಕ್ರದ ಕೆಳಗೆ
ಬಿದ್ದ ಮಾದಾರ ತಾಯಿ ಕಣ್ಣು
ದೇವರ ಪಾಲಿನ ಹಣ್ಣು
ನನ್ನದೆಯ ಹುಣ್ಣು."[೩೩]

ಹೊಸೂರು ಮುನಿಶಾಮಪ್ಪರ 'ಮಾದಾರ ತಾಯಿ' ಕವಿತೆಯಲ್ಲಿ ಮಾದರ ತಾಯಿ ಕರುಣಾಜನಕ ದುಸ್ಥಿತಿ ಇದೆ. ಸಾಮಾಜಿಕ ವಿಷಮತೆಯಲ್ಲಿ ಕೆಳಜಾತಿಗಳು ಚರಿತ್ರೆಯುದ್ದಕ್ಕೂ ನೋವುಗಳನ್ನು ಎದುರಿಸತ್ತಲೇ ಬಂದಿವೆ. ಮೇಲಿನವರ ದಾಸರಾಗಿ ನಿಷ್ಠೆಯಿಂದ ಪ್ರತಿಫಲ ನಿರೀಕ್ಷಿಸದೆ ನಿಸ್ವಾರ್ಥವಾಗಿ ದುಡಿದಿವೆ. ದಾಸ್ಯದಿಂದ ಎದುರಾಗುವ ಆತಂಕ, ನೋವು, ಅವಮಾನಗಳನ್ನು ಲೆಕ್ಕಿಸದೆ ಸಹಿಸಿಕೊಂಡು ಬಂದಿರುವುದಕ್ಕೆ ಒಂದೆಡೆ ದಲಿತರ ನಿಷ್ಠೆಯಿದ್ದರೆ ಇನ್ನೊಂದೆಡೆ ಅಜ್ಞಾನ ಮೌಢ್ಯತೆ ಪ್ರಮುಖ ಕಾರಣವಾಗಿವೆ. ಯಾವಾಗಲೂ ಮೇಲು ಮತ್ತು ಕೆಳವರ್ಗಗಳ ಮಧ್ಯೆ ಸಂಘರ್ಷಗಳು ಏರ್ಪಡುತ್ತಲೇ ಬಂದಿವೆ. ಬ್ರಾಹ್ಮಣಶಾಹಿ ವ್ಯವಸ್ಥೆ ಕೆಳಜನಾಂಗದ ಮೇಲೆ ತನ್ನ ಸ್ವಾರ್ಥಕ್ಕಾಗಿ ಮೌಢ್ಯತೆಯನ್ನು ಬೆಳೆಸಿ, ಅಂಧಶ್ರದ್ಧೆಯಲ್ಲಿ ಬದುಕುವಂತೆ ಮಾಡಿದೆ.

ಅದು ಎಂದಿಗೂ ತಮ್ಮ ಮುಂದೆ ತಲೆಯೆತ್ತಿ ತಿರುಗುವ ಹಕ್ಕು ಕಿತ್ತಿಕೊಂಡಿದೆ. ಇದರಿಂದ ದಲಿತ ಜನಾಂಗ ಸವರ್ಣೀಯರ ಸಮೀಪ ಕೂಡ ಸುಳಿಯುವ ಧೈರ್ಯ ಮಾಡಲಿಲ್ಲ. ಅವರು ಹೇಳಿದ್ದೇ ವೇದವಾಕ್ಯವೆಂದು ನಂಬಿ ಅಂಧಾನುಕರಣೆಯಲ್ಲಿ ಜೀವಿಸಿದರು. ಭಾರತೀಯ ಬಹುತೇಕ ಹಿಂದೂ ಸಂಸ್ಕೃತಿ ಜಾತಿಗಳನ್ನು ಶೋಷಿಸುತ್ತಲೇ ತನ್ನ ಧರ್ಮದ ಪಾವಿತ್ರ್ಯವನ್ನು ಕಾಪಾಡಿದೆ. ಜಮೀನ್ದಾರಿ ಪದ್ಧತಿಯೂ ಕೆಳಜನರ ಬದುಕಿನ ಮೇಲೆ ಭೀಕರ ಪರಿಣಾಮ ಬೀರಿದೆ. ಇದು ಮಾದಾರ ತಾಯಿಗೂ ಬಿಟ್ಟಿಲ್ಲ ದುಃಖ ನೋವುಗಳನ್ನು ನುಂಗುತ್ತ ಅವಮಾನಿತಳಾದಳು.

ಅರವಿಂದ ಮಾಲಗತ್ತಿಯವರು 'ಚಟ್ಟ ತೊಟ್ಟಿಲ ಭೂಮಿ'ಯಲ್ಲಿ ಕಾವ್ಯಮಾತೆಯನ್ನುದ್ದೇಶಿಸಿ.

---

[೩೩] ಹೊಸೂರು ಮುನಿಶಾಮಪ್ಪ-ದಲಿತ ಜನರ ಕಿರಣ-ವಾಹಿನಿ ಪ್ರಕಾಶನ ಬೆಂಗಳೂರು-೧೯೯೧

"ಕುಡುಗೋಲಿನ ಆ ಕೆಂಪು ಸೀರೆಯಲ್ಲಿ
ನಿನ್ನ ಮುಟ್ಟಿನ ರಕ್ತ ಯಾವುದು, ನಿನ್ನ ರಕ್ತ ಯಾವುದು
ನಿನ್ನ ಮಕ್ಕಳ ರಕ್ತ ಯಾವುದು
ಮಲ ಮಕ್ಕಳ ರಕ್ತ ಯಾವುದು ಹೇಳಬಲ್ಲೆಯೇನು ?
ತಾಯೇ, ಇದು ಕ್ಲಾಸ್ ವಾರ್ ಅಲ್ಲ : ಕ್ಯಾಸ್ಟ್‌ವಾರ್
ಕಡಲು ಬತ್ತಿದರೂ ಕಡಲ ನೆಲ ಬತ್ತದು."[೩೪]

ಹೆಣ್ಣಿಗೆ ಸಮಸ್ಯೆಯಾಗಿರುವುದೇ ಆ ಮುಟ್ಟು. ಅದೇ ಇರಲಿಲ್ಲವೆಂದರೇ ಹುಟ್ಟಿರುತ್ತಿರಲಿಲ್ಲ. ಹಾಗೂ ಹೆಣ್ಣಿಗೆ ಸಮಸ್ಯೆಯೇ ಇರುತ್ತಿರಲಿಲ್ಲ. ಅದಿಲ್ಲದ ಆದರೆ ಗಂಡಿಗೆ ಅದಾವ ಸಮಸ್ಯೆಗಳೂ ಇಲ್ಲ. ಇದು ಒಂದೆಡೆಯಾದರೆ ಜಾತಿಯತೆ, ಕೆಳವರ್ಗ ಮೇಲ್ವರ್ಗದ ವಿವಾದ ಇನ್ನೊಂದೆಡೆ ಅದಕ್ಕಾಗಿ ಕವಿ ಮಾಲಗತ್ತಿಯವರು ಎಲ್ಲರ ರಕ್ತವಿರುವುದೇ ಕೆಂಪು.ಆದರೆ ಮೇಲು ಕೀಳು ಭಾವನೆಗಳಿರುವುದು ಯಾಕೆ? ಮೇಲ್ವರ್ಗದವರ ರಕ್ತಕ್ಕೂ ಕೆಳವರ್ಗದವರ ರಕ್ತಕ್ಕೂ ವ್ಯತ್ಯಾಸ ಏನಾದರೂ ಇದೆಯೇ? ತೋರಿಸು ಎನ್ನುತ್ತಾ ಮಂದಿರ ಮೇಲಿನ ಧ್ವಜ, ಮಸೀದಿಯ ಮೇಲೆ ಹೇಗೆ ಬಂತು? ರಾಮ ರಹೀಮರ ರಕ್ತ ಯಾವುದು ಗುರುತಿಸಬಲ್ಲೆಯಾ ?ಎಂದು ಪ್ರಶ್ನಿಸುತ್ತಾರೆ.

ಧರ್ಮ ಮಂದಿರಗಳ ಮೇಲೆ ಇರುವ ಧ್ವಜಗಳನ್ನು ನೋಡಿ ಇವುಗಳು ಹೇಗೆ ಬಂದವು ಆ ಧರ್ಮದವರ ರಕ್ತ ಯಾವುದು. ಗುರುತಿಸ ಬಲ್ಲೆಯಾ? ಎಲ್ಲರಲ್ಲಿರುವುದು ತಾಯಿಯ ರಕ್ತ. ಜಾತಿ ಎನ್ನುವ ಕಡಲು ಬತ್ತಬಹುದು.ಆದರೆ  ನೆಲ ಮಾತ್ರ ಎಂದಿಗೂ ಬತ್ತುವುದಿಲ್ಲ. ತಾಯಿಯ ಮುಟ್ಟಿನಲ್ಲಿಯೇ ಹುಟ್ಟಿರುವಾಗ ಮುಟ್ಟಿ ತಟ್ಟಿ ಮಾಡುವರು ಎಂದು ಡಾ. ಟಿ.ಎಂ. ಭಾಸ್ಕರ್ ಮುಟ್ಟಿ-ಮುಟ್ಟಿ ಎಂಬ ಕವಿತೆಯಲ್ಲಿ ವಿಷಾದಿಸಿದ್ದಾರೆ.

"ಮುಟ್ಟಿ ಎಂಬ ಮಾತು
ಮುಟ್ಟಿನೊಂದಿಗೆ ಹುಟ್ಟಿ
ಹುಟ್ಟಿನಲ್ಲಿ ಬೆಳೆದು
ನಮ್ಮಂಥವರ ಮನ ಕೊರೆಯುತ್ತಿದೆ.
ಈ ಮುಟ್ಟಿ ಮುಟ್ಟಾಗಿದೆಯೆ ? ಇಲ್ಲ
ಹುಟ್ಟಿನೊಂದಿಗೆ ಹುಟ್ಟಿ ಗುಟ್ಟಾಗಿದೆಯೆ ?
ಮುಟ್ಟಿ ಎಂಬುವರೆಲ್ಲ ಕತ್ತಲಲ್ಲಿ ಕುಂತರು
ಮುಟ್ಟೆ ಮರೆತು ಬೆನ್ನು ತಟ್ಟು ಎಂದು
ಸಿಹಿ ಮುತ್ತನಿಟ್ಟರು ಕೊಟ್ಟರು
ನಮ್ಮಿಂದ ಏನೋ ಹೊತ್ತರು
ಮುಟ್ಟು ನಿಂತು ಗಟ್ಟಿಯಾದಾಗ
ಆಕಾಶದೆತ್ತರಕ್ಕೆ ಹಾರಾಡಿದರು.ಅಲ್ಲಿ
ಚಂದ್ರನ ಕಂಡು ಮಾತಾಡಿದರು."[೩೫]

---

[೩೪] ಮೂರನೆಯ ಕಣ್ಣು-ಅರವಿಂದ ಮಾಲಗತ್ತಿ-ಪುಟ-೩೪
[೩೫] ಮಾತಾಡುವ ಎಲುಬುಗಳು-ಡಾ.ಟಿ.ಎಂ.ಭಾಸ್ಕರ-ಪುಟ-೨೭

ಮನುಷ್ಯ ತಾಯಿಯ ಮುಟ್ಟಿನಲ್ಲಿ ಹುಟ್ಟಿ ಇನ್ನೊಬ್ಬ ಮನುಷ್ಯನನ್ನು ಸೋಯಿಸುತ್ತಿರುವನು. ಮುಟ್ಟು ನಿಂತು ಗಟ್ಟಿಯಾದಾಗ ಆಕಾಶದೆತ್ತರ ಹಾರುವರು. ಆ ಮುಟ್ಟೇ ಎಲ್ಲರ ಹುಟ್ಟಿಗೆ ಕಾರಣ. ಪುರೋಹಿತಶಾಹಿ ವ್ಯವಸ್ಥೆಯು ಈ ಮುಟ್ಟು ಮುಟ್ಟಿಸಿ ಕೊಳ್ಳುವುದಿಲ್ಲ. ಇವುಗಳನ್ನು ಅನುಸರಿಸುತ್ತಾ ಬಂದಿದೆ. ಪುರುಷನಿಂದ ಬಂದ ವೀರ್ಯ ಮುಟ್ಟಲ್ಲ, ಹೆಣ್ಣಿನಿಂದ ಬಂದುದ್ದು ಮಾತ್ರ ಮುಟ್ಟು. ಗಂಡು ಹೆಣ್ಣು ಸೇರಿದಾಗ ಅದು ಮುಟ್ಟಲ್ಲ ಹೆಣ್ಣಿನ ಮುಟ್ಟು ಮಾತ್ರ ಹೊಲಸು, ಪುರುಷನದಲ್ಲ ಎಂದಾದರೆ ಇನ್ನೊಂದೆಡೆಗೆ ಆ ಮುಟ್ಟಿನಿಂದಲೇ ಹುಟ್ಟಿದವರು ನಾವು ನೀವೆಲ್ಲ ಮೇಲು ಕೀಳೆಂಬ ಜಾತಿ ಭೇದ ಬೇಡ ಎನ್ನುತ್ತಾರೆ.

“ಅವ್ವಾ ನಾನು ಶಂಭೂಕ
ಮಸಣ ಕಾಯುವ ಹೊಲೆಯ
ಯಾರು ಬಂದರು ಇಲ್ಲಿಗೆ
ಯಾಕೆ ಬಂದಿರಿ ಇಲ್ಲಿಗೆ ?
ಹೊಲೆಯೋನಿಯಿಂದಲೇ ಜಗಕೆ ಮುಕ್ತಿ
ಮೊಲೆ ಹಾಲಿನಿಂದಲೇ ಜನಕೆ ಜೀವ ಶಕ್ತಿ
ಹೊಲೆಯು ಎಲ್ಲಿಹುದು ಎಂದೆಯಾ ?
ದುಃಖ ಹೊಲೆ ಸುಖ ಹೊಲೆ ನಾಕ ಹೊಲೆ
ನರಕ ಹೊಲೆ ಹೂವು ಹೊಲೆ,
ಮುಳ್ಳು ಹೊಲೆ
ಸಕಲ ಸೃಷ್ಟಿ ಜಾಲವೂ ಹೊಲೆ
ನಾನು ಹೊಲೆ ನೀನು ಹೊಲೆ ನಮ್ಮರಿವಿನ ಲೋಕ ಹೊಲೆ
ಹುಟ್ಟು ಹೊಲೆ ಸಾವು ಹೊಲೆ ಅರಮನೆ ಅಂತಃಪುರ
ಕೂಡ ಹೊಲೆ.”[೨೬]

“ಮುಳ್ಳೂರು ನಾಗರಾಜ ಅವರ ‘ನೆಲದ ಜೋಗುಳ’ ಜಾತಿಯತೆಯ ವಿವಾದದ ಬಗ್ಗೆ ಒಡಮೂಡಿ ಬಂದಿದೆ. ಹಿಂದೂ ಸಮಾಜದ ಆಧಾರ ರಚನಾತ್ಮಕವಾಗಿ ಜಾತಿ ಆಗಿದೆ. ಜಾತಿಯು ಬರೀ ಸಾಮಾಜಿಕ ವಿಭಜನೆ ತತ್ವವಷ್ಟೇ ಅಲ್ಲ. ಆದರೆ, ಸಮಷ್ಠಿ ಜೀವನದ ಅಂಗಗಳಾದ ಆಹಾರ, ಮದುವೆ, ಶಿಕ್ಷಣ, ಸಂಘಟನೆ, ಪೂಜಿಸುವಿಕೆ ಹಾಗೂ ಜಾತಿಯನ್ನು ವಂಶಾಧಾರಿತ ಸಗೋತ್ರ ಆಧಾರಿತವೆಂದರೂ ಸಾಮಾನ್ಯವಾಗಿ ಸ್ಥಳೀಯ ಗುಂಪು, ವಂಶಪಾರಂಪರ್ಯ ಸಂಘಟನೆ ವೃತ್ತಿಯೊಂದಿಗೆ ಹೊಂದಿರುವ ಮತ್ತು ನಿರ್ದಿಷ್ಟವಾಗಿ ಸ್ಥಳೀಯ ಶ್ರೇಣೀಕೃತ ವ್ಯವಸ್ಥೆಯಲ್ಲಿ ಸ್ಥಾನ ಹೊಂದಿರುವುದೇ ಜಾತಿಯ ಮಧ್ಯದ ಸಂಬಂಧಗಳು ಅವರನ್ನು ಆಳಿದರೂ ಪರಿಶುದ್ಧತೆ ಮತ್ತು ಮಲೀನತೆ, ಸಾಮಾನ್ಯವಾಗಿ ಜಾತಿಯೊಳಗೆ ಗೊತ್ತಿರುವ ತಿಳವಳಿಕೆಯ ಆಗಿದೆ.”[೨೭] ಹೀಗಾಗಿ ಆ ಜಾತಿಯತೆಯನ್ನು ಕವಿ ಹೊಲೆಯ ಯಾರು ಒಲುಮೆಗೆ ಹೊಲೆಯತನವಿಲ್ಲ ಎನ್ನುತ್ತಾರೆ.

---

[೨೬] ದಲಿತ ಕಾವ್ಯ-ಸಂ.ಕೆ.ಜಿ.ಸಿದ್ದಯ್ಯ.ಎಚ್.ಗೋವಿಂದಯ್ಯ.ನಟರಾಜಬೂದಾಳ್-ಪುಟ-೭೫(ನೆಲದ ಜೋಗುಳ. ಮುಳ್ಳೂರು ನಾಗರಾಜ)
[೨೭] ಕರ್ನಾಟಕ ದಲಿತ ಚಳುವಳಿ ಮತ್ತು ಡಾ॥ ಅಂಬೇಡ್ಕರ್ ಪ್ರಭಾವ-ಚಾಂಡಾಳ-ಪುಟ-೧

"ಎಳೆ ಬಾಳೆಯೆಲೆಯ ಬಣ್ಣ
ದೇಹ ಬಲು ಸಣ್ಣ
ಚುರುಕಾಗಿ ಹಗಲಿರುಳು ದುಡಿದು
ಬರಗಾಲಿನಿಂದಲೇ ನಡೆದು
ಬರಿಗೈಯಿಂದ ಇದ್ದು
ಗಾಣದೆತ್ತಿನಂತೆ ದುಡಿದವಳು
ತನ್ನ ತನವನ್ನೇ ನನ್ನಲಿ ತುಂಬಿ
ನನ್ನ ಹೊತ್ತು ಹೆತ್ತವಳು ನನ್ನವ್ವ"[೬೯]

'ಉಪ್ಪಿಗಿಂತ ರುಚಿ ಇಲ್ಲ ತಾಯಿಗಿಂತ ಬಂಧುವಿಲ್ಲ' ಎನ್ನುವ ಗಾದೆಯಂತೆ ಶೋಷಿತಳಾಗಿ, ವಂಚಿತಳಾದ್ದರೂ ಎಲ್ಲವನ್ನು ಮರೆತು ತನಗೆ ಎಷ್ಟೇ ಕಷ್ಟ ಕಾರ್ಪಣ್ಯಗಳಿದ್ದರೂ ಲೆಕ್ಕಿಸದೆ ತನ್ನ ಮಗುವಿನ ಸಂರಕ್ಷಣೆ ಹೇಗೆ ಮಾಡುತ್ತಾಳೆ ಎನ್ನುವದರ ಜೊತೆಗೆ ಇಲ್ಲಿ ಕೇವಲ ಶೋಷಣೆ, ವಂಚನೆ, ದಬ್ಬಾಳಿಕೆ ಇವುಗಳಿಗೆ ಹೆಚ್ಚು ಒತ್ತು ಕೊಟ್ಟ ದಲಿತ ಸಾಹಿತ್ಯ ಅವೆಲ್ಲ ಬಿಟ್ಟು 'ಅರ್ಜುನ ಗೊಳಸಂಗಿ' ಯವರಂತಹ ಕವಿ ತಾಯ್ತನ ಮಿಡಿತ, ಮಗುವಿಗೆ ಕೊಡುವ ಸಂಸ್ಕಾರದ ಬಗ್ಗೆ ಮಾತನಾಡುತ್ತಾರೆ. ಎದೆಯಲ್ಲಿ ಬೆಂಕಿ ಹತ್ತಿ ಉರಿಯುತ್ತಿದ್ದರು, ತಾಯಿಯ ಪ್ರೀತಿ, ವಾತ್ಸಲ್ಯ, ಮಮತೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿರುವ ಚಿತ್ರಣ ಇಲ್ಲಿದೆ. ದಲಿತ ಹೆಣ್ಣಿನ ಬಗ್ಗೆ ಬಂದಾಗ ಇಲ್ಲಿಯ ಹೆಣ್ಣುಮಕ್ಕಳು ಗಟ್ಟಿಗಿತ್ತಿಯರು. ಬದುಕನ್ನು ಎದುರಿಸುವ ಛಲದವರು ಅದರಲ್ಲಿಯೂ ವಯಸ್ಸಾದ, ಬದುಕಿನಲ್ಲಿ ಮಾಗಿದ ಹೆಣ್ಣುಮಕ್ಕಳು ಬದುಕುವ ಅತೀ ಸಮಸ್ಯೆಗಳನ್ನು ಎದುರಿಸುವ ಎದೆಗಾರಿಕೆ ಮೆಚ್ಚುವಂತಹದ್ದು. ಇದಕ್ಕೆ ಒಡಲಾಳದ ಸಾಕವ್ವ, ಗೌರ್ಮೆಂಟ್ ಬ್ರಾಹ್ಮಣದ, ಅಯಿ, ಹೊಲಗೇರಿಯ ರಾಜಕುಮಾರ ಸುಮಲೆ ಮೊದಲಾದವರನ್ನು ಉದಾಹರಿಸಬಹುದು.

ದುಡಿಯುವ ದಲಿತ ಹಿಂದುಳಿದ ಮಹಿಳೆಯರ ನಿರ್ಗತಿಕ ಬದುಕಿಗೆ ಅಂಬೇಡ್ಕರ್ ಚಿಂತನಧಾರೆಯ ದಲಿತ ಚಳುವಳಿ ಹೆಣ್ಣಿಗೆ ಯಾವಾಗಲೂ ಬೆಂಬಲವಾಗಿ ನಿಂತಿತ್ತು. ಆಕೆಗೆ ಒಂಟಿಯಲ್ಲವೆಂಬ ಭಾವನೆ ಬಿತ್ತಿ, ಧೈರ್ಯ ತುಂಬಿತ್ತು. 'ಲಚುಮಮ್ಮ'ನ ಹಾಡಿನ ಮೂಲಕ

"ನಿನ್ನಂಥ ತಂಗಿಯರು ನಿನ್ನಣ್ಣ ತಮ್ಮಂದಿರು
ದಲಿತ ಸಂಘವ ಸೇರಿ ಎತ್ತವರೆ ಕುಡುಗೋಲ
ಕುಡಗೋಲು ಮಸ್ಕೊಂಡು ಲಚುಮಮ್ಮೊ
ದಲಿತ ಸಂಘ ಸೇರೊ ಲಚುಮಮ್ಮೊ"
(ಕೆ. ರಾಮಯ್ಯ. ಅನು ದಲಿತ ಕಲಾಮಂಡಳಿ ಹಾಡುಗಳು)

---

[೬೯] ನಮ್ಮಜ್ಜಿ ಅವ್ವ ನನ್ನಾಕೆ–ಡಾ.ಅರ್ಜುನ ಗೊಳಸಂಗಿ–ಪುಟ–೩

ಎಂದು ತಬ್ಬಲಿ ಮಹಿಳೆಯರನ್ನು ಸಹೋದರಿಯರನ್ನಾಗಿ ಕಂಡ ಚಳುವಳಿ ಅಂಥ ಅನಾಥ ಹೆಂಗಸರ ಉಳ್ಳವರ ದೌರ್ಜನ್ಯದ ಸಾವಿಗೆ ಸಂತಾಪ ಸೂಚಿಸಿ, ಆಕೆಯ ಗುಣಗಾನ ಮಾಡಿದೆ. ಬಂಡಾಯ ಸಂದರ್ಭದಲ್ಲಿ ಎಚ್.ಎಲ್. ಪುಷ್ಪರವರ 'ಅಮೃತಮತಿಯ ಸ್ವಗತ'ದಲ್ಲಿ ಅಮೃತಮತಿಗೆ ಸಿರಿ, ಸಂಪತ್ತು, ಆಸ್ತಿ, ಪಾಸ್ತಿಗಳು ಮುಖ್ಯವೆನಿಸಲಿಲ್ಲ. ಬದಲಿಗೆ ಪ್ರೀತಿಯನ್ನು ಅದಕ್ಕಿಂತ ಸುಖವನ್ನು ಅರಸಿದವಳು. ಆ ಪ್ರೀತಿ, ಸುಖ ಆ ಅರಮನೆಯಲ್ಲಿ ಸಿಗದಿದ್ದಾಗ ಅವಳು ಮಾವುತನ ಪ್ರೀತಿ, ದೈಹಿಕ ಕಾಮನೆಗೆ ಮೊರೆಹೋಗುತ್ತಾಳೆ.

"ಗಾಳಿ ಬೆಳಕಿನಲಿ ಬೆಳೆದವಳು
ಮಳೆ ಬೆಳಕಿನಲಿ ಬೆಳೆದವಳು
ಮಣ್ಣಿನ ಕಣಕಣದ ಗುಣದವಳು
ಹಗಲುಗನಸಿನ ಕೂಸು ಹಡೆದವ್ವ
ಉಳ್ಳವರ ಹೊಲ ಗದ್ದೆಗಳಲ್ಲಿ ಗೇದು
ಇರುಳೆಲ್ಲ ಮೈನೋವಿಗೆ ನೊಂದು
ಉತ್ತಮರ ಕಣಜಗಳ ತುಂಬಿದವಳು
ಸೆರಗೊಡ್ಡಿ ಬೇಡಿ ಹೊಟ್ಟೆ ಹಿಡಿದವಳು."[೪೦]

ವಿ. ಮುನಿವೆಂಕಟಪ್ಪ 'ಶ್ರಮ ಜೀವಿ ನನ್ನವ್ವ ಮಣ್ಣಿನ ತಾಯಿ ನಾಡಿನ ಒಳ್ಳೆಯ ಗುಣವುಳ್ಳವಳು ನನ್ನ ಅವ್ವ ಶ್ರೀಮಂತರಲ್ಲಿ ದುಡಿಮೆ ತನ್ನ ಹೊಟ್ಟೆ ಪಾಡಿಗೆ ಮತ್ತೆ ಬಿಕ್ಷೆ ಬೇಡಿ ತಿಂದವಳು ನನ್ನವ್ವ' ಎಂದು ಹೇಳಿದ್ದಾರೆ. ಸತ್ಯಾನಂದ ಪಾತ್ರೋಟರು 'ನನ್ನಕ್ಕ' ಕವಿತೆಯಲ್ಲಿ

"ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ
ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯಾ
ಎಂದಳು ಆ ಅಕ್ಕ
ಆ ಅಕ್ಕನ ಹಾಗಲ್ಲ ನನ್ನಕ್ಕ
ಕೊಟ್ಟ ಮನೆಗೆ ಎದುರಾಡದೇ
ಹರಕೆಯ ಕುರಿಯಾಗಿ ಮೌನದಲ್ಲಿ ನಡೆದವಳು
ಸೂರ್ಯನೊಂದಿಗೆ ಎದ್ದು
ತಲೆ ಮೇಲೆ ಸುತ್ತಿಗೆ ಎಡಗೈಯಲ್ಲಿ ಬುತ್ತಿ
ಹೊತ್ತು.
ಗುಡ್ಡವನೇ ಹತ್ತಿ ಗುಡ್ಡಕ್ಕೂ ಬೆವರು ಬರಿಸಿದವಳು
ಕಣಿವೆ ಕಣಿಯ ಸುತ್ತಿ ಚೀಪುಗಲ್ಲನ್ನಾಯ್ದು
ಹರಳೊಡೆದು, ಸಣ್ಣಾಗಿ ಸುಣ್ಣವಾದಳು
ಗಂಡನ ಕುಡಿತಕ್ಕೆ ಅವರ ಬಡಿತಕ್ಕೆ
ಬಾಳೆ ಪಟ್ಟಿಯ ಬಿಚ್ಚಿ ದುಡ್ಡು ಕೊಟ್ಟವಳು – ದೀಪವಾದಳು."[೪೧]

---

[೪೦] ಕನ್ನಡ ಬಂಡಾಯ ಸಾಹಿತ್ಯ-ಸಂ.ಸರಜೂ ಕಾಟ್ಕರ-ಪುಟ-೧೨೨(ಹಗಲುಗನಸಿನ ಕೂಸು ಹಡೆದವ್ವ :ವಿ.ಮುನಿವೆಂಕಟಪ್ಪ)
[೪೧] ಆಧುನಿಕ ಕವಿತೆಗಳ ಸಂಗ್ರಹ-ಸಂ.ಡಾ.ಚಿತ್ಕಳಾ ಜೆ ಮಠಪತಿ-ಪುಟ-೭೫(ನನ್ನಕ್ಕ : ಸತ್ಯಾನಂದ ಪಾತ್ರೋಟರ)

ಇಲ್ಲಿ ಅಕ್ಕ ಮಹಾದೇವಿಯ ಜೊತೆಗೆ ತನ್ನಕ್ಕನನ್ನು ಸಮೀಕರಿಸುತ್ತಾರೆ. ಮಹಾದೇವಿ ಅಕ್ಕ ಎಲ್ಲವನ್ನು ತೊರೆದು ದಿಗಂಬರೆಯಾಗಿ ಹೊರಟಳು. ಆದರೆ ನನ್ನಕ್ಕ ಹಾಗಲ್ಲ ಜಡತನದ ಮನೆಗೆ ಎದುರಾಡದೆ ನಡೆದವಳು. ತಲೆ ಮೇಲೆ ಸುತ್ತಿಗೆ, ಕೈಯಲ್ಲಿ ಬುತ್ತಿ ಅವಳ ಸಂಪತ್ತು, ಬೆಳಗಿನ ಸೂರ್ಯನಂತೆ ಗುಡ್ಡ ಹತ್ತಿ ಕಲ್ಲು ಒಡೆಯುವ ಅವಳ ಶ್ರಮಕ್ಕೆ ಗುಡ್ಡಕ್ಕೇ ಬೆವರು ಬಂದಿತಂತೆ. ಶ್ರಮಿಕ ವರ್ಗದ ಮಹಿಳೆಯ ನೋವಿನ ಕತೆ ಇಲ್ಲಿಗೆ ಮುಗಿಯುವುದಿಲ್ಲ. ದಿನಪಿಡೀ ತಾನು ದುಡಿದು ತಂದ ದುಡಿಮೆಯ ಹಣವನ್ನು ಗಂಡನ ಕುಡಿತಕ್ಕೆ ಕೊಡುವಳು. ಮನೆಗೆ ದೀಪ ಅವಳೇ ಕಟ್ಟಿಕೊಂಡ ಗಂಡನ ಆರೈಕೆಯನ್ನು ಬೇಸರವಿಲ್ಲದೆ ಮಾಡುವಳು. ಎಂಬಲ್ಲಿ ಪತಿಸೇವೆಯ ಭಾವ ವ್ಯಕ್ತವಾಗಿದೆ. "ಪಾತ್ರೋಟರ 'ಅವ್ವ' ಹಾಗೂ 'ನನ್ನಕ್ಕ' ಪದ್ಯಗಳನ್ನು ಬಿಟ್ಟರೆ ಹೆಣ್ಣಿನ ಶ್ರಮದ ಮೇಲ್ಮೈ ಹೇಳುವ ಬೇರೆ ಪದ್ಯಗಳಿಲ್ಲ. ಅವರ ಕನಸಿನ ಹುಡುಗಿಯ ವ್ಯಕ್ತಿತ್ವದಲ್ಲೂ ಈ ಶ್ರಮದ ಆಯಾಮ ಸ್ಪಷ್ಟಗೊಂಡಿಲ್ಲ. ಕವಿ ತನ್ನ ಶ್ರಮದ ಬದುಕಿನ ಬಗ್ಗೆ ಹಾಗೂ ಅದರ ಕಷ್ಟ ಸುಖ ನೋವುಗಳಲ್ಲಿ ಅವಳೂ ಭಾಗಿಯಾಗಬೇಕು ಎನ್ನುವ ಸೂಕ್ಷ್ಮ ಎಚ್ಚರಿಕೆಯ ಮಾತುಗಳು ಸಂಕಲನದ ಉದ್ದಕ್ಕೂ ಕಂಡುಬರುತ್ತವೆ. ಇಲ್ಲಿನ ಪದ್ಯಗಳಲ್ಲಿ ಹೆಣ್ಣಿನ ವ್ಯಕ್ತಿತ್ವ ಅಷ್ಟಾಗಿ ಅನಾವರಣ ಗೊಂಡಿಲ್ಲ."[೭೨] ಇನ್ನೊಂದೆಡೆ ನಮ್ಮ ಸಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಡುವ ಕವಿತೆಗಳು ಇವೆ. ಇದಕ್ಕೆ ಡಾ. ಅರ್ಜುನ ಗೊಳಸಂಗಿ ಅವರ 'ನಮ್ಮಜ್ಜಿ ಅವ್ವ ನನ್ನಾಕೆ' ಕವಿತೆ ಸಾಕ್ಷಿಯಾಗಿದೆ.

"ನಮ್ಮಜ್ಜಿ ಮಾಡುತ್ತಿದ್ದ
ಪುಂಡಿ ಪಲ್ಲೇದ ರೊಟ್ಟಿ ಹುಳ್ಳಿ ಹುಳ್ಳಾನುಚ್ಚ
ನಮ್ಮವ್ವಗೆ ಬಾರವು
ನಮ್ಮವ್ವ ಮಾಡುತ್ತಿದ್ದ
ಬಿಳಿ ಜೋಳ-ಸಜ್ಜಿ-ಗೊಂಜಾಳ ರೊಟ್ಟಿ ದಪಾಟಿ
ಹೀರಿ-ಬದನಿ-ತೊಂಡಿಕಾಯಿ ಚಟ್ನಿ
ನನ್ನಾಕೆಗೆ ಬಾರವು
ಏನಿದ್ದರು
ಇವಳು ಬ್ರೆಡ್ಡು-ಬಿಸ್ಕೀಟು ಅನ್ನ ಸಾರಿನವಳು
ನಮ್ಮಜ್ಜಿ ತೊಟ್ಟ ಇಲಕಲ್ಲ ಸೀರಿ
ಗುಳೇದಗುಡ್ಡ ಕುಬಸ ಮಗಿದುರುಬ
ನಮ್ಮವ್ವನಲಿಲ್ಲ
ನಮ್ಮವ್ವ ಉಡುವ ಏಕರಂಗಿನ ದಡಿಸೀರಿ
ಬನಹಟ್ಟಿ ಕುಬಸ ಹಿಡಿದುರುಬ
ನನ್ನಾಕೆಯಲ್ಲಿಲ್ಲ
ಏನಿದ್ದರೂ
ಇವಳಿಗೆ ಚೂಡಿ-ಮಿಡಿ-ನಾಗರ ಜಡೆಯೇ ಅಚ್ಚುಮೆಚ್ಚು."[೭೩]

---

[೭೨] ಆಕಲನೆ-ಡಾ.ಹೇಮಾ ಪಟ್ಟಣ ಶೆಟ್ಟಿ-ಪುಟ-೫೨
[೭೩] ನಮ್ಮಜ್ಜಿ ಅವ್ವ ನನ್ನಾಕೆ-ಡಾ. ಅರ್ಜುನ ಗೊಳಸಂಗಿ-ಪುಟ-೧

ಪಾರಂಪರಿಕ ನಿಯಮ ಪದ್ಧತಿಗಳು ಅಡುಗೆ, ವೇಷ ಭೂಷಣ ಎಲ್ಲವೂ ಕಾಲ ಉರುಳಿದಂತೆ ಬದಲಾಗುತ್ತ ನಡೆಯುತ್ತವೆ. ಅಜ್ಜಿ, ತಾಯಿ, ಹೆಂಡತಿ ಹೀಗೆ ಹಂತ ಹಂತವಾಗಿ ಅಜ್ಜಿಯಿಂದ ತಾಯಿಗೆ, ತಾಯಿಯಿಂದ ಹೆಂಡತಿಗೆ, ಬದಲಾವಣೆಗಳಿರುತ್ತವೆ. ಅಜ್ಜಿ ಉಟ್ಟ ಸೀರೆಗೂ ತಾಯಿ ಸೀರೆಗೂ ಹೆಂಡತಿ ಉಡುವ ಬಟ್ಟೆಗೂ ವ್ಯತ್ಯಾಸಗಳಿರುತ್ತವೆ. ಆಧುನಿಕ ಯುಗದಲ್ಲಿಯೂ ಸಂಪೂರ್ಣವಾದ ಬದಲಾವಣೆಗಳಿವೆ ಎಂದು ಕವಿಯ ಹೇಳಿಕೆಯಾಗಿದೆ. ಹೀಗೆ ದಲಿತ ಕವಿಗಳು ಸಮಾಜದ ಅನೈತಿಕ, ಅನಾಚಾರದ ವಿಚಾರಗಳಿಗೆ ಮಾತ್ರ ಪ್ರತಿಕ್ರಿಯಿಸಿದೆ. ತಮ್ಮ ತಾಯಂದಿರು, ಹೆಂಡತಿ, ಅಕ್ಕ, ತಂಗಿಯರ ಕೆಲವು ನೋವುಗಳಾಗಲಿ ಅಥವಾ ಅವರ ಬಗೆ ತಮ್ಮಗಿರುವ ಅಭಿಮಾನವಾಗಲಿ ದಲಿತ ಜಾತಿಯಲ್ಲಿ ಹೆಣ್ಣು ಅನುಭವಿಸುವ ನೋವನ್ನಾಗಲಿ ಯಾವುದೇ ಸಮಸ್ಯೆಯನ್ನು ತಮ್ಮ ಕವನದಲ್ಲಿ ಹಿಡಿದಿದ್ದಾರೆ. ತಮ್ಮ ನೋವು ಸಂಕಷ್ಟ ಜೊತೆಗೆ ತಾಯಿಯನ್ನು ನೆನೆಯುತ್ತಾ ಅವಳ ಸುಗುಣಗಳನ್ನು ಮನಸಾರೆ ಬಣ್ಣಿಸಿದ್ದಾರೆ.

**೪.೩ ದಲಿತ ಕವಿತೆಗಳಲ್ಲಿ ಮಹಿಳಾ ಶೋಷಣೆ :**

ದಲಿತ ಬದುಕನ್ನು ಸಾಮಾಜಿಕವಾದ ಅಸಮಾನತೆ ಆರ್ಥಿಕ ಅಸಮಾನತೆಗಳು ಹೇಗೆ ನುಂಗಿ ನೀರು ಕುಡಿಯುತ್ತವೆ ಎಂಬುದನ್ನು 'ಜೋಗತಿ ಕಲ್ಲು' ಕವನ ನಿರೂಪಿಸುತ್ತದೆ. ಇಲ್ಲಿ ಮುಖ್ಯ ರೂಪಕವಾಗಿರುವ 'ಕಾಲ್ಮರಿ' ಇಡೀ ಸಮಾಜದ ಬರ್ಬರತೆಯನ್ನು ಪ್ರಕಟಿಸುವಂತದ್ದು. ಮೇಲ್ವರ್ಗದ ಜನ ಹೇಗೆ ಕೆಳವರ್ಗದವರ ಕೇರಿಗೆ ಬಂದು ಮಾಡಬಾರದ್ದನ್ನು ಮಾಡಿ ಬೆಳಕಾಗುವ ಹೊತ್ತಿಗೆ ಮಾಯವಾಗುವ ನಯವಂಚಕರನ್ನು ಇಲ್ಲಿ ಚಿತ್ರಿಸಲಾಗಿದೆ.

"ಬರ್ತಾವು ಬರ್ತಾವು
ನಾವು ಹೊಲ್ದ ಕಾಲ್ಮರಿ
ನಮ್ಮ ಕೇರ್‍ಯಾಕ ಬರ್ತಾವು
ಬೆಳ್ಳಿ ಚಿಕ್ಕಿ ಜೋಡಿ ಮಟಾ ಮಾಯಕ್ಕಾವು."[೪೪]

ಸವರ್ಣೀಯರು ಶ್ರೀಮಂತರೆನಿಸಿಕೊಂಡವರು ದಲಿತ ಮಹಿಳೆಯರನ್ನು ಅನುಭೋಗಿಸಿ ಮುಂಜಾನೆಯಾಗುವ ಮುಂಚೆ ತಮ್ಮ ಮನೆ ಸೇರಿಕೊಳ್ಳುವ ನೀಚ ವೇಷಗಾರರನ್ನು ಕವಿ ತರಾಟೆಗೆ ತೆಗೆದುಕೊಂಡಿದ್ದಾರೆ. ದಲಿತ ಮಹಿಳೆಯರ ಅಸಹಾಯತೆಯ ಲಾಭ ಪಡೆದು ಹಿಂಸಿಸುತ್ತಿರುವ ಜನರ ವರ್ತನೆಯನ್ನು ಕಂಡು ಕವಿಯ ಸಹನೆಯ ಕಟ್ಟೆ ಒಡೆದಿದೆ. 'ಕೆಂಡಾ ಕಾರೋ ನಿಮ್ಮ ಮೈತ್ಹೊಗಲ್ನ, ದನದ ತೊಗಲ ಸುಲಿದ್ಹಾಂಗ ಸುಲ್ದ, ನಿಮ್ಮಹಲಗ್ಯಾ, ದೋಳ್ಳಿಗ್ಯಾ, ದಮಡಿಗ್ಯಾ,

[೪೪] ಮೂಕನಿಗೆ ಬಾಯಿ ಬಂದಾಗ-ಲೇ. ಅರವಿಂದ ಮಾಲಗತ್ತಿ-ಪುಟ-೧೧

ಜಿಗದು ಕಾಸಿ-ಕಾಸಿ, ಆಡಿ, ಬಾರ್ಸಬೇಕು ಅನ್ಸತ್ತೈತೆ'. ನೋವನ್ನು ಅನುಭವಿಸಿದ ಮನಸ್ಸಿನಿಂದ ಇಂಥ ಖಾರವಾದ ಮಾತುಗಳು ಹೊರ ಬರುವುದು ಸಾಮಾನ್ಯ ಮತ್ತು ಶೋಷಣೆಯ ಕಾಲಚಕ್ರದ ಬದುಕು ನೂಕುತ್ತಾ ಬಂದಿರುವ ಶೋಷಿತರಿಗೆ ಆತಂಕ, ಸಿಟ್ಟು, ದುಃಖ-ದುಮ್ಮಾನಗಳ ನೇರ ಪ್ರಕಟಣೆ ಸೂಕ್ತವಾದದ್ದು ಕೂಡ. ಏಕೆಂದರೆ ತಮ್ಮ ಮನದ ತುಮುಲಗಳನ್ನು ನೋಡಿಕೊಳ್ಳಲು ಮುಕ್ತವಾದ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ.

"ಸಮಾಜದ ವೈಪರೀತ್ಯಗಳನ್ನು ಕಂಡ ಕವಿಗೆ ತನ್ನವರನ್ನು ಜೀವಂತವಾಗಿ ದಹಿಸುತ್ತಿರುವ ಜಾತಿಯ ಭೂತವನ್ನು ಮಣ್ಣು ಮುಕ್ಕಿಸುವ ಛಲ-ರೊಚ್ಚು ಒಂದೆಡೆಗಿದ್ದರೆ. ಅದೇ ಕ್ಷಣದಲ್ಲಿ ಕಲ್ಲ ಬಂಡೆಯಂತಿರುವ ಪಟ್ಟಭದ್ರ ಹಿತಾಸಕ್ತಿಯ ದಪ್ಪ ತೊಗಲಿನ ಸಮಾಜಕ್ಕೆ ತನ್ನ ಆರ್ತ ಕೂಗು ಮುಟ್ಟದ್ದಕ್ಕೆ ನಾಯಿಯಂತೆ ಪುನಃ ಬಾಲ ಬಡಿಯುವ ಕವಿಯ ವೈಯಕ್ತಿಕ ದುರಂತವೇ ಇಂದಿನ ಸಮಾಜ ಸಂಸ್ಕೃತಿಯ ದುರಂತವೂ ಆಗುತ್ತದೆ."[೬೫] ಒಟ್ಟಿನಲ್ಲಿ ಅರವಿಂದ ಮಾಲಗತ್ತಿ ದಲಿತ ಅನುಭವದ ಪ್ರಾಮಾಣಿಕ ಪ್ರತಿಭೆ. ಅವರ ಕಾವ್ಯ ನಿಜಕ್ಕೂ ನೋವಿನಲ್ಲಿ ಎದ್ದಿ ತೆಗೆದಂತಹ ಕಾವ್ಯ. 'ಮೂಕನಿಗೆ ಬಾಯಿ ಬಂದಾಗ' ದಲಿತರ ದಾರುಣ ಬದುಕನ್ನು ಬಿಂಬಿಸಿದರೆ, 'ಕಪ್ಪು ಕಾವ್ಯ', 'ಮೂರನೆ ಕಣ್ಣು' ಜನಪರ ಕಾಳಜಿಯನ್ನು ಎತ್ತಿ ಹಿಡಿದಿರುವಂತಹ ಕೃತಿಗಳಾಗಿವೆ. ದಲಿತ ಕವಿ ಡಾ. ಸಿದ್ಧಲಿಂಗಯ್ಯನವರು ಹೆಣ್ಣಿನ ಶೋಷಣೆಗೊಳನ್ನು ತುಂಬಾ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

"ಅನ್ನವಿಲ್ಲದ ಹೆಣ್ಗೆ ಕುಂಕುಮವು ಕಡುಕೇಡು
ಹಣೆಯಲ್ಲಿ ಬೆವರ ಹನಿ ಮಿನುಗುತಿತ್ತು
ಉಟ್ಟ ಸೀರೆಯ ಸೆರಗು ಎತ್ತೆತ್ತಲೋ ಏರಿ
ಬಡತನದ ಬಾವುಟವು ಹಾರುತ್ತಿತ್ತು."[೬೬]

ಇಲ್ಲಿ ಹಣೆಯಲ್ಲಿನ ಬೆವರ ಹನಿ ಆಕೆಯ ದುಡಿಯುವಿಕೆಯನ್ನೂ ಉಟ್ಟಸೀರೆಯ ಸೆರಗು ಎತ್ತೆತ್ತಲೋ ಹಾರುವದು. ಬಡತನವನ್ನು ಬಾವುಟ ಎತ್ತಿ ತೋರಿಸುವ ಸಂಕೇತವೂ ಆಗಿ, ಒಟ್ಟು ಹೆಣ್ಣು ಶ್ರಮ ಜೀವಿಯಾಗಿ ದೇಶದ ಬಡತನದಷ್ಟೇ ಸಮನಾಗಿ ಶೋಷಣೆಗೊಳಗಾಗಿರುವುದನ್ನು ಚಿತ್ರಿಸುತ್ತದೆ.

ಅಂಬೇಡ್ಕರವಾದಿ ಚಿಂತಕರಲ್ಲಿ ಅತಿ ಪ್ರಮುಖರೆನಿಸಿಕೊಂಡವರು ಮ.ನ. ಜವರಯ್ಯನವರು. ಕನ್ನಡ ಸಾಹಿತ್ಯದಲ್ಲಿ ಅಂಬೇಡ್ಕರ್‌ರ ಕುರಿತು ಬಂದಂತಹ ಸಾಹಿತ್ಯದಲ್ಲಿ

---

[೬೫] ಮೂಕನಿಗೆ ಬಾಯಿ ಬಂದಾಗ-ಅರವಿಂದ ಮಾಲಗತ್ತಿ-ಪುಟ-೮

[೬೬] ಮೆರವಣಿಗೆ-ಡಾ.ಸಿದ್ಧಲಿಂಗಯ್ಯ-ಪುಟ-೭೬

ಮ.ನ. ಜವರಯ್ಯನವರ ಪಾಲು ಹೆಚ್ಚು. ಹೀಗಾಗಿ ಅಂಬೇಡ್ಕರ್‌ರ ಚಿಂತನೆ ಕುರಿತು ಅಧಿಕೃತವಾಗಿ ಮಾತನಾಡಬಲ್ಲ ವ್ಯಕ್ತಿ ಮ. ನ. ಜವರಯ್ಯನವರು ಎಂದರೆ ಅತಿಶಯೋಕ್ತಿಯಾಗಲಾರದು. ದಲಿತರ ಬಾಳಿನ ಬೆಳಕಾದ ಅಂಬೇಡ್ಕರರ ವೈಚಾರಿಕ ಚಿಂತನೆಯನ್ನು ತಮ್ಮ ಕಾವ್ಯದ ಮೂಲಕ ಪ್ರಕಟಿಸುವುದರೊಂದಿಗೆ ದಮನಿತ ಸಮುದಾಯದಲ್ಲಿ ಹೋರಾಟದ ಕೆಚ್ಚು ಮೂಡಿಸಿದ್ದಾರೆ. 'ಕೀಳು ಜಗ ಮಾದಿಗ ಹೊಲೆಯ', 'ಅತ್ತೆ ಸೊಸೆ ಆತ್ಮಕಥೆ'ಯಂತಹ ಸಂಕಲನಗಳು ಬಂಡಾಯ ಮನಸ್ಸಿನೊಂದಿಗೆ ದಲಿತ ಕಾಳಜಿಯನ್ನು ಅಭಿವ್ಯಕ್ತಿಸುವಂತಹವು. 'ಕೀಳು ಜಗಮಾದಿಗ ಹೊಲೆಯ' ಹೆಸರು ಹೇಳುವಂತೆ ತಿರಸ್ಕೃತ ಸಮುದಾಯದ ಕೊರಗನ್ನು ಬಿಂಬಿಸುತ್ತದೆ.

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಮೇಲು ಕೀಳು ಸಂಸ್ಕೃತಿಗಳು ಪರಸ್ಪರ ಮುಖಾಮುಖಿಯಾಗುತ್ತಲೇ ಬಂದಿವೆ. ಉಚ್ಚ ಸಂಸ್ಕೃತಿಯ ಅಂಗವೇ ಆಗಿರುವ ಕೀಳ್ ಸಂಸ್ಕೃತಿಗಳೆರಡು ವಿಭಿನ್ನ ನೆಲೆಯಲ್ಲಿ ವೈರುಧ್ಯದ ವಿಷಮತೆಯನ್ನು ಬೆಳೆಸಿಕೊಂಡಿವೆ. ಒಂದು ರೀತಿಯಲ್ಲಿ ಸಂಘರ್ಷವಿರುವುದೇ ಈ ಎರಡರ ಮಧ್ಯೆ. ನಮ್ಮ ಪರಿಸರದಲ್ಲಿ ಸೌಹಾರ್ದತೆಯ ಬೆಳವಣಿಗೆಯನ್ನು ಕಾಣಬೇಕಾದರೆ ಈ ಎರಡು ಸಂಸ್ಕೃತಿಗಳ ಮಧ್ಯೆ ಆತ್ಮೀಯ ಬಾಂಧವ್ಯ ಮೂಡಬೇಕು. ಇದನ್ನೇ ಮ. ನ. ಜ. ಅವರು ಕೌಟುಂಬಿಕ ಹಿನ್ನೆಲೆಯಲ್ಲಿ 'ಅತ್ತೆ ಸೊಸೆ' ಆತ್ಮ ಕಥೆಯ ಮೂಲಕ ಅರ್ಥೈಯಿಸಿದ್ದಾರೆ. ಮನೆಯ ಯಜಮಾನಿಕೆಯನ್ನು ನಡೆಸಿದ ಅತ್ತೆಯ ಅಧಿಕಾರವನ್ನು ಮುಂದೊಂದು ದಿನ ಅದನ್ನು ಕಿತ್ತುಕೊಳ್ಳುವ ಅಧಿಕಾರ ಸೊಸೆಗೆ ಬರುತ್ತದೆ. ಇದು ಇತಿಹಾಸದುದ್ದಕ್ಕೂ ಕಂಡು ಬಂದಿರುವ ಚಾರಿತ್ರಿಕ ಸತ್ಯ. ಈ ಹಿನ್ನೆಲೆಯಲ್ಲಿ ಕಾಲ-ಕಾಲಾದಿಗಳಿಂದಲೂ ಯಜಮಾನಿಕೆಯನ್ನು ನಡೆಸುತ್ತಾ ಬಂದ ಮೇಲ್ವರ್ಗದವರ ಆಳ್ವಿಕೆಯನ್ನು ಪ್ರಶ್ನಿಸುವ, ಕಿತ್ತುಕೊಳ್ಳುವ ಬಲಪಡೆದಿದ್ದ ದಲಿತರಿಗೆ ಅತ್ತೆ ಸೊಸೆ ಆತ್ಮಕಥೆಯಂತಹ ಕವನಗಳೇ ಪ್ರೇರಕ ಮತ್ತು ಸ್ಫೂರ್ತಿ. ಈ ಮಾರ್ಗದಲ್ಲಿಯೇ ಪ್ರೇರೇಪಿಸಿರುವ ಅಸಂಖ್ಯ ಕವನಗಳು ದಲಿತ ದನಿಯ ಶಸಕ್ತ ಕಿಡಿಗಳಾಗಿವೆ.

"ಹಳೆಪುಟಗಳು ತೆರೆದು ಕೊಂಡಿವೆ
ಹೊಸ ಭಾಷೆಗೆ ಕಾತರಗೊಂಡಿವೆ
ತಡಕ ಬೇಕು
ಶತಮಾನಗಳ ಸಂದಿಗೊಂದಿಗಳನೆಲ್ಲಾ
ಬೆದಕ ಬೇಕು
ತಲೆತಲಾಂತರಗಳ ಖಣಿಯನೆಲ್ಲಾ."[೮೭]

[೮೭] ವಿದ್ರೋಹ-ಮ.ನ. ಜವರಯ್ಯ-ಪುಟ-೯೦

ಸಾಮಾಜಿಕ ಪರಿವರ್ತನೆಯನ್ನು ಇತಿಹಾಸದಲ್ಲಿ ಹುಡುಕುವ ಪ್ರಯತ್ನ ಇಲ್ಲಿದೆ. ದಲಿತರ ಶೋಷಣೆ ಚರಿತ್ರೆ ಪುರಾಣಗಳಲ್ಲಿ ಹುದುಗಿರುವುದು ಸ್ಪಷ್ಟವಾದ ವಿಚಾರ. ಇಂದು ಹಳೆಯ ಸಂಪ್ರದಾಯದ ಅವಶ್ಯಕತೆಯಿಲ್ಲ. ಅದು ಮೌಢ್ಯತೆಯನ್ನು ಬಿಟ್ಟು ಬೇರೇನು ಬೋಧಿಸುವುದಿಲ್ಲ. ಅದರಿಂದ ಕೆಳಸಮುದಾಯ ಉಳಿದು, ಬೆಳೆಯಬೇಕಾದರೆ ವೈಜ್ಞಾನಿಕವಾಗಿ ಹೊಸತನ ತರುವುದು ತುಂಬ ಅನಿವಾರ್ಯವಾಗಿದೆ. ಮ. ನ. ಜವರಯ್ಯನವರಂತಹ ಲೇಖಕರು ಪ್ರಮುಖವಾಗಿ ಬಯಸಿದ್ದು ತಮ್ಮವರ ಉಳಿವಿಗಾಗಿ ಪರಿತಪಿಸುತ್ತಿರುವ ತಮ್ಮ ಜನಾಂಗವನ್ನು ಶೋಷಕ ವ್ಯವಸ್ಥೆಯಿಂದ ಪಾರು ಮಾಡುವುದಾಗಿದೆ.

ಕ್ಲಿಷ್ಟಕರ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ಮತ್ತು ದಲಿತರು ಕೆಳಸ್ತರಕ್ಕೆ ತಳ್ಳಲ್ಪಟ್ಟವರು. ಭಾರತೀಯ ಧಾರ್ಮಿಕತೆಯಲ್ಲಿ ಯಜಮಾನಿಕೆ ಸ್ಥಾಪಿಸಿಕೊಂಡ ಹಿಂದೂ ಧರ್ಮ; ಮೂಲತಃ ಶೋಷಕ ಪ್ರವೃತ್ತಿಯನ್ನೇ ಬೆಳಸಿಕೊಂಡು ಬಂದಿರುವುದು ಇಂದಿಗೂ ಕಂಡು ಬರುವ ಸತ್ಯ. ಲೋಕವನ್ನು ಸುಧಾರಿಸಬೇಕಾಗಿರುವ ಮಠ ಮಾನ್ಯಗಳು ಅವೈಚಾರಿಕವಾಗಿ ವರ್ತಿಸುತ್ತವೆ. ಹಲವು ಮಠಾಧಿಪತಿಗಳು ಮನುವಾದಿಗಳೇ ಆಗಿರುವುದು ಅವರ ತಾರತಮ್ಯ ನೀತಿಗೆ ಹಿಡಿದ ಕನ್ನಡಿ. ಹೀಗೆ ಸಾಮಾಜಿಕ ಪರಿಸರದಲ್ಲಿ ಸಮತೋಲನ ಕಾಪಾಡಿಕೊಳ್ಳಲಾಗದ ವ್ಯವಸ್ಥೆ ನಿಜಕ್ಕೂ ಭ್ರಷ್ಟವಾಗಿದೆ. ಇದನ್ನು ಖಂಡಿಸುವ, ವಿರೋಧಿಸುವ ಮನಸ್ಸು ಚಾಂಡಾಲರ ಕವಿತೆಗಳು ಪ್ರಕಟಿಸುತ್ತವೆ.

“ಬೀದಿ ಕೊನೆಯಲ್ಲಿ ಕೆರೆ
ನೀರ ಮುಟ್ಟ ಬ್ಯಾಡೆಂದರು
ನಿಂತು ನೋಡಿದೆ
ನೀರೆ ಮುಟ್ಟಾಗಿರಬೇಕೆಂದು.”[೮೮]

ಪುರೋಹಿತಶಾಹಿ ವರ್ಗಗಳಲ್ಲಿ ಮಹಿಳೆಯರನ್ನು ತಿಂಗಳಿಗೆ ಆಗುವ ಮುಟ್ಟು. ಅದರಿಂದ ಅವಳನ್ನು ಹೊರಗಿಡುವುದು ಇವೆಲ್ಲವು ಕಂಡುಕೊಂಡ ಕವಿ ವ್ಯಂಗ್ಯ ಕಟಕಿಯೊಂದಿಗೆ ನಿರೂಪಿಸಲ್ಪಟ್ಟ ‘ಮುಟ್ಟಾಗಿರ ಬೇಕೆಂದು’ ಕವಿತೆ ಸನಾತನ ಧರ್ಮ ಹೇರಿದ ಅಮೌಲಿಕ ವಿಚಾರಗಳನ್ನು ಪ್ರತಿಭಟಿಸುತ್ತದೆ. ತಮ್ಮ ಅನುಕೂಲಕ್ಕೆ ತಕ್ಕಂತೆ ಧರ್ಮವನ್ನು ರೂಪಿಸಿಕೊಂಡ ವೈದಿಕ ವರ್ಗ ಕೆಳಜಾತಿಯವರನ್ನು ಪ್ರಾಣಿಗಿಂತಲೂ ಹೇಯವಾಗಿ ನಡೆಸಿಕೊಂಡಿದ್ದಾರೆ. ಇದೇ ರೀತಿಯ ಅನೇಕ ಅರ್ಥವಿಲ್ಲದ ಕಟ್ಟು ನಿಟ್ಟುಗಳನ್ನು ಪಾಲಿಸುತ್ತ ಬಂದ ವ್ಯವಸ್ಥೆ ಕೆಳಗಿನವರ

---

[೮೮] ಜೀವ ನೆಲೆ-ಗಂಗಾರಾಂ ಚಂಡಾಲ-ಪುಟ-೩೬

ಪಾಲಿಗೆ. ಹೀಗೆ ಚಾಂಡಾಲರ ಕವಿತೆಗಳು ಸಾಮಾಜಿಕ ಶೋಷಣೆಗೆ ಒಳಗಾದವರ ವಾಸ್ತವದ ದಾರುಣತೆಯನ್ನು ದಾಖಲಿಸುವಲ್ಲಿ ನಿರ್ಣಾಯಕ ಪಾತ್ರವಹಿಸಿವೆ.

"ಹಳ್ಳಿ ಆಳುವ ವರ್ಗವಾದ ಗೌಡ, ಕುಲಕರ್ಣಿ ಸಾಹುಕಾರರು ಸುಖಿಸುತ್ತಾ ಬಂದದ್ದು ಮೇಲವರ್ಗದ ಸುಖಕ್ಕಾಗಿ. ಕೆಳಸ್ತರ ಕಣ್ಣೀರು ಕೂಳು ತಿನ್ನುತ್ತ, ಅವರ ಬೇಡಿಕೆಗಳಿಗೆ ಅವರ ರಣ ಹದ್ದುಗಳಿಗೆ ಹಸಿ ಮಾಂಸವಾಗಿ ಸಿಕ್ಕು ಸತ್ತು ಸತ್ತು ಅತ್ತು ಅತ್ತು ಗೋಳಾಡುವ ಚಿತ್ರ 'ಮಾದರ ಸಾಬವ್ವನ ಗೋರಿ ಗೀತೆ'ಯಲ್ಲಿ ಬಂದಿದೆ. ಉಳಿದವರಂತೆ ಹೆಣ್ಣಾಗಬೇಕೆಂದಿದ್ದ ಸಾಬವ್ವ ಹೆಣ್ಣಾಗದೆ ಹೋಗಿ, ಸೂಳೆಯಾಗಿ ನರಳುವ ಅವಳ ಮುಗ್ಧ ಜೀವನ ಪ್ರೀತಿ ಕರುಳು ಕರಗಿಸುವಂಥದ್ದು. ವಿನಾಕಾರಣ ನಾನಾ ಕಷ್ಟಗಳಿಗೆ ಈಡಾಗಿ ಅವಳು ಬಲಿಯಾಗುವ ಚಿತ್ರ ಕರುಳಿಗೆ ಉರಿ ಹಚ್ಚು ವಂಥದ್ದುಆಗಿದೆ."[೪೯]

"ಬಾರ ಗಂಗಿ ಬಾರ ಹಣಮಿ ಬಾರ್ಯೆ ಎಲ್ಲಿ
ಇವತ್ತ ನಮಗ್ಯೆತಿ ನಿಮಗ್ಯೆತಿ ಕುಸ್ತೆಂತ
ಬಳಿ ಉಟಗೊಂಡ ಛೀಲ್ಯಾ ಗಂಡಸರು
ನಮ್ಮ ಅಕ್ಕ-ತಂಗೇರಗಿ,
ಹೆಂಡ್ರು-ಮಕ್ಕಳಿಗಿ ತಾಯಿದೇರಗಿ ಕರಿತಿದ್ರಿ
ಇವತ್ತ
ನಾವು ಅಂಡಗಚ್ಚಿ ಹಾಕಿ ನಿಂತಿವಿ, ಕಳ್ಸತೀರ್ಯಾ?
ನಿಮ್ಮೆಂಡ್ರು-ಮಕ್ಕಳಿಗೆ ; ಅಕ್ಕ-ತಂಗೇರಗಿ
ನೀವು ಬರ್ರಿ
ನಾವು ಆಡತ್ತೀವಿ ಓಕಳಿ."[೫೦]

ಎಂದು ಡಾ.ಅರವಿಂದ ಮಾಲಗತ್ತಿಯವರು ಈ ಕವಿತೆಯಲ್ಲಿ ತನ್ನ ಶೋಷಿತ ಸಮುದಾಯದ ಒಡಲಾಳದ ದನಿಯಾಗಿ, ಶತಶತಮಾನದಿಂದ 'ಓಕಳಿ'ಯ ಹಿನ್ನೆಲೆಯಲ್ಲಿ ಅಕ್ಕ,ತಂಗಿ,ಮಕಳು,ತಾಯಂದಿರನ್ನು ಶೋಷಿಸಿದಿರಿ ಈಗ ಅದಕ್ಕೆ ಪ್ರತಿಯಾಗಿ ನಾವು ಬಂದಿದ್ದೇವೆ.ನಾವು ನಿಮ್ಮ ಹೆಂಡ್ರು, ಮಕಳಿಗೆ ಕಳುಹಿಸುವಿರಾ ಎಂದು ಕೇಳುತ್ತಾರೆ.

---

೪೯. ಬಂಡೆದ್ದ ದಲಿತರ ಬೀದಿ ಹಾಡುಗಳು-ಚೆನ್ನಣ್ಣ ವಾಲೀಕಾರ-ಪುಟ-

೫೦ ಕಾವ್ಯ ಕುಂಕುಮೆ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೨೭(ಓಕಳಿ : ಅರವಿಂದ ಮಾಲಗತ್ತಿ)

ದಲಿತರು ಮೇಲು ಜಾತಿಯ ಹೆಣ್ಣನ್ನು ನೋಡುವ ಹಾಗಿಲ್ಲ. ಆದರೆ ಮೇಲ್ಜಾತಿಯವರು ಕೆಳ ಜಾತಿಯ ಹೆಣ್ಣನ್ನು ಭೋಗಿಸುವಂತಹ ಅಧಿಕಾರವನ್ನು ಪಡೆದಿದ್ದರು. ಇನ್ನೊಂದು ಕಡೆಗೆ ಡಾ.ಸಿದ್ಧಲಿಂಗಯ್ಯನವರು.

"ಅವರ ತೋಟದ ತೆಂಗಿನಲ್ಲಿ
ನಮ್ಮ ರಕ್ತದ ಎಳೆನೀರು
ಅವರ ಅಮಲಿನ ಗುಂಗಿನಲ್ಲಿ
ಕೂಲಿ ಹೆಣ್ಣಿನ ಕಣ್ಣೀರು."[೫೧]

ಸಿದ್ಧಲಿಂಗಯ್ಯನವರು ಹೋರಾಟಗಾರರಾಗಿ, ಕವಿಯಾಗಿ, ರಾಜಕಾರಣಿಯಾಗಿ ವಿವಿಧ ನೆಲೆಗಳಲ್ಲಿ ತೊಡಗಿಸಿ ಕೊಂಡಿದ್ದವರು ದಲಿತ ವರ್ಗದವರ ಗೋಳು, ತೊಳಲಾಟ, ಶ್ರಮ, ಅವರ ಮೇಲಾಗುವ ಶೋಷಣೆ, ದಲಿತ ಕೂಲಿ ಹೆಣ್ಣು ಮಕ್ಕಳನ್ನು ಬಳಸಿಕೊಳ್ಳುವ ಪರಿ, ಅಲ್ಲದೆ ಅವರನ್ನು ವಿವಿಧ ಧಾರ್ಮಿಕ ಆಚರಣೆಗಳ ಸಂದರ್ಭಗಳಲ್ಲಿ ಬಲಿಪಶುಗಳಾಗಿಸುವುದು ಇವೆಲ್ಲವುಗಳು ದಲಿತ ಹೆಣ್ಣು ಮಕ್ಕಳಿಗೆ ಮೀಸಲಾಗಿರಿಸಿದರು.

"ಕಾನೂನು ತಜ್ಞರ ಅಭಿಪ್ರಾಯದಂತೆ ಧಾರ್ಮಿಕ ನಂಬಿಕೆಯ ದುರ್ಬಳಕೆಯ ಮೂಲಕ ಕೆಳವರ್ಗದ ಸ್ತ್ರೀಯರನ್ನು ತನ್ನ ಲೈಂಗಿಕ ಚಟುವಟಿಕೆಗಳಿಗೆ ಬಳಸಿಕೊಳ್ಳಲು ಮೇಲ್ವರ್ಗದವರು ಹೇಳಿಕೊಂಡಿರುವ, ಮಾಡಿಕೊಂಡಿರುವ ವ್ಯವಸ್ಥೆಯಿದು."[೫೨] "ಬಸವಿಯರು ಹಾಗೂ ಜೋಗತಿಯರು ಮೊದಲಿಗೆ ಊರ ಗೌಡರು, ಕುಲಕರ್ಣಿ ಹೀಗೆ ಶ್ರೀಮಂತರ ಜತೆ ಲೈಂಗಿಕ ಸಂಪರ್ಕ ಬೆಳೆಸಿದರೆ. ನಂತರ ವ್ಯವಹಾರಿಕವಾಗಿ ವೇಶ್ಯಾವಾಟಿಕೆಗೆ ಇಳಿಯುತ್ತಾರೆ. ಕೆಲವರು ಮುಂಬೈಯಂತಹ ಊರುಗಳ ವೇಶ್ಯಾವಾಟಿಕೆಗೆ ಸೇರಿ ಹಲವು ರೋಗಗಳನ್ನು ಅಂಟಿಸಿಕೊಂಡು ಕೊನೆಗಾಲದಲ್ಲಿ ಗತಿಯಿಲ್ಲದೆ ಬೀದಿ ಪಾಲಾಗಿ ಬಿಕ್ಷೆ ಬೇಡುತ್ತಾರೆ. ಇಂಥ ವೇಶ್ಯಾವಾಟಿಕೆ ಜಾಲಗಳು ಅಮಾನವೀಯ ಆಚರಣೆಗಳನ್ನು, ಮೂಢನಂಬಿಕೆಗಳನ್ನು ಪ್ರಚೋದಿಸುವ ಮೂಲಕ ಈ ಅನಿಷ್ಟ ಸಂಪ್ರದಾಯಕ್ಕೆ ಪ್ರೋತ್ಸಾಹಿಸುತ್ತವೆ."[೫೩] ಎಲ್ಲಾ ಹಂತದಲ್ಲೂ ಬಲಿಪಶುವಾಗುವವಳು ದಲಿತ ಮಹಿಳೆ ಎಂಬುದನ್ನು ಪ್ರತಿನಿಧಿಸುತ್ತದೆ.

---

[೫೧] ಮೆರವಣಿಗೆ-ಡಾ.ಸಿದ್ಧಲಿಂಗಯ್ಯ-ಪುಟ-೪೭

[೫೨] ದಲಿತರ ಬದುಕು ಮೆಲುಕು-ಡಾ.ಎನ್.ಚಿನ್ನಸ್ವಾಮಿ ಸೊಸಲೆ-ಪುಟ-೧೪೦

[೫೩] ದಲಿತರ ಬದುಕು ಮೆಲುಕು-ಡಾ.ಎನ್.ಚಿನ್ನಸ್ವಾಮಿ ಸೊಸಲೆ-ಪುಟ-೧೪೦

ದಲಿತ ಹೆಣ್ಣು ಯಾವಾಗಲೂ ಕೆಳವರ್ಗದವರಲ್ಲಿ ಕೆಳಗಾದವಳು. ಗಂಡನೇ ಕೆಳವರ್ಗದಲ್ಲಿದ್ದರು ಆ ಗಂಡನ ಮಾತು ಕೇಳಿ ತಂದೆ, ತಾಯಿಯ ಮಾತು ಕೇಳಿ ಅವರಿಗಿಂತ ಕೆಳಗಿನವಳಾಗುವ ಸ್ಥಿತಿಯನ್ನು ಕವಿ 'ಕಂಡಿರೆ ನೀವು ಕಂಡಿರೆ?' ಎಂಬ ಕವನದಲ್ಲಿ ಹೇಳಬಯಸುತ್ತಾರೆ.

"ನನ್ನಕ್ಕ
ಬಾಜಾರ ಬಸವಿಯಂತೆ
ಕೈ ಬೀಸಿ ಕರಿವಳಂತೆ
ಎಲ್ಲ ದೋಚಿ ಕಳುವಳಂತೆ
ಕಂಡಿರೇ ನೀವು ಕಂಡಿರೆ ?
ಕಂಡರೆನಗೆ ಹೇಳಿರಿ
ದೇವ ಕೈಯ ಖಡ್ಗವಂತೆ
ಅದರೊಂದಿಗವಳ ಮದುವೆಯಂತೆ
ದೇವನೆಂಡತಿ ಈಕೆಯಂತೆ
ದೇವ ಈಕೆ ಗಂಡನಂತೆ........ ಕಂಡಿರೇ ನೀವು....
ದಿನದಿ ಹತ್ತು ತಾಳಿ ಕಟ್ಟುವಳಂತೆ
ಹನ್ನೊಂದು ತಾಳಿ ಹರಿವಳಂತೆ
ನಿತ್ಯ ಸುಮಂಗಲಿ ಈಕೆಯಂತೆ
ದೇವತೆಯಲಿ ದೇವತೆಯಂತೆ... ಕಂಡಿರೇ ನೀವು...[೫೪]

ದೇವರು, ಧರ್ಮದ ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ದೇವದಾಸಿಯರನ್ನಾಗಿ ಮಾಡಿ ಅವರ ಬದುಕನ್ನು ಕತ್ತಲಿಗೆ ದೂಡಿದ್ದು, ಈ ಪುರುಷ ಸಮಾಜ ವ್ಯವಸ್ಥೆ ಎಂಬ ಆಕ್ರೋಶದ ಪ್ರತಿಭಟನೆಯನ್ನು ಲೇಖಕರು ಈ ಕವಿತೆಯ ಮುಖಾಂತರ ಎಚ್ಚರಿಸಿದ್ದಾರೆ.

ಬಿ.ಟಿ ಲಲಿತಾನಾಯಕ್‌ರವರು ಹೆಣ್ಣಿನ ಮೇಲೆ ಆಗುತ್ತಿರುವ ದೌರ್ಜನ್ಯವನ್ನು ತಿಳಿಸುತ್ತಲೇ ಅದರಿಂದ ಮುಕ್ತಗೊಳ್ಳಬೇಕು. ಅದಕ್ಕೆ ಮೊದಲು ನೀವು ಈ ಗೊಡ್ಡು ಸಂಪ್ರದಾಯವನ್ನು ಬಿಟ್ಟು ಅಕ್ಷರವಂತರಾಗಬೇಕು ಜ್ಞಾನವನ್ನು ತಿಳಿದರೆ ಸಮಾನತೆಯ ಬದುಕು ನಿಮ್ಮದಾಗುತ್ತದೆ. ಈ ಮೂಲಕ ನಿಮ್ಮಂತಹ ಇತರರಿಗೂ ಅರಿವು ಮೂಡಿಸಬಹುದು. ಸ್ವಲ್ಪ ಮಟ್ಟದಾಗರೂ ಈ ಅಸಮಾನತೆ ದೂರವಾಗಬಹುದು ಎಂದು ತಿಳಿಸುತ್ತಾರೆ.

"ತನ್ನ ಸ್ವಾರ್ಥಕ್ಕಾಗಿ ರೂಪಿಸಿಕೊಂಡ ಒಳ ಸಂಚಿನ ಈ ವ್ಯವಸ್ಥೆ ಲೈಂಗಿಕ ರಾಜಕಾರಣಕ್ಕೆ ಸಂಪ್ರದಾಯಗಳ ಧಾರ್ಮಿಕತೆಯ ಲೇಪನವನ್ನು ಹಚ್ಚಿದೆ. ಅನಕ್ಷರಸ್ಥ, ಮುಗ್ಧ ಮನಸ್ಸುಗಳನ್ನು

---

[೫೪] ಕಾವ್ಯ ಕುಂಕುಮ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೪೫ (ಕಂಡಿರೇ ನೀವು ಕಂಡಿರೇ? : ಅರವಿಂದ ಮಾಲಗತ್ತಿ)

ಭೌತಿಕ ಅನುಕೂಲಗಳ ಆಮಿಷಗಳಲ್ಲಿ ಬಂಧಿಸಿ ಹೆಣ್ಣಿನ ಮೇಲೆ ತನ್ನ ಕ್ರೌರ್ಯವನ್ನು ಎಸಗುತ್ತಲೇ ಬಂದಿದೆ. ಇಂಥ ಹುನ್ನಾರಗಳನ್ನು ಮಾಲಗತ್ತಿಯವರ ಸಾಹಿತ್ಯ ಬಯಲಿಗೆಳೆಯುತ್ತದೆ. ಅಮಾನವೀಯ ವರ್ತನೆಗಳ ಪ್ರಾಬಲ್ಯವನ್ನು ಪ್ರಶ್ನಿಸುತ್ತಲೇ ಖಂಡಿಸುತ್ತದೆ. ಈ ಮೂಲಕ ಮಹಿಳೆ ತನ್ನ ಮುಗ್ಧತೆಯನ್ನು ಕಳಚಿ ದಿಟ್ಟೆಯಾಗಬೇಕಾದದ್ದನ್ನು ಬಯಸುತ್ತದೆ. ಮೌಢ್ಯ ಸಂಪ್ರದಾಯಗಳ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯವನ್ನು ಹೇಳುವಂತಹದ್ದು."[೨೬೫] ಮಹಿಳೆಯು ಪ್ರತಿಯೊಂದು ಹಂತದಲ್ಲಿ ಅನುಭವಿಸುತ್ತಿರುವ ನೋವು ಶೋಷಣೆಗಳು ಹೇಳ ತೀರಲಾರದಂತಹವುಗಳು. ಅನುಭವಿಸುವ ನೋವು ಹೆಜ್ಜೆ ಹೆಜ್ಜೆಗೂ ಅವಳ ಬದುಕನ್ನು ಸಂಪೂರ್ಣ ಶೋಷಣೆಗೆ ಒಳಪಡಿಸುವಂತಹದು.

## ೪.೪ ದಲಿತ ಕವಿತೆಗಳಲ್ಲಿ ಮಹಿಳಾ ಕವಯತ್ರಿಯರ ಅಭಿವ್ಯಕ್ತಿ :

"ಜಾಗತಿಕ ವ್ಯಾಪ್ತಿಯ ಸ್ತ್ರೀವಾದಿ ಚಳುವಳಿಗಳ ಮೂಲಕವಾಗಿ ಕಳೆದ ಕೆಲವು ದಶಕಗಳಲ್ಲಿ ಮಹಿಳೆ ತನ್ನನ್ನು ಹಾಗೂ ತನ್ನ ಪರಿಸರವನ್ನು ಹೊಸ ಕಣ್ಣುಗಳಿಂದ ನೋಡತೊಡಗಿದುದರ ಪರಿಣಾಮವಾಗಿ ಅವಳ ಅರಿವಿನ ಲೋಕದಲ್ಲಿ ಕ್ರಾಂತಿಕಾರಕ ಸ್ಥಿತ್ಯಂತರಗಳು ಘಟಿಸಿವೆ. ಪುರುಷ ಪ್ರಧಾನ ಸಂಸ್ಕೃತಿಯ ಪ್ರಭಾವದಲ್ಲಿ ಕಳೆದು ಹೋದ ತನ್ನ ಅಸ್ಮಿತೆಯನ್ನು ಪ್ರಸ್ಥಾಪಿಸಿ ಬದುಕನ್ನು ಸಾರ್ಥಕ ಗೊಳಿಸಬೇಕು ಎನ್ನುವ ಹೊಸ ಹಂಬಲ ಅವಳಲ್ಲಿ ಹುಟ್ಟಿಸಿಕೊಂಡಿದೆ."[೨೬೬] ಈ ಹಂಬಲದಿಂದಲೇ ಮಹಿಳೆಯ ಕುರಿತಾದ ಪಾರಂಪರಿಕ ತಿಳುವಳಿಕೆಯನ್ನು ಪ್ರಶ್ನಿಸುವ ಧೋರಣೆ ಮಹಿಳಾ ಸಂವೇದನೆ ಹೊಂದಿದೆ.

"ಈಗಲೂ ಇಲ್ಲಿ ಅದೇ ಕಥೆ
ನಡೆದಿದೆ ಸೀತೆ
ಬದಲೇನಾದರೂ ಆಗಿದ್ದರೆ
'ಸೀ ಬದಲು 'ಗೀ ಎಂಬುದಷ್ಟೇ."[೨೬೭]

ಮಹಿಳೆಗಿರುವ ನೋವು, ಸಂಕಟಗಳ ಅನಾದಿ ಪರಂಪರೆಯನ್ನು ಸಂಕೇತಿಸುವ ಬಿ.ಟಿ ಲಲಿತನಾಯಕರ 'ಇದೇ ಕೂಗು ಮತ್ತೆ ಮತ್ತೆ' ಕವಿತೆ ಶೋಷಣೆಗೆ ಕೊನೆಯೇ ಇರದ ಸಂಕೀರ್ಣ ಬದುಕಿನ ವ್ಯಾಖ್ಯಾನವಿದೆ. ಇಂದಿನ ವ್ಯವಸ್ಥೆಯ ಬೇರುಗಳು ನಮ್ಮ ಸಂಸ್ಕೃತಿ, ಧರ್ಮ, ಸಂಪ್ರದಾಯ, ಇತಿಹಾಸ, ಪುರಾಣಗಳಲ್ಲಿರುವುದು ಸ್ಪಷ್ಟ. ಈ ವ್ಯವಸ್ಥೆಯಿಂದಲೇ

[೨೬೫] ಕಾವ್ಯ ಕುಂಕುಮ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೧೦
[೨೬೬] ಅಮೃತ ವಾಹಿನಿ - ಪ್ರೊ.ಜಿ.ಎಸ್.ಆಮೂರ-ಪುಟ-೩೨
[೨೬೭] ಬಿದಿರು ಮಳೆ ಕಂಟಿಯಲಿ-ಬಿ.ಟಿ.ಲಲಿತಾನಾಯಕ-ಪುಟ-೧೦೨

ಉಸಿರಾಡುತ್ತಿರುವ ನಮ್ಮ ಪುರುಷ ಸಮಾಜದ ಮೌಲ್ಯಗಳು ಸ್ತ್ರೀ ವ್ಯಕ್ತಿತ್ವವನ್ನು ಮನೆಗೆ ಸೀಮಿತಗೊಳಿಸಿವೆ. ಈ ಸೀಮಿತ ಮನೆಯ ಆವರಣವನ್ನು ಮೀರಿ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಛಲ ಬಹುತೇಕ ಸ್ತ್ರೀವಾದಿ ಲೇಖಕಿಯರದು. ಈ ಹಿನ್ನೆಲೆಯಲ್ಲಿಯೇ ದಾಖಲಾದ 'ಭಾರತೀಯಳು' ಸುಕನ್ಯಾ ಮಾರುತಿಯವರ ಗಟ್ಟಿ ಅನುಭವದ ಪ್ರತೀಕ.

"ಕ್ಷಮಿಸು
ನಾ ಭಾರತೀಯ ನಾರಿ
ಅನಿಸಿದ್ದನ್ನೆಲ್ಲಾ ಹತ್ತಿಕ್ಕುತ್ತೇನೆ."[೫೮]

ಪುರುಷ ಪ್ರಭುತ್ವ ಸೃಷ್ಟಿಸಿದ ಆದರ್ಶಕ್ಕೂ ಮತ್ತು ಭಾರತೀಯ ಸ್ತ್ರೀ ಸಮುದಾಯ ತೋರುವ ಪ್ರತಿಕ್ರಿಯೆಗೂ ಇರುವ ವಿರೋಧವನ್ನು ಮೇಲಿನ ಕವಿತೆ ಸೂಚ್ಯವಾಗಿಯೇ ಹೇಳಿದೆ. ಇಲ್ಲಿ ಕವಿತೆಯ ಮತ್ತೊಂದು ಪ್ರಮುಖ ಗುಣವೆಂದರೆ, ಕವಯತ್ರಿಯ ಅಸಾಹಾಯಕ ಮನಸ್ಥಿತಿಯಲ್ಲಿಯೇ ಪ್ರತಿಭಟನೆಯ ಸ್ವಾತಂತ್ರ್ಯದ ದನಿ ಇರುವುದು.

ವಾಸ್ತವ ಜೀವನದ ಅರ್ಥವನ್ನು ಸ್ಫುರಿಸುವ ಸುಕನ್ಯಾ ಅವರ ಕವನಗಳು ಹೆಣ್ಣಿನ ಭಾವನೆಗಳ ಸುತ್ತ ಹೆಣೆದಂತವು. ವೈಯಕ್ತಿಕ ಬದುಕಿನಿಂದ ಸಾಮಾಜಿಕ ಬದುಕಿನೆಡೆಗೆ ಸಾಗುವ ಅವರ ಕ್ರಿಯೆ ಸಮಷ್ಠಿ ನೋವನ್ನು ಕನ್ನಡಿಕರಿಸುವಂತದ್ದು. ಪರಂಪರೆಯಿಂದಾದ ಮನಸ್ಸಿನ ಗಾಯವನ್ನು ಮಾಗಿಸುವ ಶಕ್ತಿ ಅವರ ಕಾವ್ಯದಲ್ಲಿದೆ. ಮುಂದುವರಿದು ಇನ್ನೊಬ್ಬ ಕವಯತ್ರಿ

"ಏನು ಗೌಡರೇ ।
ಹೇಳಿ ಕಳಿಸಿದಿರಿ ?
ನಿಮ್ಮ ಹಣಮಪ್ಪ ಓಕಳಿಗೆ
ನಮ್ಮ ಮೈನೆರೆದ ಹುಡುಗಿಯರೇ ಬೇಕಂತೆ !
ನಿಮ್ಮ ಮಗಳು ಸಾವಿತ್ರಿ ಮೈನೆರೆದಿರುವಳಲ್ಲ
ನಿಮ್ಮ ಸೊಸೆ ಪಾರ್ವತಿ ಮೊನ್ನೆಯೇ ಬಂದಿರುವವಳಲ್ಲ ?
ಕಪ್ಪು ಮೈಯ ನಮಗಿಂತ
ಕೆಂಪು ಮೈಯ ನಿಮ್ಮ ಹೆಣ್ಣುಗಳೇ ಚಂದ !
ಲಂಗದ ಮೇಲೆ ಬಿಡು ಹೊರಗೊಮ್ಮೆ
ಬಿರಿದ ಕಮಲಗಳಿಗೆ
ಸೂರ್ಯ ಚಂದ್ರರ ಮುಖದರ್ಶನವಾಗಲಿ."[೫೯]

(ಮುಳ್ಳು ಕಂಟಿಯ ನಡುವೆ-ಸಂಕಲನದಿಂದ)

---

[೫೮] ನಾನು ನನ್ನವರು-ಸುಕನ್ಯಾ ಮಾರುತಿ-ಪುಟ-೩೬

[೫೯] ಕನ್ನಡ ಬಂಡಾಯ ಸಾಹಿತ್ಯ-ಸಂ.ಸರಜೂ ಕಾಟ್ಕರ್-ಪುಟ-೧೭೭(ಗುಡಿಯಲ್ಲಿನ ಕಲ್ಲಿನಲ್ಲಿ ದೇವರಿಲ್ಲ : ಅನುಸೂಯಾ ಕಾಂಬಳೆ)

"ಹುಡುಗಿ ಋತುಮತಿಯಾದೊಡನೆ ಅಕ್ಕಪಕ್ಕದ ಹಳ್ಳಿಯ ಶ್ರೀಮಂತನೊಬ್ಬ ೮೦೦ ರೂಗಳನ್ನು ಕೊಟ್ಟು, ಊಟಕ್ಕೆ ಹಾಕಿಸುವ ಮೂಲಕ ಆಕೆಯನ್ನು ಖರೀದಿಸುತ್ತಾನೆ. ಅನಂತರ ತನಗಿಷ್ಟ ಬಂದಾಗ ಬಂದು ಹೋಗುತ್ತಾನೆ. ಹೀಗೆ ಹಗಲನ್ನು ಕಾಣದ ಇವರ ಬದುಕು ಆರಂಭವಾಗುತ್ತದೆ. ಬುದ್ಧಿ ಬಲಿಯುವ ಮೊದಲೇ ಬದುಕಿನ ಬಲಿಯಾಗಿರುತ್ತದೆ. ಆ ಊರವರಿಗೆ ಅದೊಂದು ವಿಶೇಷವಲ್ಲ. ಸಮಸ್ಯೆ ಎಂದು ಭಾವಿಸಿಯೇ ಇಲ್ಲ ಶಿವರಾತ್ರಿ ಮತ್ತು ಶ್ರಾವಣ ದಸರಾಗಳಿಗೆ ಇಲ್ಲಿ ಉತ್ಸವ ನಡೆಯುತ್ತದೆ."[೬೦]

"ಮಠದ ಪೂಜಾರಿಯೇ ದೇವದಾಸಿಯಾಗುವವಳಿಗೆ ತಾಳಿ ಕಟ್ಟುತ್ತಾನೆ ೫೦೦೦ ರೂ ಸೀರೆ ಕುಪ್ಪಸ ಹಾಸಿಗೆ ಹೊದಿಗೆ ಕೊಟ್ಟು ಮೊದಲು ಅನುಭವಿಸುವವನು ಕೂಡಿಕೆ ಮಾಡಿಕೊಳ್ಳುತ್ತಾನೆ."[೬೧] ಈ ಎಲ್ಲಾ ಪದ್ಧತಿ, ಸಂಪ್ರದಾಯಗಳು ಮೌಢ್ಯವಾಗಿವೆ. ಆದ್ದರಿಂದ 'ಗುಡಿಯಲ್ಲಿನ ಕಲ್ಲಿನಲ್ಲಿ ದೇವರಿಲ್ಲ' ಕವನದ ಮೂಲಕ ಶೋಷಿತರು ಸಾಹುಕಾರ, ಜಮೀನುದಾರ, ಪುರೋಹಿತ ವಿರುದ್ಧ ಆಕ್ರೋಶವನ್ನು ಪ್ರತಿಬಿಂಬಿಸುತ್ತ, ಅವರ ಹೆಣ್ಣನ್ನು ಕಳುಹಿಸಿ ಕೊಡವಂತೆ ಹೇಳುವ ಧೈರ್ಯವನ್ನು ಶೋಷಿತ ವರ್ಗದವರಿಗೆ ತುಂಬುತ್ತಾರೆ.

"ಓ ಹೆಣ್ಣೆ
ನಿನ ಜನ್ಮವೊಂದು
ಎಳ ಚಿಗುರೆಲೆಯ ತುದಿ
ಚಿಗುರ ತುದಿಗೆ
ಯುಗದ ಲೆಕ್ಕಾಚಾರ ದಕ್ಕಿತೇ ?
ಎಂದು ನಕ್ಕುವರಾರು
ಒಡೆಯ ಜಡೆ ಮಾದಿಯೆ
ಒಡತಿ ಜಡೆ ಮಾದನೆ
ಅವಳೆ ?
ಅವನೆ ?
ಅವಳವನಲ್ಲಿದ ಮರವೆ ?"[೬೨]

ಯಾರು ನಕ್ಕರೂ ಸರಿ ಅಂಥ ಲೆಕ್ಕಾಚಾರ ಸಾಧ್ಯವೆನ್ನುವ ಆತ್ಮವಿಶ್ವಾಸ ಕವಿಗೆ ಇದೆ. ಇಂಪು, ತಂಪು, ಕಂಪು, ಕಾಪಿಡುವ ಕಾವುಗಳ ಸಂಗಡವೇ ಕಾರಿರುಳು ಉಂಟು. ರಣಾಂಗಣ

---
೬೦ ಮಹಿಳಾ ಬದುಕು ಹೈದ್ರಾಬಾದ ಕರ್ನಾಟಕ ಕಥನ ಸಾಹಿತ್ಯದಲ್ಲಿ -ಡಾ.ಜಿದರಿ ಚಂದ್ರಕಲಾ-ಪುಟ-೨೫. ೨೬
೬೧ ಮಹಿಳಾ ಬದುಕು ಹೈದ್ರಾಬಾದ ಕರ್ನಾಟಕ ಕಥನ ಸಾಹಿತ್ಯದಲ್ಲಿ -ಡಾ.ಜಿದರಿ.ಚಂದ್ರಕಲಾ-ಪುಟ-೧೦
೬೨ ಜೀವ ಸಂಪಿಗೆ-ದು. ಸರಸ್ವತಿ-ಪುಟ-೧೦

ಉಂಟು, ಮಸೆದ ಮಚ್ಚುಗಳುಂಟು. ಆದರೆ ಈ ಅರಿವು 'ನಾ ಕಾದಾಡಲಾರೆ' ಎಂಬ ಉದ್ಗಾರಕ್ಕೆ ಕಾರಣವಾದರೂ ಸಂಪೂರ್ಣ ಹತಾಶೆಗೆ ಎಡೆ ಮಾಡಿಕೊಡುವುದಿಲ್ಲ.

ಸುಕನ್ಯಾ ಮಾರುತಿಯವರು ಮಹಿಳಾ ಬದುಕಿನ ಶೋಧನೆಗೆ ತಕ್ಕುದಾದ ಪರಿಸರವನ್ನು ಹುಡುಕುತ್ತ ಬರೆಯುತ್ತಿರುವ ಲೇಖಕಿ. ಮಹಿಳೆಯ ಮೇಲೆ ಎಸಗುತ್ತಿರುವ ಅತ್ಯಾಚಾರ, ಮಾನಸಿಕ ಹಿಂಸೆಗಳನ್ನು ಹಗುರವಾಗಿ ತೆಗೆದುಕೊಂಡಿರುವ ಸಮಾಜ ಆಕೆಯ ದುಃಖಿತ ಬದುಕಿಗೆ ಕನಿಕರ ತೋರುವ ಮನಸ್ಸು ಕೂಡ ಹೊಂದಿಲ್ಲ. ಅದಕ್ಕಾಗಿಯೇ ಬಂಡೇಳುವಿಕೆ ಅನಿವಾರ್ಯವೆಂದು ಸುಕನ್ಯಾ ವ್ಯವಸ್ಥೆಗೆ ಎದುರುಗೊಂಡು ಚಲಾವಣೆಯಲ್ಲಿರುವ ಸಾಂಪ್ರದಾಯಿಕ ರೂಢಿಗಳಿಗೆ ಮುಖಾಮುಖಿಯಾಗಿದ್ದಾರೆ. ಪುರಾಣ ಪ್ರಜ್ಞೆಯನ್ನು ಜಾಗೃತಗೊಳಿಸಿದ ಅವರು ಸ್ತ್ರೀ ಅನುಭವಿಸಿದ ಯಾತನೆಯ ದಟ್ಟ ಚಿತ್ರಣವನ್ನು ವಾಸ್ತವ ಪ್ರಪಂಚದೊಂದಿಗೆ ಹಂಚಿ ಕೊಳ್ಳುವ ಯತ್ನ ಮಾಡಿದ್ದಾರೆ. 'ಅಹಲ್ಯೆ' ಈ ಹಿನ್ನೆಲೆಯಿಂದಲೇ ಹುಟ್ಟಿರುವಂತಹ ಕವನ.

"ನನಗೋ ಬರೀ ಮಾನವಳಾಗುವ ಬಯಕೆ
ನನಗೆ ಗೊತ್ತು
ಗೌತಮನ ಸರ್ಪ ಮತ್ತೆ
ಹೆಡೆಯೆತ್ತಲಾರದು
ನನ್ನೊಳಗೆ ಏನನ್ನೂ ಬಿತ್ತಲಾರದು
ರಾಮಸ್ಪರ್ಶಕ್ಕೆ ಶಿಲೆ
ಸ್ಫೋಟವಾಗಿದೆ ಅಷ್ಟೇ
ಹೆಣ್ಣಾಗಲಿಲ್ಲ."[೬೩]

ಮತ್ತೊಂದು ಸ್ತ್ರೀ ಬದುಕಿನ ದುರಂತವನ್ನು ತೆರೆದಿರುವ 'ಅಹಲ್ಯೆ' ಪುರಾಣ ಹಿನ್ನೆಲೆಯ ಗಮನಾರ್ಹ ಕವನ. ಇಂದ್ರನ ಮೋಸಕ್ಕೆ ಬಲಿಯಾಗಿರುವ ಅಹಲ್ಯೆ ತನ್ನ ಗಂಡನ ಶಾಪಕ್ಕೆ ತುತ್ತಾಗಿ ಶಿಲೆಯಾಗಿದ್ದಾಳೆ. ಇಲ್ಲಿ ಮೂಲತಃ ಅಪರಾಧೀ ಸ್ಥಾನದಲ್ಲಿ ನಿಲ್ಲಬೇಕಾದವನು ಇಂದ್ರ. ಆದರೆ ಶಿಕ್ಷೆ ಅನುಭವಿಸಬೇಕಾಗಿ ಬಂದದ್ದು ಅಹಲ್ಯೆಗೆ. ಇದು ಮಹಿಳೆಯ ದುರ್ಬಲತೆಯನ್ನು ಪುರುಷ ವರ್ಗ ಬಳಸಿಕೊಂಡ ರೀತಿ ಎರಡು ಪುರುಷ ವ್ಯಕ್ತಿಗಳ ಮಧ್ಯೆ ನಲುಗಿರುವ ಅಹಲ್ಯೆ ಹೆಣ್ಣಿನ ಮೇಲೆ ಎಸಗುವ ಅನ್ಯಾಯಕ್ಕೆ, ಮೋಸಕ್ಕೆ ಸಾಚಾ ನಿದರ್ಶನವಾಗಿದ್ದಾಳೆ. ಸೀತೆ, ದ್ರೌಪದಿಗಿಂತ ಭಿನ್ನವಾಗಿ ನಿಲ್ಲುವ ಅಹಲ್ಯೆ ಬದುಕಿನ ಕ್ರೌರ್ಯಗಳಿಂದ ತಲ್ಲಣಿಸಿದವಳು ಕೊನೆಗೆ ಶಾಪಮುಕ್ತಳಾದರೂ ಹೆಣ್ಣಾಗದ ಸ್ಥಿತಿಯನ್ನು 'ರಾಮ ಸ್ಪರ್ಶಕ್ಕೆ ಶಿಲೆ ಸ್ಫೋಟವಾಗಿದೆ ಅಷ್ಟೇ, ಹೆಣ್ಣಾಗಲಿಲ್ಲವೆಂದಿ ಪರಿಣಾಮಕಾರಿಯಾದ ಅಭಿವ್ಯಕ್ತಿಯಾಗಿದೆ.

---

[೬೩] ನಾನು ನನ್ನವರು-ಸುಕನ್ಯಾ ಮಾರುತಿ-ಪುಟ-೧

"ಒಮ್ಮೆ
ಒಂದು ಬಾರಿ
ನಗ್ನಳಾಗಬೇಕು
ಮೈ ಒಡ್ಡಿ ತಂಗಾಳಿಗೆ
ಎದೆಯ ಕದವ ತೆರೆದು
ಅಡಗಿ ಕುಳಿತ
ಪಿಸು ಮಾತುಗಳ
ಅರುಚ ಬೇಕು
ಇಗೋ
ನಾ ನಿನ್ನ ಮುಂದೆ
ತೆರೆದು ನಿಂತಿರುವೆ
ಒಳಿತು ಹೊಸಲು
ತೆಗೆದಿಟ್ಟಿರುವೆ."[೬೪]

ಸಹಜವಾಗಿ ಈ ಮಾತು ಇತರರಿಗೆ ಕೇಳಿಸುವಂತಾಗಲು 'ಅರಚುಬೇಕು' ಎಂಬುದು ತನ್ನ ಅಭಿವ್ಯಕ್ತಿಗೆ ಅಷ್ಟು ಬಲ ಬರಬೇಕೆಂಬ ಉತ್ಕಟ ಹಂಬಲದ ಸೂಚನೆ ನೀಡಬಲ್ಲದು ಒಳಗಿನದನ್ನು ಹೊರಕ್ಕೆ ಬಿಡುಗಡೆ ಮಾಡುವ ಮುನ್ನ ಒಳಗಿನ ಜಾತಿ ನಿಜ ಪ್ರಾಮಾಣಿಕವಾಗಿ ಶೋಧಿತವಾಗಬೇಕು. ಈ ಶೋಧನೆ ಒಂದು ವ್ಯಕ್ತಿತ್ವದ ಶೋಧನೆಯ ದನಿಯಾಗಿ ಮಾತು ಪಡೆಯುತ್ತದೆ.

ಚರಿತ್ರೆಯಲ್ಲಿ ಹೆಣ್ಣಿಗಾದ ಅನ್ಯಾಯಗಳ ತೀವ್ರವಾದ ಅರಿವಿದ್ದೂ ಪುರುಷನನ್ನೇ ಸಂಬೋಧಿಸುತ್ತದೆ. ಇಲ್ಲವೆ ಪುರುಷ ಪ್ರಧಾನ ವ್ಯವಸ್ಥೆಯನ್ನೆ ವಸ್ತುವಾಗಿಸಿಕೊಳ್ಳುವ ಚಿಂತನಾ ವಿಧಾನದಿಂದ ಹೆಚ್ಚು ಕಡಿಮೆ ಮುಕ್ತವೇ ಎನ್ನುವ ರೀತಿಯಲ್ಲಿ ಸರಸ್ವತಿಯವರ ಕವಿತೆಗಳಿವೆ. ಇಂದಿನ ವಾಸ್ತವ ಬದುಕಿನ ವಿವಿಧ ಸ್ತರಗಳ ನಡುವಿನ ತಾರತಮ್ಯ, ಮತ್ಸ್ಯ ನ್ಯಾಯ, ಅನ್ಯಾಯ, ಸಂಕಟಗಳ ಅರಿವಿದ್ದರೂ ತನ್ನ ಅನುಭವಕ್ಕೆ ದಕ್ಕದಿರುವ ಅಳಲನ್ನಾಗಲೀ, ಚರಿತ್ರೆಯನ್ನಾಗಲೀ ಕುರಿತು ಬರೆಯುವುದು ಕವಯತ್ರಿಗೆ ಮುಖ್ಯವಲ್ಲ. ಆಕ್ರೋಶದ ಬಹಿರಂಗ ಪ್ರದರ್ಶಕತೆಯ ನಿರಾಕರಣೆಯ ನೆಲೆಯಿಂದಲೇ ಸರಸ್ವತಿ ಅವರ ಕವಿತೆಗಳು ಕುಡಿಯೋಕೆ ಯಾವುದು ಆಸಕ್ತಿದಾಯಕ ಅಂಶವನ್ನೆಬಹುದು.

ಇಬ್ಬಗೆಯ ನೀತಿಯನ್ನು ಅನುಸರಿಸುವ ಪುರಾಣಗಳು ಅವು ಚಿತ್ರಿಸಿರುವ ಮಹಿಳೆಯ ಕುರಿತಾದ ಮನೋಭೂಮಿಕೆಯನ್ನು ವರ್ತಮಾನದ ಸ್ಥಿತಿಯಲ್ಲಿ ಬಹಳ ಹತ್ತಿರವಾಗಿ ಕಾಣುತ್ತದೆ.

---

[೬೪] ಹೆಣೆದರೆ ಜೇಡನಂತೆ-ದು.ಸರಸ್ವತಿ-ಪುಟ-೬

ಆದ್ದರಿಂದ ಪುರಾಣದಲ್ಲಿಯ ಹಿಂಸೆ ಕ್ರೌರ್ಯಗಳು ಮತ್ತೆ ಪುನರಾವರ್ತನೆ ಆಗುವುದು ಬೇಡ ಎಂಬ ನಿಲುವು ಆಗಿದೆ. ಮುಂದೆ ಸುಕನ್ಯಾ ಮಾರುತಿ ಅವರು.

"ಕಲಿತ ಅಷ್ಟಿಷ್ಟು ವಿದ್ಯೆಯನೆಲ್ಲ । ಅಡಿಗೆ ಮನೆ
ಜಂತಿ ಎಣಿಸುವುದಕ್ಕೆ । ಬಳಸುತ್ತಿದ್ದೇನೆ
ಅವ ಬಿತ್ತಿದ್ದನ್ನು । ನಾ ಬೆಳೆಯುತ್ತ
ಕಾಲ ಕಳೆಯುತ್ತಿದ್ದೇನೆ । ನನ್ನೊಳಗೆ ಎಲ್ಲೊ
ಕಳೆದಿರುವ 'ನನ್ನ' ಹುಡುಕುತ್ತಿದ್ದೇನೆ."[೬೫]

ವ್ಯವಸ್ಥೆಯ ಕ್ರೂರತನಕ್ಕೆ ಹೆಣ್ಣೊಬ್ಬಳ ವ್ಯಕ್ತಿತ್ವ ಛಿದ್ರೀಕರಣಗೊಂಡಿರುವ ರೀತಿ ತುಂಬ ಮಾರ್ಮಿಕವಾದದು. ತನ್ನ ಸ್ವಂತಿಕೆಯ ಹುಡುಕಾಟಕ್ಕೆ ತೊಡಗಿರುವ ಮಹಿಳಾ ಬದುಕಿನ ವಾಸ್ತವ ಚಿತ್ರವನ್ನು 'ಬಿದ್ದವಳು' ಕವಿತೆಯ ಸಾಲುಗಳಲ್ಲಿ ಕಾಣುತ್ತೇವೆ. ಅತೃಪ್ತ ಮನಸ್ಸನ್ನು ಪರಿಚಯಿಸುವ ಸುಕನ್ಯಾ ಮಾರುತಿ ಕಲಿತ ಅಷ್ಟಿಷ್ಟು ವಿದ್ಯೆಯನೆಲ್ಲ ಅಡಿಗೆ ಮನೆಯ ಜಂತಿ ಎಣಿಸುವುದಕ್ಕೆ ಬಳಸುತ್ತಿದ್ದೇನೆ ಎಂಬ ಅಸಹಾಯಕತೆಯನ್ನು ವ್ಯಕ್ತ ಪಡಿಸುತ್ತಾರೆ.

ಮಹಿಳೆ ತನ್ನತನದ ಹುಡುಕಾಟವೇ ಪಾರಂಪರಿಕ ಸಾಂಪ್ರದಾಯಿಕತೆಗೆ ತೋರುವ ಬಹುದೊಡ್ಡ ಪ್ರತಿರೋಧ ಎನ್ನಬಹುದು. ಮಹಿಳೆಯಲ್ಲಿಯೂ ಅದ್ಭುತ ಶಕ್ತಿಗಳ ಖಜಾನೆಯಿದೆ. ಬೌದ್ಧಿಕ ಪ್ರೌಢಿಮೆಯಿದೆ ಆದರೆ ಅದನ್ನು ಗುರುತಿಸುವಷ್ಟು ಸೌಜನ್ಯ ಸಮಾಜಕ್ಕಿಲ್ಲ. ಈ ಒಂದು ಹಿನ್ನೆಲೆಯಿಂದಲೇ ತನ್ನಲ್ಲಿರುವ ಸ್ವಂತಿಕೆಯ ಅದಮ್ಯ ಶಕ್ತಿ ಪುನಃ ಪುನಃ ಎಚ್ಚರಿಸುತ್ತಿದೆ. ಇಂಥ ಹೆಣ್ಣಿನ ಬಹುದೊಡ್ಡ ಕೊರಗು ಸ್ತ್ರೀವಾದಿ ಕವಿತೆಗಳ ಭಾಷೆಯಾಗಿದೆ.

ತಮ್ಮ ಪ್ರಾಮಾಣಿಕ ಅನಿಸಿಕೆಗಳಿಗೆ ಕಾವ್ಯದ ರೂಪ ನೀಡಿರುವ ಬಿ.ಟಿ. ಲಲಿತಾನಾಯಕರು ಹೆಣ್ಣಿನ ಗೋಳನ್ನು ತೆರೆದ ಮನಸ್ಸಿನಿಂದ ಗಮನಿಸಿದ್ದಾರೆ. ಬಂಡಾಯದ ಮೊನಚುಳ್ಳ ಅವರ ಕಾವ್ಯ ಖಾರವಾಗಿಯೇ ಮಾತಾಡುತ್ತದೆ. ನೋವಿನ ಬಗ್ಗೆ ವಿಶೇಷವಾಗಿ ಕನಿಕರ ತೋರುವ ಲಲಿತಾ ನಾಯಕರು ವ್ಯವಸ್ಥೆ ನಡೆಸಿಕೊಂಡ ರೀತಿಯ ಬಗ್ಗೆ ಆಕ್ರೋಶ ವ್ಯಕ್ತಪಡಿಸುತ್ತಾರೆ. ಪುರಾಣ ಇತಿಹಾಸದುದ್ದಕ್ಕೂ ನೋವನ್ನನುಭವಿಸಿದ ಮಹಿಳೆಯ ಅಸಹಾಯಕ ಸ್ಥಿತಿಯನ್ನು ಪ್ರಶ್ನಿಸುವ ಇಲ್ಲಿಯ ಕವಿ ಮನೋಧರ್ಮ ಸಮಾಜವನ್ನು ದೂಷಿಸುವುದಾಗಿದೆ.

[೬೫] ನಾನು ನನ್ನವರು-ಸುಕನ್ಯಾ ಮಾರುತಿ-ಪುಟ-೧೨

"ಏಕೆ ಮಲಗಿರುವೆ ಮುಗುದೆ
ಬಯಲು ಕಟ್ಟೆಯ ಮೇಲೆ
ಊರ ಜಾನುವಾರುಗಳು
ತೀರಿದು ಅಟ್ಟಿರುವೇನೆ?

ಎಂದು ಪರಿಸ್ಥಿತಿಯಿಂದ ಹತ್ತಿಕ್ಕಲ್ಪಟ್ಟ ಮಹಿಳೆಯ ವ್ಯಕ್ತಿತ್ವವನ್ನು ವಿಚಾರಿಸುವುದ ಇಲ್ಲಿಯ ಆಶಯವಾಗಿದ್ದು ಮುಂದುವರೆದು.

ಆ ಧರ್ಮರಾಯ ?
ಹರಿಶ್ಚಂದ್ರನಂತೆ ಮಾರಿಯೇ ಬಿಟ್ಟನೋ?
ನೆನಪು ಹಾರಿತೆಂದು 'ದುಶ್ಯಂತ'
ಹೊರ ದುಡಿದನೇನೆ ?
ಶಾಪಗ್ರಸ್ತ 'ಅಹಲ್ಯೆ'ಯಾಗಿಸಿದನೋ
ಆ ತೆವಲು ಸನ್ಯಾಸಿ ?"[೬೬]

ಪುರುಷ ಪ್ರಧಾನತೆ ಈ ಸಮಾಜದಲ್ಲಿ ಎಷ್ಟು ಆಳಕ್ಕಿಳಿದ ಬೇರುಗಳಾಗಿವೆ ಎಂಬುದನ್ನು ಗೋಚರಿಸುವುದಾಗಿದೆ. ಏಕೆ ಮಲಗಿರುವೆ ? ಎಂದು ಇಲ್ಲಿಯವರೆಗಿನ ಮಹಿಳೆಯ ಸಹನಶೀಲತೆಯನ್ನು ಎಚ್ಚರಿಸುವ ಕವಯತ್ರಿ ಪುರುಷ ಶ್ರೇಷ್ಠರೆನಿಸಿಕೊಂಡ ರಾಮ ಧರ್ಮರಾಯ, ಗೌತಮ, ಹರಿಶ್ಚಂದ್ರ ಸ್ತ್ರೀ ಕುರಿತು ತಳೆದಿರುವ ಧೋರಣೆಯನ್ನು ಮನವರಿಕೆಯಾಗಿಸಿದ್ದಾರೆ.

ಕೌಟುಂಬಿಕವಾಗಿ ಹೊಣೆ ಹೊತ್ತಿರುವ ಮಹಿಳೆ ಕುಟುಂಬದ ಪ್ರಮುಖ ಸದಸ್ಯರ ಗಂಡ-ಮಗ, ಬಂಧೂ, ಬಳಗ ಎಲ್ಲರನ್ನು ಪ್ರೀತಿಯಿಂದ ಕಾಣುವ ಅವಳ ಕುಟುಂಬದ ಸದಸ್ಯರಿಂದಲೇ ನೋವನ್ನನುಭವಿಸುವ ಪ್ರಮಾದಗಳು ಹಲವು ಇವೆ. ಪರರ ಹಿತಕ್ಕಾಗಿ ತನ್ನತನವೆಲ್ಲಾ ತ್ಯಾಗ ಮಾಡುವ ಅವಳನ್ನು ಸಮಾಜ ಕೀಳು ದೃಷ್ಟಿಯಿಂದ ನೋಡುತ್ತಿದೆ. ಅವರಿಗಾಗಿ ಸುರಿಸಿದ ಬೆವರು ಹೊಳೆಯಾಗಿ ಹರಿದು ಮರುಭೂಮಿಯಲ್ಲಿ ಹಿಂಗಿದೆ ಎನ್ನುವ ಕವಯತ್ರಿಯ ಹತಾಸೆ ಭಾವನೆಗಳು ಮಹಿಳೆಯ ನೈಜಸ್ಥಿತಿಯನ್ನು ಪ್ರಕಟಿಸುತ್ತದೆ.

"ಅತ್ತು ಬಿಡಬೇಕೆಂದರೆ
ಬತ್ತಿ ಹೋಗಿದೆ ಕಣ್ಣು
ಕಡಿದು ಬಿದ್ದಿದೆ ಹಣ್ಣು
ಒಳಗೊಳಗೇ ಕುದಿಗೊಂಡ
ನೋವು, ಭಯ, ಆತಂಕಗಳು
ಹಾಡಾಗುತ್ತವೆ
ಬರ ಬರುತ್ತ, ಕಾಡಾಗುತ್ತವೆ!"[೬೭]

---

[೬೬] ಬಿದಿರು ಮಳೆ ಕಂಟಿಯಲಿ-ಬಿ.ಟಿ ಲಲಿತಾನಾಯಕ-ಪುಟ-೮೭

[೬೭] ತಾಜಮಹಲಿನ ಹಾಡು-ಸುಕನ್ಯಾ ಮಾರುತಿ-ಪುಟ-೭

ನೋವು, ಭಯ, ಆತಂಕಗಳನ್ನು ಕಾವ್ಯವಾಗಿಸುವ ಸುಕನ್ಯಾ ಮಾರುತಿ ಸಮಾಜದ ಕ್ರೂರ ಮುಖವನ್ನು ಪರಿಚಯಿಸುತ್ತಾರೆ. ಮಹಿಳೆಯರ ಬಗ್ಗೆ ಅನುಕಂಪ ಹೊರಡಿಸುವ ಅವರ ಕವನಗಳು ಮಹಿಳೆಯ ಬದುಕು ಸಮಾಜದ ರಾಕ್ಷಸೀಯ ವ್ಯವಸ್ಥೆ ಹೆಕ್ಕಿ ತಿನ್ನುವುದನ್ನು ಸಂದರ್ಭೋಚಿತವಾಗಿ ನಿರೂಪಿಸುತ್ತವೆ. ಬದುಕೆಂಬುದು। ಸಿಗರೇಟ ಸೇದಿ। ಸೆರೆ ಕುಡಿದು ಮರೆಯುವಷ್ಟು। ಸಣ್ಣದಿದೆಯೇನು? ಎಂದು ಬದುಕಿನ ಬಗ್ಗೆ ಜಿಗುಪ್ಸೆ ಹೊಂದಿರುವವರನ್ನು ಬದುಕಿನ ಅರ್ಥ ವಿವರಿಸುವುದರ ಮೂಲಕ ಹೊಸ ಕನಸುಗಳು ಹೆಣೆಯಲಿಕ್ಕೆ ಹಚ್ಚುತ್ತವೆ.

"ಉರಿದು
ಸತಿಯಾದ ರೂಪಗಳನ್ನು
ಚರಿತ್ರೆಗೆ ಸೇರಿಲೆಸತಿ ?
ಒಲೆಯ ಉರಿಗೆ
'ಜಿನುಗಿ' ಹೋದ
ಅವ್ವಂದಿರ ಕುರಿತು
ಕವನ ಕಟ್ಟಿ ಹಾಡಲೆ ?
ಭೂತಕ್ಕೆ ಬೆದರಿ
ಕದ ಕಿಟಕಿ ಮುಚ್ಚಿ
ಧ್ಯಾನ ಹಾಕಲು ತೋಚದೆ
ಬೆವೆತ ಕಥೆ ಹೇಳಲೆ ?
ರಕ್ತ ಬಸಿದು, ಕಣ್ಣೀರ ಬೆರೆಸಿ
ಪುಟ್ಟ ಲೋಲಾಕು, ಕಾಲ್ಗೆಜ್ಜೆ ಚಿತ್ರಿಸಿದರೆ
ಸುಳಿವಿಲ್ಲದೆ ಬರೆಸಿದ್ದನ್ನ
ಎಲ್ಲರೆದುರು ಗೋಳಾಡಲೆ ?"[೬೮]

ಇಲ್ಲಿ ದು. ಸರಸ್ವತಿಯವರು ಹೆಣ್ಣು ಅನುಭವಿಸುವ ನೋವು, ವೇದನೆ, ಸಂಕಟಗಳ ಕೇಂದ್ರವಾಗಿಟ್ಟುಕೊಂಡು ಯಾವ ರೀತಿಯ ಕಥೆ ನಾನು ಹೇಳಲಿ ಎನ್ನುತ್ತಾರೆ.

ಅರಿಸ್ಟಾಟಲ್‌ನಂತಹ ಮಹಾ ತತ್ವಜ್ಞಾನಿ 'ಗುಲಾಮರು, ಆಯಾಗಾರರು ಹಾಗೂ ಸ್ತ್ರೀಯರು ಯಾವಾಗಲೂ ಗೌಣ ಸ್ಥಾನದಲೇ ಇರಬೇಕು' ಎಂದು ಪ್ರತಿಪಾದಿಸಿದ ಕಾಲವೊಂದಿತ್ತು. ಚೀನಾದ ತತ್ವಜ್ಞಾನಿ ಕನ್‌ಫ್ಯೂಶಿಯಸನೂ 'ಸ್ತ್ರೀ ಪರಾವಲಂಬಿ. ಆಕೆ ಸದಾ ಮಾವ ಮತ್ತು ಗಂಡನಿಗೆ ಸೇವೆಯನ್ನು ಸಲ್ಲಿಸಬೇಕು' ಎಂದಿದ್ದಾನೆ. ಬೈಬಲ್‌ನಲ್ಲಿಯೂ ಸಹ ಮಹಿಳೆ ಎಂದೂ ಪುರುಷನ ಸ್ಥಾನವನ್ನು ಆಕ್ರಮಿಸಲು ಹವಣಿಸದೆ, ಅವನಿಗೆ ವಿಧೇಯಳಾಗಿರಬೇಕು. ಏಕೆಂದರೆ, ಸೈತಾನನಿಂದ ಮೊದಲು ಮೋಸ ಹೊಂದಿದವಳು ಈವ್ ಎಂದು ಹೇಳಿದೆ. ಮಿಲ್ಟನ್

[೬೮] ಹೆಣವರ ಜೇಡನಂತೆ–ದು.ಸರಸ್ವತಿ–ಪುಟ–೧, ೨

ಮಹಾಕವಿಯು 'ಮರುಮಾತಿಲ್ಲದೆ ಮಹಿಳೆ ಆಜ್ಞಾಧಾರಕಳಾಗಿರಬೇಕು' ಎಂದಿದ್ದಾನೆ. ಫ್ರೆಂಚ್ ಬರಹಗಾರ ರುಸೋ 'ಹುಟ್ಟುವಾಗ ಸ್ವಚ್ಛಂಧ ಜೀವಿಯಾದ ಮನುಷ್ಯನಿಗೆ ಎಲ್ಲೆಡೆಯೂ ಸಂಕೋಲೆಗಳೇಕಿರಬೇಕು.' ಎಂದು ಕೇಳಿದವನು ಮಹಿಳೆಗೆ ಬಂಧನವನ್ನು ಪ್ರತಿಪಾದಿಸಿದ್ದಾನೆ. ಪರಿಣಾಮವಾಗಿ ಸಮಾನ ಹಕ್ಕಿಗಾಗಿ ನಡೆದ ಫ್ರೆಂಚ್ ಕ್ರಾಂತಿಯಲ್ಲಿ ಕೂಡ ಕ್ರಾಂತಿಕಾರ ಪುರುಷರು ಮಹಿಳೆಯರಿಗೆ ಸಮಾನ ಹಕ್ಕು ಕೊಡಲು ಸಿದ್ಧರಿರಲಿಲ್ಲ."[೧೯]

ಮಹಿಳೆಗೆ ಪ್ರತಿಯೊಂದು ಹಂತದಲ್ಲೂ ಕಾಯ್ದೆ ಕಾನೂನುಗಳನ್ನು ಇಟ್ಟುಕೊಂಡು ಅವಳಿಗೆ ಬರಿಯ ಕಣ್ಣೀರು ಧಾರೆಯೇ ವರವಾಗಿ ಏನಾದರೂ ಎಂತಾದರು ಆ ಕಾನೂನು ನಿಯಮ ಪಾಲಿಸುವುದೇ ಅವಳ ಪಾಲಿಗಿದೆ ಎನ್ನುವ ಭಾವ ಈ ಕವಿತೆಯಿಂದ ತಿಳಿದು ಬರುತ್ತದೆ.

"ಕಳೆದು ಹೋಗಿದೆ ನನ್ನ ನಗೆಯು
ಕೆದ ಕೆದಕಿ ಹುಡುಕುತ್ತಿದ್ದೇನೆ. ಸಿಗಲೊಲ್ಲದೂ !
ಅಕ್ಕಿ, ಬೆಳೆ ಡೈರಿ ಹಾಲು
ಎಣ್ಣೆ ಡಬ್ಬಿ ತರಕಾರಿ ಪುಟ್ಟಿಗಳಲಿ
ಸಾರಿಗೆ ವಾಹನ ರೈಲಿನಿಂಧನದ ಉರಿ ಧಗೆಯಲ್ಲಿ
ಅಂಗಡಿ ಕಾರ್ಖಾನೆ ಹೊಟೇಲು ಸಿನೇಮಾ ಆಸ್ಪತ್ರೆಗಳಲ್ಲಿ
ಕೇರಿ ಸೌಧಗಳಲ್ಲಿ ಓಟ-ನೋಟುಗಳಲ್ಲಿ."[೨೦]

"ಮಹಿಳೆ ತನ್ನ ಬಾಲ್ಯವ್ಯವಸ್ಥೆಯಿಂದಲೇ ಮಕ್ಕಳನ್ನು ಆಡಿಸುವುದು, ನೀರು ತರುವುದು, ಕಟ್ಟಿಗೆ ತರುವುದರ ಜೊತೆಗೆ ತಂದೆ ತಾಯಿಯರಿಗೆ ಸಹಾಯ ಮಾಡುವುದರೊಂದಿಗೆ, ತಾಯಿಯ ಅಡುಗೆ ಕಾರ್ಯದಲ್ಲಿ ಸಹಾಯ ಮಾಡುತ್ತಾಳೆ. ವಿವಾಹ ನಂತರದ ದಿನಗಳಲ್ಲಿ ಆಕೆಯ ಜವಾಬ್ದಾರಿ ಮತ್ತಷ್ಟು ಹೆಚ್ಚಾಗುತ್ತದೆ. ಗೃಹಕಾರ್ಯದ ಜೊತೆಗೆ ಸಾಕು ಪ್ರಾಣಿಗಳನ್ನು ನೋಡಿಕೊಳ್ಳುವುದು ಗಂಡು ಮಗುವನ್ನು ಹೆತ್ತು ಕೊಡುವ ಜವಾಬ್ದಾರಿಯೂ ಅವಳದಾಗಿರುತ್ತದೆ. ಗರ್ಭಿಣಿಯಾಗಿದ್ದಾಗಲೂ ಆಕೆಗೆ ಉತ್ಪಾದನೆ ಮತ್ತು ಜವಾಬ್ದಾರಿಗಳು ಹೆಚ್ಚಾಗುತ್ತವೆ ಸಮಸ್ತ ಕುಟುಂಬಕ್ಕೆ ಆಹಾರ, ನೀರು, ಇಂಧನಗಳನ್ನು ಒದಗಿಸಬೇಕಾಗುತ್ತದೆ."[೨೧] ಮಹಿಳೆಯು ಸೃಜನಶೀಲಳಾಗಿದ್ದಾಳೆ. ಶಕ್ತಿ ಸಾಮರ್ಥ್ಯಗಳು ಆಕೆಯಲ್ಲಿವೆ. ಆದರೆ ಇವೆಲ್ಲವುಗಳು ಅಡುಗೆ ಮನೆಯ ಡಬ್ಬಿ ಪಾತ್ರೆಗಳಲ್ಲಿ ಅದುಮಿ ಹೋಗಿವೆ. ಅವುಗಳಿಂದ ಹೊರ ಬಂದು ಹೊಸ ಪ್ರಪಂಚ ಹೊಸ ಅನ್ವೇಷಣೆ, ಆವಿಷ್ಕಾರಗಳನ್ನು ಕೈಗೊಳ್ಳಬೇಕೆನ್ನುವುದೇ ಕವಯತ್ರಿಯ ಆಶಯವಾಗಿದೆ.

---

[೧೯] ಮಹಿಳೆ ಮತ್ತು ಶಿಕ್ಷಣ-ಬಿದರಿ ಚಂದ್ರಕಲಾ-ಪುಟ-೧೦, ೧೧
[೨೦] ಇದೇ ಕೂಗು ಮತ್ತೆ ಮತ್ತೆ-ಬಿ.ಟಿ.ಲಲಿತಾ ನಾಯಕ-ಐ.ಬಿ.ಎಚ್. ಪ್ರಕಾಶನ ಬೆಂಗಳೂರು
[೨೧] ಮಹಿಳೆ ಮತ್ತು ದುಡಿಮೆ –ಡಾ. ಅಂಜನಪ್ಪ ಬಿ.ಹೆಚ್-ಪುಟ-೧೨

ಮಹಿಳಾ ಸೃಜನಶೀಲತೆ ಸಾಧನೆಗಳಿಗೆ ಅನೇಕರು ಉದಾಹರಣೆಯಾಗುತ್ತಾರೆ. ಸರೋಜಿನಿ ನಾಯ್ಡು, ಪಿ.ಟಿ. ಉಷಾ, ಕಿರಣ ಬೇಡಿ, ಪ್ರತಿಭಾ ಪಾಟೀಲ ಇವರೆಲ್ಲ ಒಂದು ಕಡೆಯಾದರೆ, ಬಿ. ಸರೋಜಾದೇವಿಯವರ ಶ್ರೇಷ್ಠ ಸಾಧನೆಗಾಗಿ ಅನೇಕ ಪ್ರಶಸ್ತಿಗಳು ಇವರನ್ನು ಸಹಜವಾಗಿಯೇ ಆರಿಸಿಕೊಂಡು ಬಂದಿವೆ. ರೇಷ್ಮೆ ಕಾರ್ಖಾನೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು. ನಿವೃತ್ತಿಯಾದ ಅನಂತರ ಬಂದ ಹಣವನ್ನೆಲ್ಲಾ ಕಿವುಡು ಮೂಗು ಬಾಲಕಿಯರ ಸೇವೆಗಾಗಿ ವಿನಿಯೋಗಿಸಿದ ಅಕ್ಷರ ಜ್ಞಾನವಿಲ್ಲದ ಪರೋಪಕಾರ ನಿಷ್ಠೆಯ ಪುಟ್ಟೀರಮ್ಮನವರ ಶ್ಲಾಘನೆ ನನ್ನ ಮಿತ್ರವಲಯದಲ್ಲಿ ಕೇಳಿ ಬಂದಿತು. ತಾನಿರುವ ಸ್ಥಳದಲ್ಲಿಯೇ ಅಜ್ಞಾತವಾಗುಳಿದ ಆಕೆಯ ಸೇವಾ ತತ್ಪರತೆ ದೂರದ ದಿಲ್ಲಿಯನ್ನು ತಲುಪಿ, ರಾಷ್ಟ್ರಮಟ್ಟದ ರಾಜೀವ್ ಗಾಂಧಿ ಮಾನವ ಸೇವಾ ಪ್ರಶಸ್ತಿಯನ್ನು ಪಡೆದು ಮೈಸೂರಿಗೆ ಕೀರ್ತಿ ತಂದರು. ಇಂತಹ ಮಹಾನ ಸಾಧನೆಗೈದ ಹಾಗೂ ಸೃಜನಶೀಲತೆಯುಳ್ಳ ಮಹಿಳೆಯರ ಅಭಿವೃದ್ಧಿಯಾಗಬೇಕು."[೭೨]

"ಅಲ್ಲಲ್ಲಿ ಒಂದಿಷ್ಟು
ನೆರಳು ಆಸರೆ
ದೊರೆಯುವ ಭರವಸೆಯಿದ್ದರೂ
ಸಂಜೆಗತ್ತಲ್ಲು ದಟ್ಟವಾಗಿ
ಕಣ್ಣು ಬಿಡುವುದು ನಿರರ್ಥಕವೆನಿಸಿದೆ
ಕತ್ತಲಿನ ಬದುಕು
ಕೊನೆಗೊಂಡರೆ ನನಗದೇ ಮೋಕ್ಷ
ನನ್ನ ವೈರಿಗೂ ಬೇಡ ಈ ಶಿಕ್ಷೆ."[೭೩]

ಸಂಪ್ರದಾಯ, ದೇವರು ದಿಂಡರು ಎಲ್ಲವೂ ಕೆಳಜಾತಿಯವರ ಮೇಲೆ ನಡೆಯುವಂತಹ ಶೋಷಣೆಗಳಾಗಿವೆ ಬಸವಿ, ದೇವದಾಸಿಯನ್ನಾಗಿ ಮಾಡುವುದು ಕೆಳಜಾತಿಯ ಹೆಣ್ಣುಗಳನ್ನೆ ಅದಕ್ಕೆ ಅನೇಕ ಉದಾಹರಣೆಗಳು ಇವೆ.

ಉದಾ : "ಎಲ್ಲಮ್ಮನಿಗೆ ಜೋಗತಿಯನ್ನು ಬಿಡುತ್ತಾರೆ. ದೇವರ ಹೆಸರಿನಲ್ಲಿ ಬಿಟ್ಟವರು ಬಸವಿಯರು ಇದು ಅಚ್ಚಗನ್ನಡ ಪದ ಅವರಿಗೆ ದೇವಾಲಯದಲ್ಲಿ ನಿರ್ದಿಷ್ಟವದ ಸೇವಾ ಕರ್ತವ್ಯಗಳಲ್ಲಿ ಅವರ ಕರ್ತವ್ಯ ಕಾಮದ ತೃಷೆಯಿಂದ ಬಂದವರಿಗೆ ತೃಪ್ತಿಪಡಿಸುವುದು ಮಾತ್ರ. ಅದು ಅವರ ಧರ್ಮ, ಹೀಗಾಗಿ ಅವರು ನಿರ್ವಹಿಸುವ 'Set Work' ವೃತ್ತಿ ಪ್ರಧಾನವಾದುದಲ್ಲ ಧರ್ಮ

[೭೨] ಮಹಿಳಾ ಅಧ್ಯಯನದ ನೆಲೆಗಳು-ಸಂ.ಡಾ.ಸಿ.ಡಿ.ವೆಂಕಟೇಶ-ಪುಟ-೩೭೧ (ರಾಷ್ಟ್ರಪ್ರಶಸ್ತಿ ಪುರಸ್ಕೃತೆ ಪುಟ್ಟೀರಮ್ಮ : ರಂಗಧಾಮಯ್ಯ)

[೭೩] ಹೊಸಶತಮಾನದ ಕಾವ್ಯ-ಸಂ.ಡಾ.ಕೆ.ಶರೀಫಾ-ಪುಟ-೧೯೮ (ದೇವದಾಸಿಯ ಮಗಳ ಸ್ವಗತ : ಸುಕನ್ಯಾ ಮಾರುತಿ)

ಪ್ರಧಾನವಾದುದು ಅದು ಧರ್ಮದ ತೆಳು ಎಳೆಯ ಮೇಲೆ ಸಮಾಜ ಪ್ರಧಾನವಾಗಿ ಬೆಳೆದು ನಿಂತಿದೆ."[೨೪]

ಸುಕನ್ಯಾ ಮಾರುತಿಯವರು ಈ ದೇವದಾಸಿಯ ಪದ್ಧತಿಯನ್ನು ಹೋಗಲಾಡಿಸಬೇಕು. ಇದರಿಂದ ಎಷ್ಟೋ ದಲಿತ ಹೆಣ್ಣು ಮಕ್ಕಳು ಎಂತಹ ಕಠಿಣ ಪರಿಸ್ಥಿತಿ ತಲುಪಿರುವ ಹಾಗೂ ರೋಗಕ್ಕೆ ತುತ್ತಾಗಿರುವ ಸನ್ನಿವೇಶಗಳಿವೆ. ಆದ್ದರಿಂದ ಯಾರಿಗೂ ಇಂತಹ ಶಿಕ್ಷೆ ದೊರೆಯುವುದು ಬೇಡ ಎನ್ನುತ್ತಾರೆ.

"ಕಾಣುವ
ಕಣ್ಣ ಕಟ್ಟಿ
ನೋಟವ
ತಕ್ಕಡಿಯಲ್ಲಿ
ತೂಗಿ ಅಳೆವ
ಸಾಕ್ಷಿ ಪುರಾವೆಗಳ ಮಹಲಿನ
ಕನ್ನಡಿಯಲ್ಲಿ, ಕಂದಮ್ಮಗಳು ಕಾಣವು
ನುಣುಪಲಿ, ಬಿರುಕುಗಳು ತಟ್ಟಾಡಿವೆ
ಗರತಿ ಹಾಡಿನ ಕದ್ದಾಟದಲಿ, ಯೋನಿಗಳು
ಕೀವು ಕಟ್ಟಿವೆ
ಅಜೀರ್ಣ ಬೇಯಲು, ಹಸಿವುಕಿಚ್ಚೆಬ್ಬಿಸಿದೆ."[೨೫]

ಹೆಣ್ಣನ್ನು ಗಂಡಸು ಮೋಸದಿಂದ ನಾಟಕವಾಡುವ ಪರಿಯನ್ನು ಕವಯತ್ರಿ ದು. ಸರಸ್ವತಿಯವರ ಕವಿತೆಗಳಲ್ಲಿ ಕಾಣುತ್ತೇವೆ. ಇಲ್ಲಿ ಹೆಣ್ಣಿನ ಅನುಭವಲೋಕ ಶೋಧಿತವಾಗಿ ಪ್ರಕೃತಿರೂಪಕಗಳಲ್ಲಿ ಅರಳಿಕೊಳ್ಳುತ್ತದೆ. ಹೆಜ್ಜೆಯಂತೆ ಹೆಜ್ಜೆಯಿಡುವ ಆಮೆಗೆ ಇರುವಂತಹ ಆತ್ಮರಕ್ಷಕವಾದ ಚಿಪ್ಪು ಇಲ್ಲದ ಹೆಂಗಸು, ಪಾಪದೆಣ್ಣೆಯ ದೀಪದಲ್ಲಿ ಉರಿ–ದೀಪವಾಗಿ ಅಳುಕಿಲ್ಲದೆ ಮೈ ಮುರಿಯುವ ಇಳೆ ಮುಂತಾದ ಹಲವು ನಿದರ್ಶನಗಳನ್ನು ನೀಡಬಹುದು. ಇವೆಲ್ಲವೂ ವೈಯಕ್ತಿಕವಾಗಿ ಉಳಿಯುವುದಿಲ್ಲ. ಪ್ರತಿಯೊಂದು ಜೀವವೂ ಈ ಸತ್ಯವನ್ನು ತನ್ನೊಳಗೂ ಗುರುತಿಸಿಕೊಳ್ಳುವಂತಿದೆ. ಹೆಣ್ಣು ಅನುಭವಿಸುವ ನೋವು ಯಾತನೆ ಪುರುಷ ಸಾಮ್ರಾಜ್ಯ ಶಾಹಿ ಆಡಳಿತ ಹೆಣ್ಣಿನ ಮೇಲೆ ನಡೆಸುವ ದೌರ್ಜನ್ಯ, ಅಧಿಕಾರ ಇವೆಲ್ಲವೂಗಳನ್ನು ದಲಿತ ಕವಯತ್ರಿಯ ತಮ್ಮ ಈ ಕವಿತೆಗಳಲ್ಲಿ ಸೆರೆಹಿಡಿದು, ಎಲ್ಲರಿಗೂ ತಿಳಿಯುವಂತಹ ರೀತಿಯಲ್ಲಿ ಜಗತ್ತಿಗೆ ತೋರಿಸಿ ಕೊಡುವ ಮೂಲಕ ಹಲವು ವಿಷಯಗಳ ಅಭಿವ್ಯಕ್ತಗೊಂಡಿವೆ.

---

[೨೪] ಪಾತರದವರು–ಶೈಲಜ ಹಿರೇಮಠ–ಪುಟ–೧೭೭
[೨೫] ಜೀವ ಸಂಪಿಗೆ–ದು. ಸರಸ್ವತಿ–ಪುಟ–೩೬

### ೪.೫ ದಲಿತ ಕವಿತೆಗಳಲ್ಲಿ ಪ್ರೇಯಸಿ-ಪ್ರಿಯತಮೆ :

ನವೋದಯ ಸಂದರ್ಭದಲ್ಲಿ ಕವಿತೆಗಳು ಒಂದು ಹೆಣ್ಣು, ಹೂವು, ತಾರೆಗಳ ಕುರಿತು ರಚನೆಯಾಗುತ್ತಿದ್ದವು. ನವೋದಯದ ಸಂದರ್ಭದಲ್ಲಿ 'ರೋಮ್ಯಾಂಟಿಕ್' ಪದ ಕಾಣಿಸಿಕೊಂಡಿತು. ವರ್ಣನೆ, ಹೊಗಳಿಕೆ ಅದು ಹೆಣ್ಣನ್ನು ಕುರಿತು ಕುವೆಂಪುರವರು ಇಂತಹ ಅನೇಕ ಕವನಗಳನ್ನು ರಚಿಸಿದ್ದಾರೆ. 'ಬಾ ಚಕೋರಿ ಬಾ ಚಕೋರಿ ಚಂದ್ರ ಮಂಚಕೆ' ಎನ್ನುವುದು ಕುವೆಂಪು ಅವರು ಒಬ್ಬ ಪ್ರೇಮಿಯಾಗಿ, ರಸಿಕ, ಸಂಗಾತಿಯಾಗಿ, ಎಲ್ಲ ಪ್ರೇಮಿಗಳ ಎದೆಯ ಭಾವಕ್ಕೆ ಸುಂದರ ಶಬ್ದ ಚಿತ್ರವನ್ನು ಕಟ್ಟಿಕೊಟ್ಟ ಕಲಾವಿದರಾಗಿದ್ದಾರೆ.

ನವ್ಯ, ಪ್ರಗತಿಶೀಲವನ್ನು ದಾಟಿ ಮುಂದೆ ಬಂದಾಗ ಕವಿತೆಗಳು ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ ವಸ್ತುವಾಗಬೇಕೆಂದು ಯೋಚಿಸಿದ್ದನ್ನು ಕಾಣುತ್ತೇವೆ. ದಲಿತ ಸಾಹಿತ್ಯ ಸಂದರ್ಭದಲ್ಲಿ ಸಿದ್ದಲಿಂಗಯ್ಯನಂತಹವರು "ಬೆಲ್ಜಿಯ ಹಾಡು" ಕವಿತೆಗಳಲ್ಲಿ ತಮ್ಮ ಜನರ ನೋವು ಸಂಕಟಗಳನ್ನು ಕಂಡು ವ್ಯಥೆಯಿಂದ ಗಟ್ಟಿಯಾಗಿ ಹೀಗೆ ಹಾಡಿದ್ದಾರೆ.

"ದೊಡ್ಡ ಗೌಡರ ಬಾಗಿಲೀಗೆ
ನಮ್ಮ ಮೂಳೆಯ ತ್ವಾರಣ
ನಮ್ಮ ಜನಗಳ ಕಾಲು ಕಯ್ಯಿ
ಕಂಬ ಅವರ ಹಟ್ಟಿಗೆ
ಅವರ ಬೇಟೆಗೆ ನಾವು ಮೊಲಗಳು
ನಮ್ಮ ಬಾಳೆ ಬಂಗಲೆ
ಅವರ ಬಂಗಲೆಯಂಗಳಕೆ
ನಮ್ಮ ರಕ್ತದ ರಂಗೋಲಿ."[೭೬]

ಇಲ್ಲಿ ಉಳ್ಳವರು, ಶ್ರೀಮಂತರು, ದೀನ-ದುರ್ಬಲರು, ದಲಿತರನ್ನು ಯಾವ ಯಾವ ರೀತಿಯಲ್ಲಿ, ಹೇಗೆ ಶೋಷಣೆಗೀಡು ಮಾಡುತ್ತಾರೆ ಎನ್ನುವುದರ ಜೊತೆಗೆ ಶೋಷಣೆಯ ಸ್ತರಗಳನ್ನು ಚಿತ್ರಿಸುತ್ತಾರೆ. ಅಲ್ಲದೆ ದಲಿತರು ಉಳ್ಳವರ ಬಾಗಿಲಿಗೆ ತಮ್ಮ ಮೂಳೆಯನ್ನು ತೋರಣ ಮಾಡುವಂತಹದ್ದು, ರಕ್ತದ ರಂಗೋಲಿ-ಬರೆಯುವಂತಹದ್ದು-ಹೀಗೆ ಇತ್ಯಾದಿಯಾಗಿ ತಮ್ಮ ದೇಹದ ಇಡೀ ಮಾಂಸ, ಖಂಡ, ನರ, ನಾಡಿಗಳನ್ನು ಉಳ್ಳವರ ಸುಖಕ್ಕಾಗಿ, ಬಾಳ್ವೆಗಾಗಿ ಧಾರೆ ಎರೆಯುವುದನ್ನು ಕಾಣುತ್ತೇವೆ.

---

[೭೬] ಮೆರವಣಿಗೆ-ಡಾ.ಸಿದ್ದಲಿಂಗಯ್ಯ-ಪುಟ-೮೭

"ಆ ಬೆಟ್ಟದಲ್ಲಿ ಬೆಳದಿಂಗಳಲ್ಲಿ
ಸುಳಿದಾಟ ಬೇಡ ಗೆಳತಿ
ಚೆಲುವಾದ ನಿನ್ನ ಮಲ್ಲಿಗೆಯ ಮಯ್ಯ
ಸುಟ್ಟಾವು ಬೆಳ್ಳಿ ಕಿರಣ
ಇಳಿಜಾರಿನಲ್ಲಿ ಆ ಕಣಿವೆಯಲ್ಲಿ
ನೀ ಇಳಿಯ ಬೇಡ ಗೆಳತಿ
ತತ್ತರಿಸುವಂತೆ ಕಾಲಲ್ಲಿ ಕಮಲ
ಮುತ್ತುವವು ಮೊಲದ ಹಿಂಡು."[೭೭]

ಸಿದ್ಧಲಿಂಗಯ್ಯನವರ 'ಕಂಡೆನನ್ನವಳ ಒಂದು ದಿವಸ' ಕವನ ಪ್ರೇಮದ ಪ್ರತೀಕವಾದುದು, 'ಸುಟ್ಟಾವು ಬೆಳ್ಳಿ ಕಿರಣ' ಕವನ ತನ್ನ ಪ್ರಿಯತಮೆ ತನ್ನ ಸಂಗಾತಿಯ ಆರ್ತ ನಾದವೇ ತಾನು ತನ್ನ ಸರ್ವಸ್ವವೇ ಅವಳು ಎನ್ನುವ ಭಾವವು ವ್ಯಕ್ತವಾಗುತ್ತದೆ. ಜೊತೆಗೆ ಅವಳ ರಕ್ಷಣೆಯ ಮಾತುಗಳನ್ನು ಇಲ್ಲಿ ಕಾಣುತ್ತೇವೆ. ಸಿದ್ದಲಿಂಗಯ್ಯ ಕೇವಲ ಹೋರಾಟ ಬಂಡಾಯಗಳಿಗೆ ಮಾತ್ರ ಹೆಚ್ಚಿನ ಮಹತ್ವ ಕೊಟ್ಟರು. ಅವರ ಈ ಪದ್ಯದಲ್ಲಿ ಅವರಿಬ್ಬರ ನಡುವೆ ಆಪ್ತತೆಯನ್ನು ಹುಟ್ಟಿಸುವ ಸ್ವಚ್ಛಂದ ಭಾವವಿದೆ. ಪ್ರೇಮ-ಪ್ರೀತಿಯ ಮನಸ್ಸಿನ ಅನಾವರಣವಿದೆ. ಪ್ರೀತಿಯಲ್ಲಿಯೂ ತನ್ನ ಹೋರಾಟದ ಮನಸ್ಸಿದೇ ಎನ್ನುವ ಭಾವ ಸೂಚಕವಾಗಿದೆ.

ದಲಿತ ಲೋಕದ ಗಮನಾರ್ಹ ಪ್ರತಿಭೆಯಾದ ಸತ್ಯಾನಂದ ಪಾತ್ರೋಟರವರ 'ಜಾಜಿ ಮಲ್ಲಿಗೆ' ಪ್ರೀತಿಯೊಂದಿಗೆ ಸಾಮಾಜಿಕ ಆಯಾಮಗಳನ್ನು ಗುರುತಿಸುವಂತಹದಾಗಿದೆ. ಇಲ್ಲಿ ಕವಿ ಮನೋಧರ್ಮ ಸಮಾಜದ ಎಲ್ಲ ಸಾಧ್ಯತೆಗಳನ್ನು ಒಳಗೊಂಡಿರುವಂತಹದ್ದಾಗಿದೆ. ಮುಖ್ಯವಾಗಿ ಬದುಕಿನ ಪ್ರತಿ ಕ್ಷಣಗಳನ್ನು ಕಾವ್ಯದ ಸಾಧನವನ್ನಾಗಿಸಿದ್ದು, 'ಜಾಜಿ ಮಲ್ಲಿಗೆ'ಯ ಮಹತ್ವದ ಅಂಶವಾಗಿದೆ. ನಿಸರ್ಗ ಸೌಂದರ್ಯದ ಮಡಿಲಲ್ಲಿ ಬಿಚ್ಚಿಕೊಳ್ಳುವ ಇಲ್ಲಿಯ ಬಹುತೇಕ ಕವನಗಳು ಪ್ರೇಮದ ಒಡನಾಟದೊಂದಿಗೆ ಬೆರೆತಿರುವುದು ಕಾವ್ಯಕ್ಕೆ ಮತ್ತಷ್ಟು ಬಲ ತಂದಿದೆ. ಅವರು ಬಯಸುವ ಪ್ರೇಮ ಸಹಜವಾದದ್ದು. ಹೆಣ್ಣಿನ ಮಾರ್ದವತೆಯನ್ನು ಸವಿಯುವಂತದ್ದು. ಆದರೆ ಹೆಣ್ಣಿನ ಅಂಗಾಂಗ ವರ್ಣನೆಯಲ್ಲಿ ಯಾವುದೇ ರೀತಿಯ ಅಶ್ಲೀಲತನವನ್ನು ಕಂಡರಿಸದಂತಹ ಮಡಿವಂತಿಕೆಯಿದೆ. ಹೀಗಾಗಿ ಪಾತ್ರೋಟರ ಕಾವ್ಯ ಸಾಮಾಜಿಕ ಆರ್ಥಿಕ ಸ್ತರದ ಮೂಲಕ ಹೆಣ್ಣಿನ ಜೊತೆ ಹಂಚಿಕೊಳ್ಳುವ ಆತ್ಮೀಯ ಸಂವಾದವೆನಿಸಿದೆ.

---

[೭೭] ಮೆರವಣಿಗೆ-ಡಾ.ಸಿದ್ಧಲಿಂಗಯ್ಯ-ಪುಟ-೧೨೩

ಅಲ್ಲದೇ ಹೆಣ್ಣನ್ನು ಮಾನವೀಯ, ಮನುಷ್ಯ ಸಂಬಂಧಿ ನೆಲೆಯಲ್ಲಿ ಕಂಡು ಅವಳ ಮೂಲಕ ಸಮಾಜದ ವಿಷಮತೆಯನ್ನು ಖಂಡಿಸುವ, ಪ್ರತಿಭಟಿಸುವ ಭಾವ ಇವರ ಒಟ್ಟು ಕವಿತೆಯ ಮೂಲ ದ್ರವ್ಯವಾಗಿದೆ. ಹೀಗಾಗಿ ಇಲ್ಲಿ 'ಹುಡುಗಿ' ವಿಶೇಷ ಪಾತ್ರವಾಗಿ ಪ್ರಕೃತಿಯ ಭಾಗವಾಗಿ ಕಂಡುಬರುತ್ತಾಳೆ.

"ಎದೆಯ ತೋಟದ ತುಂಬ ಕನಸುಗಳ ಕಟ್ಟಿ
ಚಂದ್ರಮನ ಬೆಳಕಲ್ಲಿ ತಂಗಾಳಿ ಚಿಮುಕಿಸಿ
ನಿನ್ನೆ ಇದ್ದವಳು ಇಂದು ಕಾಣೆಯಾಗಿಹಳು
ನನ್ನ ಕನಸಿನ ಹುಡುಗಿ
ಗಾನ ಗಂಧವತಿ
ಪೈರಾಗುವ ಮೊದಲು ಬುದಿಯಾಗಿಹಳು."[೨೮]

ಇಲ್ಲಿ ಕವಿ ತನ್ನ ಕನಸಿನ ಹುಡುಗಿಯನ್ನು ಗಾನ ಗಂಧವತಿಯೆಂದು ಬಣ್ಣಿಸುವ ಮೂಲಕ ಅವಳು ತನ್ನ ಕನಸಿಗೆ ಕಾಲಿಟ್ಟವಳು ಎಂದು ಅಂತವಳು ಜಾತಿ-ವರ್ಗ-ವರ್ಣದ ಹಾವಳಿಯಲ್ಲಿ ಕಾಣೆಯಾಗಿದ್ದಾಳೆ, ಬೂದಿಯಾಗಿದ್ದಾಳೆ ಎಂದು ವಿಷಾದದಿಂದ ಹೇಳುವುದನ್ನು ಕಾಣುತ್ತೇವೆ.

"ಬಡವನಾದರೇನು ಪ್ರಿಯೇ
ಕೈ ತುತ್ತ ತಿನಿಸುವೆ
ಎದೆಯ ತುಂಬ ಒತ್ತಿಕೊಂಡು
ಮುತ್ತು ಮಳೆಯ ಸುರಿಸುವೆ."[೨೯]

ಎಂದು ಬಡತನ ಸಿರಿತನಗಳು ಪ್ರೀತಿಗೆ ಅಡ್ಡಬಾರವು ಎಂದು ಹೇಳುತ್ತಾ ಬಡತನದಲ್ಲಿಯೇ ಪ್ರೇಯಸಿಗೆ ಕೈತುತ್ತು ಮಾಡಿ ತಿನಿಸುವೆ ಎನ್ನುವಲ್ಲಿ ಪ್ರೀತಿಯ ವಿಶ್ವ ವಿಶಾಲತೆ, ಅನನ್ಯತೆ ವ್ಯಕ್ತವಾಗಿದೆ.

ಸತ್ಯಾನಂದ ಪಾತ್ರೋಟರ 'ಒಂದಾಗು ಚಲುವೆ' ಮದುವೆಯಾಗುವ ಹುಡುಗಿಗೆ ಕವಿತೆಗಳಲ್ಲಿ ಪ್ರೀತಿಯ ಅಂಶಗಳನ್ನು ಕಾಣುತ್ತೇವೆ "ಹೂವು, ಹೆಣ್ಣು, ಮಳೆ, ಮಣ್ಣು ಎಲ್ಲವೂ ಮನುಷ್ಯ ಸಂಬಂಧಿಯಾದ ವಸ್ತುವಾಗಿ ರೂಪಗೊಂಡಿದೆ. ಆದರೆ ಹೂವಿಗಾಗಿ ಹೂವಾಗಿಲ್ಲ, ಹೆಣ್ಣಿಗಾಗಿ ಹೆಣ್ಣಾಗಿಲ್ಲ. ಮಳೆಗಾಗಿ ಮಳೆಯಾಗಿಲ್ಲ, ಹೂವು ಅರಳುವಾಗ, ಹೆಣ್ಣು ಕರೆಯುವಾಗ, ಮಳೆ ಬರುವಾಗ, ಮಣ್ಣು ಮಾತಾಡುವಾಗ ಪಾತ್ರೋಟರ ಕವಿತೆಗಳಲ್ಲಿ ಮನುಷ್ಯನ ಇತಿಹಾಸ

---

[೨೮] ಜಾಜಿ ಮಲ್ಲಿಗೆ-ಲೇ. ಸತ್ಯಾನಂದ ಪಾತ್ರೋಟ-ಪುಟ-೨೩

[೨೯] ಜಾಜಿ ಮಲ್ಲಿಗೆ-ಲೇ. ಸತ್ಯಾನಂದ ಪಾತ್ರೋಟ-ಪುಟ-೪೫

ಒತ್ತಾಸೆಯಾಗಿ ಒಡಮೂಡುತ್ತದೆ. ಅನುಭವ ಮತ್ತು ಅರಿವುಗಳೊಂದಾದ ವಿಶಿಷ್ಟ ನೆಲೆ ಅನಾವರಣಗೊಳ್ಳುತ್ತದೆ."[೬೦] ಬರಹ ಒಂದೆಡೆ, ಬದುಕೊಂದೆಡೆಯಾದರೆ ಆ ಬರಹಕ್ಕೆ, ಆ ಬದುಕಿಗೆ ಅರ್ಥವಾದರೂ ಏನು ? ಇದು ನಾನು ಬರಹಕ್ಕೆ ತೊಡಗಿದಾಗಿನಿಂದಲೂ ಕಾಡುತ್ತ ಬಂದ ಪ್ರಶ್ನೆ ಎಂದು ಹೇಳುವ ಪಾತ್ರೋಟರು ಬದುಕು ಮತ್ತು ಬರಹವನ್ನು ಸಮನಾಗಿ ಕಂಡವರು, ಹಾಗೆಯೇ ನಡೆದವರು.

"ಎಷ್ಟು ಬೇಗ ಬರುವೆಯೆ ಚೆಲುವೆ
ಮೋಹದಿರುಳ ಕನಸಿನಲ್ಲಿ ತರಲೆ
ಬರಲಿಲ್ಲ ನೀನೆಂದೂ ನಿಜ ರೂಪದಲ್ಲಿ
ಎಚ್ಚರವಿದ್ದ ಯಾವೊಂದು ಕಾಲದಲ್ಲಿ
ಬರುತ್ತೀಯೆ ಬರಿದೆ ದಟ್ಟ ನಿಶೆಗತ್ತಲ ಬಾಯಲ್ಲಿ
ಗಾಢ ನಿದ್ದೆ ನೆತ್ತಿಯಲ್ಲಿ ತೂಗುವ ಹೊತ್ತಿನಲ್ಲಿ."[೬೧]

ಕವಿಯ ಭಾವನಾಲೋಕದ ಜೊತೆಗೆ ಸಿಂಹ ಸ್ವಪ್ನ ಹೇಳ ತೀರದು ತನ್ನ ಗೆಳತಿಯನ್ನು ಬರುವೇಯಾ ಯಾವಾಗ? ಎಲ್ಲಿ? ಬರುವೆ? ಎನ್ನುವ ಪ್ರಶ್ನಾರ್ಥಕ ಭಾವವನ್ನು ಮೊಗಳ್ಳಿ ಗಣೇಶರವರು ತಮ್ಮ ಕವಿತೆಯಲ್ಲಿ ಹೇಳಿರುವರು. ಒಂದು ಕವಿತೆಯಲ್ಲಿ ಯಾವಾಗ ಬರುವೆ ? ಎಂದ ಕೇಳುವುದಿದ್ದರೇ ಇನ್ನೊಂದರಲ್ಲಿ ;

"ನೀನಿಲ್ಲದ ಜಗತ್ತು ಒಂಟಿ
ನೀನಿಲ್ಲದ ಭೂಮಿ ಬಂಜೆ
ನೀನಿಲ್ಲದ ಬಾಳು ಸುಳ್ಳು
ಆಕಾಶದ ಅರ್ಧಭಾಗ ನೀನು
ದೇಹದ ಅರ್ಧಸಾರ ನೀನು
ಭೂಮಿಯ ಅರ್ಧಭಾರ ನೀನು
ಇಳಿದು ಬಾ ಕೂಡು ಬಾ ಕಟ್ಟು ಬಾ
ನೀನಿಲ್ಲದೆ ನಾಗರಿಕತೆ ಬಸುರಾಗುವವದೇ."[೬೨]

ಮೊಗಳ್ಳಿ ಗಣೇಶರವರ 'ಸೂರ್ಯನನ್ನು ಬಚ್ಚಿಡಬಹುದೆ' ಕವನ ಸಂಕಲನದಲ್ಲಿ 'ದೇವಸ್ಮಶಾನ'ದಂತಹ ಅನೇಕ ಕವನಗಳಿವೆ. ಹೆಣ್ಣಿಲ್ಲದೇ ಭೂಮಿಯಲ್ಲಿ ಸೃಷ್ಟಿಯೇ ಇಲ್ಲ. ಹೆಣ್ಣಿಂದಲೇ ಕೂಡು, ಕಟ್ಟುವುದು, ಬೆಳೆಯುವುದು ಕವಿಯ ಈ ಮಾತುಗಳನ್ನು ಕೇಳಿದಾಗ ಒಂದೆಡೆಗೆ ಇಡಿಯಾದ ಸೃಷ್ಟಿಯ ಜನ್ಮ ತಾಯಿಯಿಂದ ಭೂಮಿ ತಾಯಿ ಹೆಣ್ಣು ಭಾರತಾಂಬೆ

---

[೬೦] ಸಂಸ್ಕೃತಿ ಶ್ರಮ ಮತ್ತು ಸೃಜನ ಶೀಲತೆ-ಬರಗೂರು ರಾಮಚಂದ್ರಪ್ಪ-ಪುಟ-೨೦೩

[೬೧] ದೇವಸ್ಮಶಾನ-ಮೊಗಳ್ಳಿ ಗಣೇಶ-ಪುಟ-೯೬

[೬೨] ಸೂರ್ಯನನ್ನು ಬಚ್ಚಿಡಬಹುದೆ-ಮೊಗಳ್ಳಿಗಣೇಶ-ಪುಟ-೩೭

ಹೆಣ್ಣು ಸಹನೆ, ತಾಳ್ಮೆ, ಕರುಣೆ, ತ್ಯಾಗ ಪ್ರೀತಿ ಎಲ್ಲವೂಗಳ ಸಂಕೇತ. ಹೆಣ್ಣು 'ಜಗನ್ಮಾತೆ' ಎನ್ನುತ್ತಾರೆ ಹೊರತು, 'ಜಗತ್ ಪಿತಾ' ಎಂದು ಯಾರು ಕರೆಯರು. ಏಕೆಂದರೆ ಆ ಹೆಣ್ಣಿನಲ್ಲಿಯೇ ಅಂತಹ ಶಕ್ತಿ-ಸಾಮರ್ಥ್ಯ ಅಡಗಿದೆ. ಆದಿ ಶಕ್ತಿಯ ಹಲವಾರು ರೂಪಗಳು ಹೆಣ್ಣಿನಲ್ಲಿವೆ. ಆದಕ್ಕೆ ಕವಿ ತನ್ನನ್ನು ಪ್ರೀತಿಯ ಸಂಗಾತಿಯನ್ನು ಅಥವಾ ಪ್ರೇಯಸಿಯನ್ನು ಹೀಗೆ ಆಹ್ವಾನಿಸುತ್ತಾರೆ.

"ನನ್ನ ನಿನ್ನ ಪ್ರೀತಿ ಮಾತು
ನೀರಿನೊಳಗೆ ಬರದ್ಹಾಂಗಾತು
ಮರಳ ಮನಿಯ ಕಟ್ಟಿ ಆಡಿ
ಕೆಡಿಸಿ ಮನಿಗಿ ಹೋದ್ಹಾಂಗಾತು
ಕೊಲ್ಲು ನಿನ್ನ ಕುಡಿಯ ನೋಟ
ಹೊತ್ತಿನೂಟ ಮರೆಸುತ್ತಿತ್ತು
ನೀನಿಲ್ಲದ ಒಳನೋಟ
ಕಣ್ಣ ನೀರು ತುಂಬುತಿತ್ತು."[೮೩]

"ಪ್ರೇಮ ಎಂಬ ಪದವು ಗಂಡು, ಹೆಣ್ಣುಗಳಿಗೆ ಬೇರೆ ಬೇರೆ ಅರ್ಥಗಳನ್ನು ನೀಡುತ್ತದೆ. ಹೆಂಗಸು 'ಪ್ರೇಮ' ಪದವನ್ನು ಅರ್ಥ ಮಾಡಿಕೊಳ್ಳುವ ರೀತಿ ಸ್ಪಷ್ಟವಾಗಿದೆ. ಅದು ಕೇವಲ ನಿಷ್ಠೆಯಲ್ಲ. ಯಾವುದೇ ಹಿಂಜರಿಕೆ ಇಲ್ಲದೆ, ಯಾವುದಕ್ಕೂ ಹೆದರದೆ, ಇಡೀ ದೇಹ ಮತ್ತು ಆತ್ಮಗಳನ್ನು ಕೊಡುಗೆಯಾಗಿ ನೀಡುವುದು. ಬೇಶರತ್ತಾದ ಈ ಪ್ರೇಮವು 'ನಂಬಿಕೆ'ಯ ನೆಲೆಯನ್ನು ಪಡೆದುಕೊಳ್ಳುತ್ತದೆ. ಆಕೆಯಲ್ಲಿರುವ ನಂಬಿಕೆ ಇದೊಂದೆ. ಗಂಡಸು ಹೆಂಗಸನ್ನು ಪ್ರೀತಿಸಿದಾಗ ಆಕೆಯಿಂದ ಪ್ರೀತಿಯನ್ನು ಪಡೆಯ ಬಯಸುತ್ತಾನೆ. ಆದರೆ ಇದೇ ಭಾವನೆಯನ್ನು ಹೆಂಗಸು ಕೂಡಾ ಹೊಂದಿರಬಹುದುದೆಂದು ಆತ ತಿಳಿಯುವುದಿಲ್ಲ. ಒಂದು ವೇಳೆ ತಮ್ಮನ್ನು ಕೊಟ್ಟುಕೊಳ್ಳಲು ಯಾರಾದರೂ ಗಂಡಸರು ಸಿದ್ಧರಿದ್ದರೆ, ಅವರು ಗಂಡಸರಾಗಿ ಉಳಿಯುವುದಿಲ್ಲ."[೮೪]

ಪ್ರೀತಿ ಎಂಬುದು ಗಂಡು ಹೆಣ್ಣಿನಲ್ಲಿ ಇರುವಂತದ್ದು. ಅದಕ್ಕೆ ಕವಿಯು ತಮ್ಮ ವಿರಹ ವೇದನೆ ಸಹಿಸದೇ ತನ್ನ ಪ್ರೇಯಸಿಯನ್ನು ತಮ್ಮ ಪ್ರೀತಿ ಹೇಗಿತ್ತು, ಹೇಗಾಯಿತು? ಎಂದು ಅನ್ನುತ್ತ ನೀರ ಮೇಲೆ ಬರೆಯಲು ಸಾಧ್ಯವೇ? ಮರಳುಗೂಡು ನಿಲ್ಲಲು ಸಾಧ್ಯವೇ? ಇಲ್ಲಿ ಕವಿ ಇಲ್ಲಿ ಉಪಮೆ, ಉಪಮಾನಗಳನ್ನು ಬಳಸಿರಬಹುದೆಂದು ಅನಿಸುತ್ತದೆ. ಇನ್ನೊಂದು ಹಿಂದಿ ಚಲನ

---

[೮೩] ಕಾವ್ಯ ಕುಂಕುಮ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೮೭ (ಪ್ರೀತಿ ಮಾತು : ಅರವಿಂದ ಮಾಲಗತ್ತಿ)
[೮೪] ಸಿಮೊನ್ ದ ಬೊವಾ ದ ಸೆಕೆಂಡ್ ಸೆಕ್ಸ್-ಡಾ.ಎಚ್.ಎಸ್.ಶ್ರೀಮತಿ-ಪುಟ-೪೦೭

ಚಿತ್ರದಲ್ಲಿ 'ಮೆರಾ ಜೀವನ ಖೋರಾ ಕಾಗಜ' ಹಾಡಿನಂತೆ ನನ್ನ ನಿನ್ನ ಜೀವನ ಬಿಳಿಯ ಹಾಳಿಯಂತಾಗಿದೆ ಎನ್ನುತ್ತಾರೆ.

ಪ್ರೀತಿ ಗಂಡಿನಲ್ಲಿ ಎಷ್ಟಿರುತ್ತದೆಯೋ ಅದಕ್ಕಿಂತ ಹೆಚ್ಚು ನೋವು ಯಾತನೆ ದುಃಖ, ಅನುಭವಿಸುವವಳು ಹೆಣ್ಣಾಗಿದ್ದಾಳೆ. ಒಂದೆಡೆ ಕವಿಯ ಪ್ರೀತಿಯನ್ನು ಮೆಚ್ಚುವಂತಹದ್ದಾಗಿದೆ. ಏಕೆಂದರೆ ಕವಿಯಲ್ಲಿ ಎಷ್ಟೋ ನೋವಿದೆ. ಶೋಷಣೆ ಅನುಭವಿಸಿದ ಮನಸ್ಸಿದೆ. ಇವೆಲ್ಲವುಗಳ ಮಧ್ಯೆಯು ಕವಿಗಿದ್ದ ಪ್ರೀತಿಯ ಕಾಳಜಿ ತನ್ನ ಪ್ರೇಯಸಿ ನೆನಪು ಏನಿದೆಯೋ ಅದು ಅಗಾಧವಾದುದು. ಎಲ್ಲರಲೂ ಎಲ್ಲಾ ಪ್ರಾಣಿ, ಪಕ್ಷಿಗಳಲ್ಲೂ ಪ್ರೀತಿ ಹುಟ್ಟುತ್ತದೆ. ಅದು ಪ್ರಕೃತಿ ದತ್ತವಾಗಿ ಬರುವಂತಹದ್ದಾಗಿದೆ. ಇನ್ನೊಂದೆಡೆ ಮಾಲಗತ್ತಿಯವರು.

"ನಾ ನಿನಗೆ ನೀ ನನಗೆ ಹಾಲ್ ತುಪ್ಪಾ ಎಂದೆ
ಹೆಜ್ಜೆ ಹೆಜ್ಜೆಗೂ ನಾನು ಒಪ್ಪು ಎಂದೆ
ಎಂದಿನಿಂದ ನಾ ನಿನಗೆ ಸರಿ ಸವುಳಪ್ಪಾದೆ
ಯಾವ ಗಳಿಗೆ ನಾ ನಿನಗೆ ತಪ್ಪಾದೆ
ಆಸರೆಯ ಬೇಕೆಂದು ಟೊಂಗೆ ಟೊಂಗೆಯ ಬಳಸಿ
ನನಕಿಂತ ಎತ್ತರಾಗಿ ಕುಡಿಯ ಬೆಳಸಿ
ಆ ಚಂದ್ರ ನನ್ನೊಳಗೆ ಅಮವಾಸೆಯ ಇಳಿಸಿ
ಸುತ್ತಲೆಲ್ಲ ಬೆಳದಿಂಗಳ ನಿನ್ನ ಕಂಪ ಹರಿಸಿ."[೮೫]

ಮಾಲಗತ್ತಿಯವರ ಕವಿತೆಗಳಲ್ಲಿ ಪ್ರೀತಿಯ ಜೊತೆ-ಜೊತೆಗೆ ಆ ಪ್ರೀತಿಯಿಂದ ದೂರಾದ ತನ್ನ ಪ್ರೇಯಸಿಯ ವಿರಹ, ವೇದನೆಗಳಿವೆ. ಜೊತೆಗೆ ಕವಿ ಮುಂದೆ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಕಾಣುವ ಬಗೆ ತೀರಾ ವಿಭಿನ್ನ ರೀತಿಯದಾಗಿದೆ. ಕೌಟುಂಬಿಕ ಸಂಬಂಧಗಳಲ್ಲಿ ಹೆಣ್ಣು ಮಾವನ ಮಗಳಾಗಿ, ಮಡದಿಯಾಗಿ ಕಾಣಿಸಿಕೊಂಡ ಬಗೆಯನ್ನು ಮಾಲಗತ್ತಿಯವರ ಕಾವ್ಯ ನವಿರಾಗಿ ಕಟ್ಟಿಕೊಡುತ್ತದೆ.

"ಸೊಂಟದ ಮ್ಯಾಲಿ ಕೊಡ ಇಟಗೊಂಡು
ಎಡಗೈಯೋಳಗ ಹಗ್ಗ ಹಿಡದು
ಡವಲ್ ಮಾಡಿ ತೂಗಿ ತೂಗಿ
ನಡಿಯುತ್ತಾಳ

ಓಗೆ 'ಮಾವನ ಮಗಳ' ಕವಿತೆ ಹೆಣ್ಣಿನ ವೈಯ್ಯಾರವನ್ನು ಹೇಳುತ್ತದೆ. ಇದೇ ಬಗೆಯ ಕವಿತೆ 'ನೀ ಯಾಕ ನನ್ನ ಗಳಿಬಿಳಿ ನೋಡತಿ'

---

[೮೫] ಕಾವ್ಯ ಕುಂಕಮ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೮೮ (ಮಾತಡು ಮಲ್ಲಿಗೆ : ಅರವಿಂದ ಮಾಲಗತ್ತಿ)

ನೇಗಿಲಿಗಂತ ಹೊಲಕ್ಕೆ ಹೋದ್ರ
ಮೇವಿಗಂತೋಡಿ ಓಡಿ ಬರ್‍ತಿದಿ
ಹೊರಿಯ ಕಟ್ಟಿ ಹೊರಸಾಕ ನನ್ನ ಕರಿಯತ್ತಿದಿ
ಕೈ ಕೈಯ ಹತ್ತಿದಾಗ
ಹಸಿರು ಹರದ್ಹಾಂಗ ಆಯ್ತು
ಮಿಂಚ ಸುಳದ್ಹಾಂಗ ಆಯ್ತು
ಒಡ್ಡು ವಡ್ಡು ನೀರು ಹರ್‍ದು ಹ್ವಾದ್ಹಂಗ ಆಯ್ತು"[೮೬]

ಹರೆಯದ ಹೆಣ್ಣಿನ ಮನಸ್ಸು, ಚಲನವಲನಗಳನ್ನು ಕವಿತೆ ಚಿತ್ರಿಸಿದೆ."ನಿನ್ನ ಮಡಿಲಲ್ಲಿ ಸಾವ ಹರಕೆ' 'ಹೇಳ್ತೀನಿ ಕೇಳಬಾರಾ' 'ಕೆರೆಗೆ ಹಾರ' ಕವಿತೆಗಳು ಪತಿ-ಪತ್ನಿಯರ ಸಂವಾದದ ನೆಲೆಯಲ್ಲಿ ಮೂಡಿದ್ದು, ಇಲ್ಲಿನ ರಸ-ವಿರಸ-ಸಲ್ಲಾಪಗಳು ಮುದ್ದಣ-ಮನೋರಮೆಯನ್ನು ನೆನಪಿಸುತ್ತವೆ."[೮೭] ಇಲ್ಲಿಯ ಪ್ರೀತಿ-ಪ್ರೇಮಗಳ ಬಗ್ಗೆ ನೋಡಿದಾಗ ವರ ಕವಿ ಬೇಂದ್ರೆಯವರ ಕವಿತೆ ನೆನಪಾಗುತ್ತದೆ.

"ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡವದನೆ ನಾವು
ಅದಕು ಇದಕು ಎದುಕು."[೮೮]

"ಪ್ರೀತಿಯನ್ನು ಗಂಡ ಹೀಗೆ ತೋರಿಸಿದ್ದರಿಂದ, ಅವಳ ಬಾಳು ಸಾರ್ಥಕವಾಗಿದೆ. ಆ ಪ್ರೀತಿ, ಪ್ರೇಮರೂಪಿಯಾಗಿ ತನ್ನ ಗಂಡ ಮಕ್ಕಳ ಫಲವನ್ನು ನೀಡಿದ್ದಾನೆ. ತುಟಿಗೆ ಹಾಲು ಜೇನಿನ ಸವಿ ನೀಡಿದ್ದಾನೆ. ಇಷ್ಟೇ ಸಾಕು ಎಂಬ ತೃಪ್ತಿಯ ಭಾವ ಕವನದ ನಾಯಕಿಗಿದೆ. ಇದು ಸಂಸಾರಿಗೆ ಬೇಡಾದ ತೃಪ್ತಿ ಭಾವ."[೮೯]

"ಆರು ಮಂದ್ಯಾಗ ಭಾರಿ ಮುದ್ದಿನಾಕಿ ಸಣ್ಣಾಕಿ ನನ್ಹೇಣ್ತಿ
ಊರಕೇರ್‍ಯಾಗ ಬ್ಯಾರೆ ಯಾರಿಲ್ಲ ಏನ ರೂಪವಂತಿ
ಚಂದಿರ ಬಣ್ಣ ಕಾಡಗಿ ಕಣ್ಣ ನೋಡಿದ್ರ ಏನಂತಿ
ಆರು ತಿಂಗಳು ಅರಗಳಿಗೆ ಆಗಲಿಲ್ಲ ಹೆಂಗ ಹೊತ್ತ ಕಳಿತಿ
ಯಾವಾಗ ಹೊತ್ತ........॥
ಯಾವಾಗ ಹೊತ್ತ ಹೋಂಟೀತಂತ ಹೆಂಗಾರ ಕಣ್ಣು ಮುಚ್ಚಿ."[೯೦]

---

೮೬ ಕಾವ್ಯ ಕುಂಕಮೆ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೮೮ (ಮಾತಡು ಮಲ್ಲಿಗೆ : ಅರವಿಂದ ಮಾಲಗತ್ತಿ)
೮೭ ಕಾವ್ಯ ಕುಂಕುಮೆ-ಸಂ.ಡಾ.ಎಸ್.ಡಿ.ಶಶಿಕಲಾ-ಪುಟ-೧೩, ೧೪
೮೮ ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ-ಡಾ.ಜಿ.ಕೃಷ್ಣಪ್ಪ-ಪುಟ-೧೩೮
೮೯ ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ-ಡಾ.ಜಿ.ಕೃಷ್ಣಪ್ಪ-ಪುಟ-೧೩೯
೯೦ ನಮ್ಮಜ್ಜಿ ಅವ್ವ ನನ್ನಾಕೆ-ಡಾ.ಅರ್ಜುನಗೊಳಸಂಗಿ-ಪುಟ-೧೦

ಅರ್ಜುನ ಗೊಳಸಂಗಿಯವರು 'ಸ್ವಾದರತ್ತಿಯ ಸುತ್ತುಂಗರ' ಕವನದಲ್ಲಿ ತನ್ನ ಸಂಗಾತಿಯನ್ನು ವರ್ಣಾತೀತವಾಗಿ ಚಿತ್ರಿಸಿದ್ದಾರೆ. ಜಾನಪದದಲ್ಲಿ 'ಹೆತ್ತವರಿಗೆ ಹೆಗ್ಗಣ ಮುದ್ದು ಕಟಗೊಂಡವನಿಗೆ ಕ್ವಾಡಗ ಮುದ್ದು' ಎನ್ನುವಂತೆ ಕವಿಯ ವರ್ಣನೆಯನ್ನು ಕಂಡಾಗ ತನ್ನ ಸಂಗಾತಿಯನ್ನು ಯಾರು ಅವಳ ಹಾಗಿಲ್ಲ, ಅಷ್ಟು ರೂಪವತಿ, ಚಲುವೆ, ಚಂದಿರನ ಬಣ್ಣಕ್ಕೆ ಹೋಲಿಕೆ ಕವಿಯು ಅಗಣಿತವಾಗಿ ವರ್ಣಿಸಿರುವಂತಹದ್ದು ಇವರಿಂದ ಗೊತ್ತಾಗುತ್ತದೆ. ತನ್ನ ಸ್ವಾದರತ್ತಿಯು ಉಂಗರ ಕೊಡದಿದ್ದಾಗ ಕವಿಯು ತನ್ನ ಸಂಗಾತಿಯಿಂದ ಅಗಲಿದಾಗ ಸಹಿಸಿಕೊಂಡ ಅಗಲಿಕೆಯ ವೇದನೆಯಾಗಿದೆ. ಅಪ್ಸರೆ, ರೂಪವತಿ ಲಕ್ಷಣಗಳನ್ನು ಸಂಗಾತಿಯಲ್ಲಿ ಕಂಡು ವರ್ಣಿಸಿದ್ದಾರೆ. ಅರ್ಜುನ ಗೊಳಸಂಗಿಯವರ ಕವನವನ್ನು ನೋಡಿದಾಗ ಒಂದೆಡೆ ಜನಪದ ಗರತಿ ತನ್ನ ಗಂಡನ ಪ್ರೀತಿಯ ಅನ್ಯೋನ್ಯತೆ ಸಂಬಂಧವನ್ನು ಕುರಿತು ವರ್ಣನೆ ಮಾಡುವುದನ್ನು ಕಾಣುತ್ತೇವೆ.

"ಹಚ್ಚಡದ ಪದರಾಗ ಅಚ್ಚ ಮಲ್ಲಿಗೆ ಹೂವ
ಬಿಚ್ಚಿ ನನ ಮ್ಯಾಲ ಬಗೆವಂಥ! ರಾಯರನ
ಬಿಟ್ಟ್ಯಾಂಗ ಬರಲಿ ಹಡೆದವ್ವ॥
ಹಾಸೀಗಿ ಹಾಸೆಂದ ಮಲ್ಲಿಗೀ ಮುಡಿದಿಯೆಂದಾ
ಬ್ಯಾಸತ್ತರ ಮಡದಿ ಮಲಗೆಂದಾ। ನನರಾಯ
ತನ್ನ ನೋಡಿ ತವರ ಮರಿಯೆಂದಾ॥"[೯೧]

ಸಂಸಾರವೆಂಬ ನೌಕೆ ಸಾಗಿಸಲು ಗಂಡ ಹೆಂಡತಿ ಎಷ್ಟು ಮುಖ್ಯವೋ ಅವರಿಬ್ಬರ ಮಧ್ಯೆ ಪ್ರೀತಿ ವಿಶ್ವಾಸವೂ ಅಷ್ಟೇ ಮುಖ್ಯವಾದ ಅಂಶವಾಗಿದೆ ಎನ್ನುವಂತಹ ಮಾತನ್ನು ಅರ್ಜುನ ಗೊಳಸಂಗಿಯವರು 'ಸ್ವಾದರತ್ತಿಯ ಸುತ್ತುಂಗರ' ಎಂಬ ಕವನದಲ್ಲಿದೆ. "ಹೆಣ್ಣು ತನ್ನ ತವರು ಬಿಟ್ಟು ಗಂಡನ ಮನೆಗೆ ಬಂದಾಗ, ಅವಳು ನಂಬಿ ಬರುವ ಜೀವ ಗಂಡ, ಅವಳನ್ನು ಸರಿಯಾಗಿ ಅರ್ಥಮಾಡಿಕೊಂಡು ಸಂಸಾರ ಮಾಡಿದರೆ ಹೆಣ್ಣು ತವರು ಮನೆಗೆ ಬರಲು ಇಷ್ಟ ಪಡುವುದಿಲ್ಲ."[೯೨] ಗೊಳಸಂಗಿಯವರ ಸಂವಾದ ಗೀತೆಯಾದ 'ಗಂಡ ಹೆಂಡರ ಜಗಳ ಉಂಡು ಮಲಗೋತನಕ' ಕವಿತೆಯಲ್ಲಿ

---

೯೧ ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಜನಪದ-ಸಂ.ಡಾ.ಆರ್.ಸುನಂದಮ್ಮ-ಪುಟ-೧೬

೯೨ ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಜನಪದ-ಸಂ.ಡಾ.ಆರ್.ಸುನಂದಮ್ಮ-ಪುಟ-೧೬

"ತಾಳಿ ಕಟ್ಟಿದ ನನ ಗಂಡ ನೀತಾಳಿ ಗೋಳ ಕೇಳ
ತಾಳಿ ಗೋಳ ಕೇಳ
ನನ ಬದುಕೊಂದು ಕೀಳ
ಅತ್ತಿ ಮಾವ ನನ್ನ ಹೊಡದ ಬಡದರ
ಕೇಳೋರು ಯಾರ್ಧೇಳ
ಕೇಳೋರು ಯಾರ್ಧೇಳ ?
ನೀ ನನ್ನ ಗಂಡ ಆದ್ರ ಕೇಳ."[೯೩]

'ಗಂಡ ಹೆಂಡಿರ ಜಗಳ ಗಂಧ ತೀಡಿದ್ದಂಗ' ಅದಕ್ಕೆ ಎಲ್ಲಾ ಸಮಯ, ಸಂದರ್ಭದಲ್ಲೂ ಹೆಂಡತಿಗೆ ಗಂಡನೆ ಆಸರೇ ಅತ್ತೆ-ಮಾವ, ನಾದಿನಿ ಮೈದುನರು ಹೇಗಿದ್ದರೇನು? ಗಂಡ-ಹೆಂಡತಿ ಪ್ರೀತಿಯಿಂದ ಇರಬೇಕು. ಅಂದಾಗ ಸಂಸಾರ ನೌಕೆ ಸುಗಮವಾಗಿ ಸಾಗಲು ಸಾಧ್ಯವಾಗುವುದು. ಇವರ ಕವನಗಳಲ್ಲಿ ಹೆಂಡತಿ, ಪ್ರೇಯಸಿ, ಗೆಳತಿ ಎನ್ನುವ ಮಾತುಗಳು ಹೆಚ್ಚು ಕಂಡು ಬರುತ್ತವೆ.

'ಮಾಲಗತ್ತಿಯವರ 'ಅಮೃತ ಮತಿ ಪಲಾಪ' ಅಮೃತ ಮತಿ ಯಶೋಧರ ರಾಜನಿಂದ ತನಗೆ ಬೇಕಾದ ಪ್ರೀತಿ ಸುಖವನ್ನು ಪಡೆದಿರಲಿಲ್ಲ. ಅದಕ್ಕಾಗಿ ಅವಳು ಮಾವುತನಲ್ಲಿ ಒಂದಾಗುತ್ತಾಳೆ. ಆದರೆ ಅದು ಪಾಪ, ತಪ್ಪು ಎಂದು ದಲಿತ ಕವಿಗಳ ವಾದವಾಗುತ್ತದೆ. ಪುರುಷ ಪ್ರಧಾನ ಸಮಾಜ ತನ್ನ ಸ್ವಾರ್ಥ ಕೇಂದ್ರಿತ ಭೋಗ, ದಾಹ, ಸುಖದ ತೃಷೆಗಾಗಿ ಅವಳ ಆಸೆ ಅನಿಸಿಕೆಗಳನ್ನು ಸಂವೇದನೆ ಸ್ಪಂದನಗಳನ್ನು ಅರಿಯದೆ ಕಾಲಾನುಕಾಲದಿಂದ ತುಳಿಯುತ್ತ ಬಂದ ಪರಿಣಾಮ ಅಮೃತಮತಿಯಂಥ ಸ್ತ್ರೀಯರು ತಮ್ಮ ಒಡಲಾಳದ ಹಾಡು ಹಾಡಿಕೊಳ್ಳಬೇಕಾಗುವುದು ಅಗತ್ಯವೂ ಅನಿವಾರ್ಯವೂ ಆಗಿದೆ. ಡಾ. ಸದಾಶಿವ ದೊಡಮನಿ ಯವರು ತಮ್ಮ ಚಲುವೆ ಎಂಬ ಕವಿತೆಯಲ್ಲಿ ಅವಳನ್ನು ಹೇಗೆ ಬಣ್ಣಿಸಿದ್ದಾರೆ.

"ನಿನ್ನ ನೋಡುವ ಕಂಗಳು
ಮರೆತು ಕೂಡ ರೆಪ್ಪೆ ಒಡೆಯಲಾರವು
ನೀನು ಎದುರಾದರೆ ....................
ಚಟ್ಟಕ್ಕೇರಿದವನು ಕೂಡಾ
ಒಂದು ಕ್ಷಣ ಕಣ್ಣು ಬಿಡುತ್ತಾನೆ."[೯೪]

ದಲಿತ ಕವಿಗಳಿಗೆ ತಮ್ಮ ಹೆಣ್ಣು ಮಕ್ಕಳು ಶ್ರೇಷ್ಠವಾಗಿ ತಮ್ಮ ಹೆಂಡತಿ, ಪ್ರೇಯಸಿ, ಗೆಳತಿಯರ ಬಗ್ಗೆ ಆತ್ಮ ಗೌರವವನ್ನು ಹೊಂದಿದ್ದರು. ದಲಿತ ಕವಿಗಳು ತಮ್ಮ ಹೋರಾಟದ

---

[೯೩] ನಮ್ಮಜ್ಜಿ ಅವ್ವ ನನ್ನಾಕೆ-ಡಾ.ಅರ್ಜುನ ಗೊಳಸಂಗಿ-ಪುಟ-೧೪
[೯೪] ನೆರಳಿಗೂ ಮೈಲಿಗೆ-ಡಾ. ಸದಾಶಿವ ದೊಡಮನಿ -ಪುಟ-೩೪

ಜೊತೆಗೆ ಗುಂಪುಗಾರಿಕೆಯಲ್ಲಿ ಹೆಣ್ಣು ಮಕ್ಕಳನ್ನು ಪ್ರೀತಿಸುವ ಮನೋಭಾವವನ್ನು ಬೆಳಸಿಕೊಂಡಿರುವ ದೃಷ್ಟಿಕೋನವನ್ನು ಇಲ್ಲಿ ಕಾಣುತ್ತೇವೆ. ಕೆಲವು ಸಂದರ್ಭ ಸನ್ನಿವೇಶಗಳನ್ನು ನೋಡಿದಾಗ ದಲಿತ ಬಂಡಾಯ ಸಾಹಿತ್ಯದ ಘಟ್ಟದಲ್ಲಿ ಕಾವ್ಯವೆನ್ನುವುದು ಸಮಾಜದಲ್ಲಿಯ ಮುಖವಾಣಿಯಾಗಿ, ಹೆಣ್ಣು ಮಕ್ಕಳ ಒಡಲಾದ ನೋವಿನ ಧ್ವನಿಯಾಗಿ ಸಶಕ್ತವಾಗಿ ಅನಾವರಣಗೊಂಡಿದ್ದನ್ನು ಕಾಣುತ್ತೇವೆ.

ಹೀಗೆ ದಲಿತ ಕವಿ ಕವಯತ್ರಿಯರು ಬದುಕಿನ ಕಥೆ-ವ್ಯಥೆ-ಕಷ್ಟ, ನೋವು, ನಲಿವು, ಅಸಹನೆ, ಆಸೆ, ಆಕಾಂಕ್ಷೆ ಇತ್ಯಾದಿಗಳನ್ನು ತಮ್ಮ ಕವಿತೆಗಳಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸುವ ಸಾರ್ಥಕತೆಯನ್ನು ಅವರ ಕಾವ್ಯ, ಕೃತಿಗಳನ್ನು ಅವಲೋಕಿಸಿದಾಗ, ಅಧ್ಯಯನಕ್ಕೊಳಪಡಿಸಿದಾಗ ನಮ್ಮ ಅರಿವಿಗೆ ಬರುತ್ತದೆ. ಹೀಗಾಗಿ ದಲಿತ ಕಾವ್ಯವೆಂದರೆ ಅದು ತಾಜಾ ಅನುಭವಗಳ, ಅಭಿವ್ಯಕ್ತಿ. ಇಲ್ಲಿ ಇಡೀ ಬದುಕೇ ಅನಾವರಣಗೊಂಡಿದೆ. ಹೊಸ ಲೋಕವನ್ನು ಸಾಹಿತ್ಯ ಲೋಕದಲ್ಲಿ ಉಂಟು ಮಾಡಿದೆ.

ದಲಿತ ಕವಿಗಳಿಗೆ ಸಾಮಾಜಿಕವಾಗಿ ಮಾನವೀಯ ಬದುಕು, ಅಸ್ತಿತ್ವ, ಗೌರವ ತುಂಬ ಅಗತ್ಯವೂ ಅನಿವಾರ್ಯವೂ ಆಗಿತ್ತು. ಹೀಗಾಗಿ ಕೌಟುಂಬಿಕ ನೆಲೆಯಲ್ಲಿ ಪುರುಷರು ಮಹಿಳೆಯರನ್ನು ಚಿತ್ರಿಸಿದ್ದು ಅಪರೂಪ. ಅವಳನ್ನು ಅವರು ಮನುಷ್ಯ ಸಂಬಂಧಿ ನೆಲೆಯಲ್ಲಿಯೆ ಕಂಡಿದ್ದಾರೆ. ಸ್ಫೂರ್ತಿಯ ಅಧಿದೇವತೆ ಎಂದೇ ಭಾವಿಸಿದ್ದಾರೆ. ಇದಕ್ಕೆ ಡಾ. ಸಿದ್ಧಲಿಂಗಯ್ಯನವರ 'ಕ್ರಾಂತಿ ಕನ್ಯೆ' ಡಾ. ಸತ್ಯಾನಂದ ಪಾತ್ರೋಟರ 'ಕರಿಯ ಕಟ್ಟಿದ' ಕವನ ಸಂಕಲನದಲ್ಲಿಯ ಅನೇಕ ಕವಿತೆಗಳು ಹಾಗೂ ಡಾ. ಅರ್ಜುನ ಗೊಳಸಂಗಿಯವರ 'ಸ್ವಾದರತ್ತೆಯ ಸುತ್ತುಂಗುರ' 'ನನ್ನವ್ವ ಅಜ್ಜಿ ನನ್ನಾಕೆ' ಮೊದಲಾದ ಕವಿತೆಗಳನ್ನು ಉದಾಹರಿಸ ಬಹುದು.

ಆಧುನಿಕ ಸಮಕಾಲೀನ ಸಂದರ್ಭದಲ್ಲಿ ಅನಕ್ಷರಸ್ಥ, ದಲಿತ ಮಹಿಳೆಯರು ತಮ್ಮ ಪುರುಷರಿಂದ ದೌರ್ಜನ್ಯಕ್ಕೆ ಒಳಗಾಗಿರುವುದುಂಟು. ಈ ಕುರಿತು ಕವಿತೆಗಳುರಚನೆಯಾದದ್ದು ತುಂಬಾ ಕಡಿಮೆ ಆದರೂ ಡಾ.ವಿನಯಾ, ಅನಸೂಯಾ ಕಾಂಬಳೆ ಮೊದಲಾದವರು ಈ ಕುರಿತು ಕವಿತೆಗಳನ್ನು ಬರೆದಿದ್ದಾರೆ. ಆದರೆ ಈ ಕುರಿತು ಚರ್ಚೆ ಚಿಂತನೆಗಳೇ ನಡೆದದ್ದೇ ಅಧಿಕ.

ಶೋಷಣೆ, ಹಿಂಸೆ ಎನ್ನುವುದು ದಲಿತ ಕೆಳವರ್ಗದ ಹೆಣ್ಣು ಮಕ್ಕಳನ್ನೆ ದೃಷ್ಟಿಯಲ್ಲಿರಿಸಿಕೊಂಡು ನಡೆದಿರುವುದಂತಹವೇ ವಿನಹ ಮೇಲ್ವರ್ಗದಲ್ಲಿಲ್ಲ. ಇದಕ್ಕೆ ಕಾರಣ ದಲಿತ ಹೆಣ್ಣು ಮಕ್ಕಳ ಕಿತ್ತು ತಿನ್ನುವ ಬಡತನ, ಅಸಹಾಯಕತೆ, ಅಂಧಶ್ರದ್ಧೆ ಇದನ್ನು ಮೇಲ್ವರ್ಗದವರು

ಹಣಬಲ, ಅಧಿಕಾರಬಲ ಬಳಸಿಕೊಂಡು ಅವರನ್ನು ಶೋಷಿಸಿದ್ದನ್ನು ಚರಿತ್ರೆಯ ಪುಟಗಳಿಂದ ತಿಳಿಯುತ್ತದೆ. ಆದರೆ ಇಂದಿನ ಆಧುನಿಕ ಸಂಕೀರ್ಣ ಸಂದರ್ಭದಲ್ಲಿ ಈ ಶೋಷಣೆ ದೌರ್ಜನ್ಯ ಎನ್ನುವುದು. ಅದರಲ್ಲೂ ಲೈಂಗಿಕ ಕಿರುಕುಳ ಯಾವುದೇ ಮೇಲು ಕೀಳು ಬೇಧಭಾವ ಎಣಿಸದೇ ಎಲ್ಲಾ ವರ್ಗದ ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವುದನ್ನು ಕಾಣುತ್ತೇವೆ. ಇದನ್ನು ಪ್ರಸ್ತುತ ಪ್ರಬಂಧದ ಎರಡು, ಮೂರು, ನಾಲ್ಕು ಮತ್ತು ಐದನೇಯ ಅಧ್ಯಾಯದಲ್ಲಿ ಅಲಲ್ಲಿ ಸಾಂದರ್ಭಿಕವಾಗಿ ವಿವೇಚಿಸಲಾಗಿದೆ.

* * *

ಅಧ್ಯಾಯ – ೫

# ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು

೫.೧ ಬಂಡಾಯ ಕವಿತೆಗಳಲ್ಲಿ ಅಕ್ಕ ಮಹಾದೇವಿ

೫.೨ ಬಂಡಾಯ ಕವಿತೆಗಳಲ್ಲಿ ಮಹಿಳಾ ಪೌರಾಣಿಕ ಪಾತ್ರಗಳು

೫.೩ ಬಂಡಾಯ ಕವಿತೆಗಳಲ್ಲಿ ಅವ್ವ

೫.೪ ಬಂಡಾಯ ಕವಿತೆಗಳಲ್ಲಿ ಮಹಿಳೆ ಮತ್ತು ಪರಂಪರೆ

೫.೫ ಬಂಡಾಯ ಕವಿತೆಗಳಲ್ಲಿ ಮಹಿಳಾ ಶೋಷಣೆ

೫.೬ ಬಂಡಾಯ ಕವಿತೆಗಳಲ್ಲಿ ಮಹಿಳಾ ಹೋರಾಟದ ನೆಲೆಗಳು

೫.೭ ಬಂಡಾಯ ಕವಿತೆಗಳಲ್ಲಿ ಮುಸ್ಲಿಂ ಮಹಿಳಾ ಸಂವೇದನೆ

೫.೮ ಬಂಡಾಯ ಲೇಖಕರ ಕವಿತೆಗಳಲ್ಲಿ ಮಹಿಳೆ

ಅಧ್ಯಾಯ – ೫

# ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು

ಇಡೀ ಪ್ರಪಂಚ ವೇಗವಾಗಿ ಸಂಚರಿಸುತ್ತಿದ್ದರೆ, ಭಾರತೀಯ ಮನಸ್ಥಿತಿ ಮಾತ್ರ ಹಳೆಯ ಮೌಲ್ಯಗಳಿಗೆ ಜೋತು ಬಿದ್ದಿದೆ. ಇದರಿಂದ ಪಾರಾಗುವ ಯತ್ನ ಮಹಿಳೆಯ ಒಟ್ಟಾರೆ ನಿಲುವಾಗಿದೆ. ಮಾರ್ಚ್ ೧೦-೧೧-೧೯೭೯ ರಂದು ಬೆಂಗಳೂರಿನಲ್ಲಿ ರಾಜ್ಯಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನ ನಡೆಯಿತು. ಬಂಡಾಯ ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಿದಾಗ ಮಹಿಳೆಯರು ಎಲ್ಲಾ ವಿಷಯಗಳಿಂದ ಹಿಂದುಳಿದವರು. "ಒಬ್ಬ ಕೂಲಿ ಮಾಡುವವನು ದಿನವೆಲ್ಲಾ ದುಡಿದು ತಂದರೂ ಹೊಟ್ಟೆಗಿಲ್ಲದೆ, ಬಟ್ಟೆಗಿಲ್ಲದೆ ವ್ಯಥೆಯಿಂದ ನರಳುತ್ತಿದ್ದಾನೆಂದರೆ, ಅದಕ್ಕೆ ಶ್ರೀಮಂತ ಅವನನ್ನು ಕೆಲಸ ಮಾಡದ ಸೋಮಾರಿ ಎಂದೂ ಮಠಾಧಿಪತಿ ಅದು ಅವನ ಕರ್ಮವೆಂದೂ ಬುದ್ಧಿ ಜೀವಿ ಅದು ಅವನ ಅಜ್ಞಾನವೆಂದೂ ತಮ್ಮ ತಮ್ಮ ದೃಷ್ಟಿಕೋನಕ್ಕನುಗುಣವಾಗಿ ಹೇಳುತ್ತಾರೆ. ಇವರೆಲ್ಲಾ ಹೀಗೆ ಹೇಳಿದರೂ ಈ ಹೇಳಿಕೆಗಳ ಹಿಂದಿನ ಆಲೋಚನೆ ಬಂಡವಾಳಶಾಹಿಯದೇ"[೧] ಬಂಡವಾಳಶಾಹಿ ಶೋಷಣೆಗೆ ಒಳಪಡಿಸಿ ಅವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳುವ ಅನೇಕ ಉದಾಹರಣೆಗಳು ಇವೆ. "೧೯ನೇ ಶತಮಾನದ ಜಮೀನುದಾರನೊಬ್ಬ ಮತ್ತೊಬ್ಬ ಜಮೀನುದಾರನಿಗೆ ತನ್ನ ಆಳಿನ ಹೆಂಡತಿಯನ್ನು ಮಾರಿದ ಗುಲಾಮ ಪದ್ಧತಿಯನ್ನು ಕುರಿತಂತೆ ದಾಖಲಾತಿಯನ್ನೊದಗಿಸುವ ತಾಮ್ರ ಶಾಸನವೂ ಗದ್ಯದಲ್ಲಿದ್ದರೂ ಗಣನೀಯವಾದದ್ದೆಂಬುದರಲ್ಲಿ ಅನುಮಾನವಿಲ್ಲ. ಶಾಸನಗಳು ಹೇಳಿ ಕೇಳಿ ಅರಸೊತ್ತಿಗೆಯ ಕಾನೂನು ಪಾಲನಾ ವಿಭಾಗಗಳಾಗಿ ಕೆಲಸ ಮಾಡಿದುದರಿಂದ ಅಲ್ಲಿ ದತ್ತಿ-ಧರ್ಮ, ಸ್ವಾಮಿ-ನಿಷ್ಠೆಗಳನ್ನುಳಿದರೆ ಬೇರೇನೂ ಕಾಣಸಿಗುವುದಿಲ್ಲ."[೨]

ಇಂತಹ ಉದಾಹರಣೆಗಳನ್ನು ನೋಡಿದಾಗ ಮಹಿಳೆಯು ತನ್ನ ಗಂಡನ ಸ್ವಾಮಿ ನಿಷ್ಠೆಗಾಗಿ ತನ್ನನ್ನು ಇನ್ನೊಬ್ಬರಿಗೆ ಸೇರಲು ಅನಿವಾರ್ಯವಾಗಿ ಸಮ್ಮತಿಸಿಕೊಳ್ಳುವುದು ಇವೆಲ್ಲ ಗಮನಿಸಿದಾಗ ಮಹಿಳೆ ದಲಿತರಲ್ಲಿ ದಲಿತಳಾಗುತ್ತಾಳೆ. ಅದಕ್ಕಾಗಿಯೇ ಮಹಿಳೆ ಬಂಡೆದ್ದು ಇಡೀ ಪ್ರಪಂಚದಲ್ಲಿ ತನ್ನ ಹಕ್ಕು ಬಾಧ್ಯತೆಗಳನ್ನು ಪಡೆಯಲು ಯತ್ನಿಸಿದ್ದಾಳೆ. ಈ ಬಂಡಾಯವೆಂಬ ಹೋರಾಟದ ಮೂಲಕವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹಾತೊರೆಯುತ್ತಿದ್ದಾಳೆ.

---

೧ ಕನ್ನಡ ಪ್ರತಿಭಟನೆ ಕಾವ್ಯ – ಸಂ.ಸಿ.ವೀರಣ್ಣ–ಪುಟ–೧೯೨೦

೨ ಕನ್ನಡ ಪ್ರತಿಭಟನೆ ಕಾವ್ಯ – ಸಂ.ಸಿ.ವೀರಣ್ಣ–ಪುಟ–೨೩

ಒಂದೆಡೆ ಜಿ. ಕೃಷ್ಣಪ್ಪನವರು "ಬಾಲಕಿಯಾಗಲಿ, ಪ್ರೌಢೆಯಾಗಲಿ, ಮುದುಕಿಯಾಗಲಿ ತನ್ನ ಮನೆಯಲ್ಲಿ ಕೂಡ ಸ್ವತಂತ್ರವಾಗಿ ಏನನ್ನು ಮಾಡಬಾರದು, ಗಂಡನು ದರಿದ್ರನಾಗಿದ್ದರೂ ಬೇರಡೆ ಸಂತೋಷವನ್ನು ಅರಸುವವನಾಗಿದ್ದರೂ ಒಳ್ಳೆಯ ಗುಣಗಳು ಇಲ್ಲದವನಾಗಿದ್ದರೂ ಹೆಂಡತಿಯು ಅವನನ್ನು ದೇವರಂತೆ ಪೂಜಿಸಬೇಕು. ಅವನು ಜೀವಂತವಿದ್ದಾಗಲೂ ಅವನು ಸತ್ತ ಮೇಲೂ ಪತಿವ್ರತೆಯಾಗಿದ್ದು ಗಂಡನಿಗೆ ನಿಷ್ಠಳಾಗಿಯೇ ಉಳಿಯಬೇಕು. ಆದರೆ ಗಂಡನಾದವನು ಹೆಂಡತಿಯ ಶವ ಸಂಸ್ಕಾರವಾಗುತ್ತಲೇ ಬೇಕಾದರೆ ಮತ್ತೆ ಮದುವೆಯಾಗಬಹುದು ಇಂತಹ ಮಾತುಗಳು ಹೆಣ್ಣು ಕುಲಕ್ಕೆ ಅಗೌರವವನ್ನು ಹಿಂಸಾತ್ಮಕ ವೇದನೆಯನ್ನು ಉಂಟು ಮಾಡುವಂಥವಾಗಿವೆ."[೩] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕೇವಲ ನಾಲ್ಕು ಗೋಡೆಗಳ ಮಧ್ಯೆ ಸಿಲುಕಿರುವ ಮಹಿಳೆಯ ಭಾವನೆಗಳು ಹೊರ ಪ್ರಪಂಚಕ್ಕೆ ಬರದೆ ದಫನಗೊಳ್ಳುತ್ತಿವೆ. ಅವಳಲ್ಲಿ ಏನೆಲ್ಲ ಪ್ರತಿಭೆ, ಸೃಜನಶೀಲತೆಯಿದ್ದರೂ ಅದು ಅಭಿವ್ಯಕ್ತಗೊಳ್ಳದೆ ಅಡುಗೆ ಮನೆಯಲ್ಲಿ ನಶಿಸುತ್ತಿದೆ. ಪುರುಷನಗಿಂತ ಮಿಗಿಲಾದ ಪಾಂಡಿತ್ಯವಿದ್ದರೂ ಸೀಮಿತ ವರ್ತುಲದಲ್ಲಿಯೇ ವ್ಯವಹರಿಸಬೇಕಾಗಿರುವುದು ಪರಿಸ್ಥಿತಿಯ ಅನಿವಾರ್ಯವಾಗಿದೆ. ಈ ತನ್ನೆಲ್ಲಾ ಭಾವನೆಗಳಿಗೆ ಕೊಳ್ಳೆಯಿಟ್ಟಿರುವ ಸಮಾಜದ ಬಗ್ಗೆ ವಿಷಾದ, ತೀವ್ರ ಕೋಪ ವ್ಯಕ್ತ ಪಡಿಸುವ ಸ್ತ್ರೀವಾದಿ ಕವಿತೆಗಳ ಮೂಲ ಭಿತ್ತಿ ಬಂಡಾಯವೇ ಆಗಿದೆ.

"ಎಲ್ಲಾ ಜಾತಿಗಳ ಸ್ತ್ರೀ ಸಮೂಹ ಸಾಮಾನ್ಯವಾಗಿ ಶೋಷಿತ ವರ್ಗವೇ ಜಗತ್ತಿನಲ್ಲಿ ಮೊಟ್ಟ ಮೊದಲ ಶೋಷಿತಳು ಮಹಿಳೆ ಎಂಬುದು 'ಆಗಸ್ಟ ಬೆವೆಲ್' ರವರ ಅಭಿಪ್ರಾಯ. ಮೇಲ್ಜಾತಿ, ಮಧ್ಯಮ ಜಾತಿ, ಕೆಳಜಾತಿ, ಮತ್ತು ಅಸ್ಪೃಶ್ಯ ಜಾತಿಗಳು ಎಂಬ ಸಾಂಸ್ಕೃತಿಕ ವ್ಯತ್ಯಾಸಗಳು ಮತ್ತು ವಿಭಿನ್ನ ರೂಢಿ ಪದ್ಧತಿಗಳು ಇರುವದರಿಂದ ಮಹಿಳಾ ಶೋಷಣೆಯ ರೂಪಗಳು ಬೇರೆ ಬೇರೆಯಾಗಿವೆ."[೪]

"ಆದರೆ ದ್ರಾವಿಡ ಜನಪದ ಗುರು ವರ್ಗದಲ್ಲಿ ಪುರುಷರಷ್ಟೇ ಸಮಾನ ಸ್ಥಾನ ಮಹಿಳೆಯರಿಗೂ ಇದೆ. ಗೌರಮ್ಮ, ದಾಸಮ್ಮ, ಜೋಗಮ್ಮ, ಒಡೇರಮ್ಮ, ಮಾತಂಗಿ ಮೊದಲಾದ ಗುರು ವರ್ಗ ಲಿಂಗ ತಾರತಮ್ಯಕ್ಕೆ ಒಳಗಾಗಿಲ್ಲ."[೫] ಮಹಿಳೆಗೆ ತನ್ನತನದ ಹುಡುಕಾಟವೇ

---

[೩] ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ-ಡಾ.ಜಿ.ಕೃಷ್ಣಪ್ಪ-ಪುಟ-೨೪

[೪] ದಲಿತ ಅಧ್ಯಯನ-ಸಂ.ಡಾ.ಟಿ.ಆರ್. ಚಂದ್ರಶೇಖರ್-ಪುಟ-೩೮ (ವರ್ಣ, ವರ್ಗ, ಜಾತಿ, ಲಿಂಗಭೇದ ಜಾಗತಿಕ - ಸಂಬಂಧಗಳು : ಎಸ್.ಎಸ್.ಹಿರೇಮಠ)

[೫] ದಲಿತ ಅಧ್ಯಯನ-ಸಂ.ಡಾ.ಟಿ.ಆರ್. ಚಂದ್ರಶೇಖರ್-ಪುಟ-೩೯

ಪಾರಂಪರಿಕ ಸಾಂಪ್ರದಾಯಿಕತೆಗೆ ತೋರುವ ಪ್ರತಿರೋಧ ಎನ್ನಬಹುದು. ಮಹಿಳೆಯಲ್ಲಿಯೂ ಅದ್ಭುತ ಶಕ್ತಿಗಳ ಖಜಾನೆಯಿದೆ. ಬೌದ್ಧಿಕ ಪ್ರೌಢಿಮೆಯಿದೆ. ಆದರೆ ಅದನ್ನು ಗುರುತಿಸುವಷ್ಟು ಸೌಜನ್ಯ ಸಮಾಜಕ್ಕಿಲ್ಲ. ಈ ಒಂದು ಹಿನ್ನೆಲೆಯಿಂದಲೇ ತನ್ನಲ್ಲಿರುವ ಸ್ವಂತಿಕೆಯ ಅದಮ್ಯ ಶಕ್ತಿ ಪುನಃ ಪುನಃ ಎಚ್ಚರಿಸುತ್ತಿದೆ. ಇಂಥ ಹೆಣ್ಣಿನ ಬಹುದೊಡ್ಡ ಕೊರಗು ಸ್ತ್ರೀವಾದಿ ಕವಿತೆಗಳ ಭಾಷೆಯಾಗಿದೆ.

ಜಾತಿ, ವರ್ಗ, ಸಮಾಜದ ಜೊತೆಗೆ ಹೆಣ್ಣು ಮನೆಯಲ್ಲಿಯು ಹೆಣ್ಣು ಗಂಡನ ಜೊತೆಗೆ ಇರುವಾಗ ಅಲ್ಲಿಯು ಅವಳು ಇನ್ನೊಬ್ಬರ ಅಧೀನವಾಗಿಯೇ ಇರಬೇಕು. ಅದಕ್ಕೆ ಜಾನಪದ ಗರತಿ ಈ ಸನ್ನಿವೇಶವನ್ನು ತ್ರಿಪದಿಯ ಮೂಲಕ ಹೇಳುತ್ತಾಳೆ.

> "ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗೆ ಕೊಡಬ್ಯಾಡ
> ಹೆಣ್ಣು ಹೋಗಾಗ ಅಳಬ್ಯಾಡ । ಹಡದವ್ವ
> ಸಿಟ್ಟಾಗಿ ಶಿವಗ ಬೈಬ್ಯಾಡ."[೧]

"ಹೆಣ್ಣು ತನ್ನ ತಾಯಿಗೆ ತನ್ನ ಅತ್ತೆಗೆ ಹೇಳುವಾಗ ಅಥವಾ ಅದೇ ವಿಷಯವನ್ನು ತಂದೆ, ಗಂಡ, ಅಣ್ಣ, ತಮ್ಮಂದಿರಿಗೆ ಹೇಳುವಾಗ ಹೆಣ್ಣು ಹುಟ್ಟುವ ಮನೆ ಒಂದಾದರೆ, ಸೇರುವುದು ಇನ್ನೊಂದು ಮನೆಗೆ. ಹೆಣ್ಣಿನ ಮನಸ್ಸಿನ ಭಾವನೆ ಆಸೆ ಆಕಾಂಕ್ಷೆಗಳೆಲ್ಲವೂ ತನ್ನ ಹೆತ್ತವಳೇ ಬಲ್ಲಳು ಎಂದು ಗ್ರಹಿಸುತ್ತಾಳೆ. ಕಾರಣ ತನ್ನ ತಾಯಿಯು ಹೆಣ್ಣಾಗಿ ಹುಟ್ಟಿ ಒಂದು ಮನೆಯಿಂದ ಇನ್ನೊಂದು ಮನೆಗೆ ಬರುವಾಗ ತಾನು ಅನುಭವಿಸುತ್ತಿರುವ ನೋವು, ಸಂಕಟ ಅನುಭವಿಸಿದವಳು ಆಗಿರುವುದರಿಂದ ಅವಳು ಹೆಚ್ಚಾಗಿ ತಾಯಿಗೆ ತನ್ನ ಅನುಭವವನ್ನು ಹೇಳಿಕೊಳ್ಳುತ್ತಾಳೆ."[೨]

ಮಹಿಳೆಯ ಬಿಡುಗಡೆಗಾಗಿಯೇ ಪ್ರತ್ಯೇಕ ಚಳವಳಿಗಳು ಹುಟ್ಟಿಕೊಂಡಿರುವುದು ಚರಿತ್ರೆಯಲ್ಲಿ ಕಾಣಿಸುವುದಿಲ್ಲ. ಧಾರ್ಮಿಕ, ಸಾಮಾಜಿಕ ಚಳುವಳಿಗಳು ಮಹಿಳೆಯ ಬಗ್ಗೆ ಉದಾರ ಮನಸ್ಸು ಹೊಂದಿರುವುದರಿಂದ ಆಕೆಯು ಹಕ್ಕಿನ ಬಗ್ಗೆ ಅರಿವು ಮೂಡಿಸಿದ್ದು ದಲಿತ-ಬಂಡಾಯದ ಸ್ತ್ರೀವಾದಿ ಕಾವ್ಯ. ಇಂಥ ಒಂದು ಮಾನಸಿಕ ಬಲದಿಂದಲೇ ಸಾಮಾಜಿಕ ಪೈಪೋಟಿ ನಡೆಸಲು ಸಾಧ್ಯವಾದದು. ಹಿಂದಿನಿಂದ ಎಲ್ಲ ನೋವುಗಳನ್ನು ಸಹಿಸುತ್ತ ಬಂದ ಮಹಿಳೆ ಇಂದು ತಿರುಗಿ ನೋಡುವ ಧೈರ್ಯ ತೋರುತ್ತಿದ್ದಾಳೆ. ತನ್ನ ಮೇಲೆ ಎಸಗುತ್ತಿರುವ ದೌರ್ಜನ್ಯಗಳನ್ನು

---

೧. ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ-ಜನಪದ-ಸಂ.ಡಾ.ಆರ್.ಸುನಂದಮ್ಮ-ಪುಟ-೧೨

೨. ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ-ಜನಪದ-ಡಾ.ಆರ್.ಸುನಂದಮ್ಮ-ಪುಟ-೧೪ (ಜನಪದ : ತ್ರಿಪದಿಗಳಲ್ಲಿ ಮಹಿಳಾ ಪ್ರತಿನಿಧಿಕರಣ-ಡಾ. ಸುಕನ್ಯಾ ಎಸ್. ಹಾವನೂರ)

ಪ್ರತಿಭಟಿಸುತ್ತಿದ್ದಾಳೆ. ಮತ್ತು ಬರವಣಿಗೆಯ ಮೊನಚಿನಿಂದ ಮಹಿಳೆಯ ಬಂಡಾಯ ಮತ್ತಷ್ಟು ತೀಕ್ಷತೆ ಪಡೆಯುತ್ತಿದೆ.

## ೫.೧ ಬಂಡಾಯ ಕವಿತೆಗಳಲ್ಲಿ ಅಕ್ಕ ಮಹಾದೇವಿ :

ಕನ್ನಡ ಲೇಖಕಿಯರನ್ನು ಮತ್ತೆ ಮತ್ತೆ ಕೆದಕುವ ಚಾರಿತ್ರಿಕ ಮಹಿಳೆ, ಇದುವರೆಗಿನ ಎಲ್ಲಾ ಮಹಿಳಾ ಕವಿ ಲೇಖಕಿಯರು ಪ್ರತಿಭಟನೆ ಸತ್ಯ, ಸಂವೇದನೆಗಳಿಗೆ ಮೂಲ ಜೀವದ್ರವ್ಯ ಅಕ್ಕಮಹಾದೇವಿ ಆಕೆಯ ಪ್ರಭಾವಕ್ಕೆ ಒಳಗಾಗದ ಕನ್ನಡ ಲೇಖಕಿಯರೇ ಇಲ್ಲ. ಅಷ್ಟರ ಮಟ್ಟಿಗೆ ಅಕ್ಕನ ವ್ಯಕ್ತಿತ್ವ ಮಹಿಳಾವಾದಿ ಚಿಂತಕರಿಗೆ ಪ್ರಭಾವ ಬೀರಿದೆ. ಹೀಗಾಗಿ ಸಾಮಾಜಿಕ ಮೌಲ್ಯಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸುವ ಅಕ್ಕಮಹಾದೇವಿ ಮಹಿಳೆಯ ಬಿಡುಗಡೆಯ ಪರ ಹೋರಾಡಿದ್ದು, ಜತೆಗೆ ಶಿವಶರಣರು ಸಮಾಜದಲ್ಲಿ ಮಹಿಳೆಯರಿಗೆ ಲಿಂಗಸಮಾನತೆ ತಂದುಕೊಡುವ ಹಿನ್ನೆಲೆಯಲ್ಲಿ ಹೋರಾಟಕ್ಕಿಳಿದರು. ಮತ್ತು ಹೆಣ್ಣನ್ನು ಜೀವಪರ ಹಿನ್ನೆಲೆಯಲ್ಲಿ ಕಂಡರು. ಹೀಗಾಗಿ ಭಾರತೀಯ ಯಾವ ಸಾಹಿತ್ಯವೂ ತೋರದಷ್ಟು ಸಾಮಾಜಿಕ ಕಾಳಜಿಯನ್ನು ವಚನ ಸಾಹಿತ್ಯ ತೋರಿದನ್ನು ಕಾಣುತ್ತೇವೆ. ಅದರಲ್ಲೂ ಮಹಿಳಾ ಸಮಾನತೆ ಕುರಿತು ಅದು ಹೊಂದಿರುವ ನಿಲುವು ಅತೀ ಮಹತ್ವದ್ದು. ಇಂಥ ವಚನ ಸಂಸ್ಕೃತಿಯ ಹಿನ್ನೆಲೆಯಿಂದ ಬಂದ ಅಕ್ಕನ ಬದುಕು ಮಹಿಳಾ ಕಾವ್ಯಕ್ಕೆ ಮೌಲಿಕ ಚಿಂತನೆಯನ್ನು ಒದಗಿಸಿದೆ. ಮಹಾದೇವಿ ಅಕ್ಕ ಸಂಸಾರ ಇವೆಲ್ಲವನ್ನು ತೊರೆದು ತನ್ನತನದ ಹುಡುಕಾಟದಲ್ಲಿ ಚೆನ್ನಮಲ್ಲಿಕಾರ್ಜುನನ್ನೆ ತನ್ನ ಗಂಡನೆಂದು ಹುಡುಕುತ್ತಾ ನಡೆದದ್ದು ಅಂದು ಮಾತ್ರವಲ್ಲ ಚಾರಿತ್ರಿಕವಾಗಿ ಇಂದು ಕೂಡಾ ಮಹತ್ವದಾಗಿದೆ. ಚ.ಸರ್ವಮಂಗಳ ರವರು ತಮ್ಮ ಒಂದು ಕವಿತೆಯಲ್ಲಿ

"ಗಟ್ಟಿಗಿತ್ತಿ ಕಣಕ್ಕಾ !
ಅಪ್ಪನೆಟ್ಟ ಆಲದ ಮರವ ತೊರೆದೆ
ಅರಿವೆ ಕಳಚಿ ಕೂಡಿದ್ದ ಬಿಟ್ಟು
ನೀನು ನೀನೆ ಆದೆ !
ಜಿಡ್ಡು ಗಟ್ಟಿದ ಹಣತೆಯ ಪತಿವ್ರತಾ
ಜ್ಯೋತಿಗೆ ನೀರು ಎರಚಿ – ಹೊರಟೆ
ಬಿಟ್ಟೆಯಲ್ಲೇ ತಾಯಿ
ಎಂಥ ದಿಟ್ಟ ಹೆಜ್ಜೆ ಇಟ್ಟೆ ನಮ್ಮವ್ವ"[೮]

---

[೮] ಅಮ್ಮನ ಗುಡ್ಡ–ಚ.ಸರ್ವಮಂಗಲಾ–ಪುಟ–೨

ಸ್ತ್ರೀ ಪರ ಮಾತನ್ನಾಡುವ ಯಜಮಾನ ಸಂಸ್ಕೃತಿಯನ್ನು ಪ್ರತಿಭಟಿಸುವ, ಸಾಂಪ್ರದಾಯಿಕ ವ್ಯವಸ್ಥೆಯನ್ನು ಪ್ರಶ್ನಿಸುವ ಮಹಿಳೆಗೆ ಮಾನಸಿಕ ಬಲ ಬಂದದ್ದೆ ಅಕ್ಕನಿಂದ. ಸಮಾಜದ ಎಲ್ಲ ಒತ್ತಡಗಳ ಮಧ್ಯೆ ಆಕೆ ತೋರಿದ ಅಲೌಕಿಕ ಧೈರ್ಯ ಅದ್ಭುತವಾದದ್ದು. ಇದನ್ನು ಪ್ರಮುಖ ಆಕರ್ಷಣೆಯಾಗಿ ಸ್ವೀಕರಿಸಿದ ಸರ್ವಮಂಗಳರಂತಹ ಲೇಖಕಿಯರು ಸಾಮಾಜಿಕ ಪ್ರತಿಭಟನೆಯನ್ನು ಸಮ್ಮತಿಸಿದ್ದಾರೆ. ಆ ಹಿನ್ನೆಲೆಯಲ್ಲಿ ಕ್ರಮಿಸಿದ್ದಾರೆ.

ರೂಢಿಗತ ವ್ಯವಸ್ಥೆಗೆ ಎದುರುಗೊಳ್ಳುವ ನಿಲುವು ಅಕ್ಕಮಹಾದೇವಿಯದು. ಪುರುಷ ಸಮಾಜ ನಿರ್ಮಿತ ಮೌಲ್ಯಗಳನ್ನು ವಿರೋಧಿಸಿ ತನ್ನ ಭಾವನೆಗಳಿಗೆ ತಕ್ಕಂತೆ ಬದುಕುವ ಅವಳ ನಿರ್ಧಾರ ಸರಿಯಾದುದು. ಸಮಕಾಲೀನ ವ್ಯವಸ್ಥೆಗೆ ಆಕೆಯ ನಿಲುವು ತದ್ವಿರುದ್ಧ ಎನಿಸಿರಬಹುದು. ಆದರೆ ಅವಳ ನಿರ್ಧಾರ ಸತ್ಯ ಪರವಾದದ್ದು. ಈ ರೀತಿಯ ಬಂಡಾಯ ಮನೋಧರ್ಮ ಸ್ತ್ರೀ ಜಗತ್ತಿನ ಸ್ವಂತಿಕೆಯ ಹಂಬಲ ವೃದ್ಧಿಸುತ್ತದೆ.

"ಭವದ ಗಂಡನನು ಒಲೆಯೊಳಗಿಟ್ಟು
ಭಾವದ ಗಂಡನನು ಹುಡುಕುತ್ತ
ಹೊರಟ ನಿನ್ನ ಖಂಡಿತವಾಗಿ
ಗಂಡರಾಮಿಯೆಂದು ಜರೆಯುತ್ತದೆ ಈ ಸಮಾಜ
ಬಸವಣ್ಣನ ಕಾಲದಲ್ಲಿದ್ದೆ ನೀನು
ಅದಕ್ಕೆಂದೆ ಬಚಾವಾದೆ : ಈಗ ಹುಟ್ಟಿದ್ದರೆ
ನೀನು ಹುಚ್ಚಾಸ್ಪತ್ರೆಯಲ್ಲಿರುತ್ತಿದ್ದೆ
ಅಥವಾ ಶರಣರೇ ಕಟ್ಟಿದ
ಅವರದ್ದೆ ಜೈಲಿನಲ್ಲಿರುತ್ತದೆ."[೯]

ಒಂದೆಡೆ ಅಕ್ಕನ ಬದುಕಿನ ಕಾಲ ಸಾಂಪ್ರದಾಯಿಕವಾಗಿ ಕ್ರೂರವೆನಿಸಿದರೆ, ಇನ್ನೊಂದೆಡೆ ಸದ್ಯದ ಪರಿಸ್ಥಿತಿಯ ವಾಸ್ತವಗಿಂತ ಅಂದಿನ ಪರಿಸರ ಜೀವನ ಉತ್ತಮವಾಗಿರಬಹುದು ಎಂಬ ಸಣ್ಣ ಆಶಯದಲ್ಲಿ ವರ್ತಮಾನದ ಸಾಮಾಜಿಕ ಕ್ರೌರ್ಯವನ್ನು ಅರಿಯಬಹುದಾಗಿದೆ. ಪ್ರಸ್ತುತ ವ್ಯವಸ್ಥೆಯಲ್ಲಿ ದಿನವೊಂದರಂತೆ ನಡೆಯುತ್ತಿರುವ ಮಹಿಳೆ ಮೇಲಿನ ದುಷ್ಕೃತ್ಯಗಳು ಜಗತ್ತನ್ನೆಲ್ಲ ತಲ್ಲಣಗೊಳಿಸಿವೆ. ಇಂಥದರಲ್ಲಿ ಅಕ್ಕ ಮಹಾದೇವಿ ೧೨ನೇಯ ಶತಮಾನದಲ್ಲಿ ನಿರ್ಭಯವಾಗಿ ಓಡಾಡಿರುವಂತಹ ಸಮಾಜ ಇದುವೇ ಎಂಬ ಅನುಮಾನ ಕವಯತ್ರಿಯಲ್ಲಿದೆ. ಅದಕ್ಕಾಗಿ ಅಕ್ಕನನ್ನೇ ವಿಚಾರಿಸುವ ಅವರು ತಮ್ಮ ಇನ್ನೊಂದು ಕವನವಾದ 'ಅಕ್ಕನಿಗೆ' ಪರಿಹಾರ ಕಂಡುಕೊಳ್ಳುವ ರೀತಿಯಲಿ ಮೂಡಿದೆ.

---

೯ ಅಕ್ಕ-ಸಂ.ಡಾ.ವಿಜಯಶ್ರೀ ಸಬರದ-ಪುಟ-೯೧.೯೨ (ಪಾತರಗಿತ್ತಿ ಪಕ್ಕಾ ಹಾರು ಹೋಗೆ ಅಕ್ಕ : ಸರಜೂ ಕಾಟ್ಕರ್)

"ಅಕ್ಕಾ
ನೀನು ಮಹಾದೇವಿಯಾಗಿ
ಮಲ್ಲಿಕಾರ್ಜುನನನ್ನು ಹುಡುಕುತ್ತಾ
ತಿರುಗಾಡಿದ್ದು ಇದೇ ನಾಡೆ ?
ಇಲ್ಲಾ
ಖಂಡಿತ ಇರಲಿಕ್ಕಿಲ್ಲ
ಈ ದುರ್ಯೋಧನರ ಮಧ್ಯೆ
ದುಶ್ಯಾಸನರ ನಡುವೆ
ನೀನು ಬತ್ತಲೆಯಾಗೇ
ಬದುಕಿದೆಯೆಂದರೆ
ನಮಗೆ ಭಯವಾಗುತ್ತಿದೆ."[೧೦]

"ಪುರುಷ ಪ್ರಧಾನ ಸಮಾಜದ ಚಿಂತನೆ ಆಶಯಗಳಿಗೆ ಅನುಗುಣವಾಗಿ ಸ್ತ್ರೀ ಪುರುಷರಿಗೆ ತನ್ನದೇಆದ ಲೋಕಗಳನ್ನೆ ಸೃಷ್ಟಿಸಲಾಗಿದೆ. ಅವರ ಜೀವಿತಾವಧಿಯುದ್ದಕ್ಕೂ ನಿಗದಿತವಾಗಿ ಬಿಡುವ ಪ್ರತ್ಯೇಕ ವಲಯಗಳನ್ನೂ ಕಲ್ಪಿಸಿ ಬಿಡಲಾಗಿದೆ. ಈ ವಲಯಗಳಲ್ಲಿನ ಹಕ್ಕು ಬಾಧ್ಯತೆಗಳನ್ನು ಸ್ತ್ರೀ ಪುರುಷರಲ್ಲಿ ಹಂಚಲಾಗಿದೆ. ಆದರೆ ಸಮಾನವಾಗಿಯೇನೂ ಅಲ್ಲ. ಬದಲಿಗೆ ಗಂಡಿಗೆ ಹಕ್ಕುಗಳನ್ನು ಹೆಣ್ಣಿಗೆ ಬಾಧ್ಯತೆಗಳನ್ನೂ ನಿಗದಿಪಡಿಸಲಾಗಿದೆ."[೧೧] ಇಂತಹ ಸಂದರ್ಭಗಳಲ್ಲಿ, ಸನ್ನಿವೇಶಗಳಲ್ಲಿ ದುಷ್ಕರ್ಮಿಗಳು ಇರುವಾಗ ಯಾವ ರೀತಿಯಲ್ಲಿ ನೀನು ಈ ವಿಷ ಜಂತುಗಳ ಮಧ್ಯೆ ತಿರುಗಾಡಿದೆ. ಅಕ್ಕ ಮಹಾದೇವಿ ತಿರುಗಾಡಿದ ಬಗೆ ತುಂಬಾ ವಿಚಿತ್ರವಾದದು. ಅಲ್ಲದೆ ಅಕ್ಕ "ಉಟ್ಟಿರುವ ಬಟ್ಟೆಗಳನ್ನು ಸೆಳೆದುಕೊಳ್ಳಬಹುದು ಆದರೆ ಮುಚ್ಚಿ ಮುಸುಕಿದ್ದ ನಿರ್ವಾಣವನ್ನು ಕೊಳ್ಳಲಾಗದು. ನಿರ್ವಾಣದ ಅವಸ್ಥೆ ಮುಕ್ತಾವಸ್ಥೆ ಆಗಲೇ ಅಕ್ಕನಲ್ಲಿ ಪ್ರಾಪ್ತವಾಗಿದ್ದು, ಚೆನ್ನಮ್ಮಲ್ಲಿಕಾರ್ಜುನನ ಬೆಳಕಾಗಿ ಅದು ಅವಳನ್ನು ಆವರಿಸಿಕೊಂಡಿತು. ಅದನ್ನು ಕಿತ್ತುಕೊಳ್ಳಲಾಗದೆಂಬುದನ್ನು ಆಕೆ ಹೇಳಿರುವ ರೀತಿಯಲ್ಲಿ ಅವಳ ಆಧ್ಯಾತ್ಮಿಕ ಸಾಧನೆಯ ಆಳ ಅಂತೆಯೇ ವ್ಯಕ್ತಿತ್ವದ ಘನತೆಗಳು ವ್ಯಕ್ತವಾಗಿವೆ."[೧೨] ಅದಕ್ಕೆ ವಿಜಯಶ್ರೀ ಸಬರದ ಅವರು ನೀನು ಬೆತ್ತಲೆಯಾಗಿ ಈ ದುಷ್ಟರ ಮತ್ತೆ ಹೇಗೆ ಅಲೆದೆ ಎನ್ನುತ್ತಾರೆ. ಆದರೆ ಅದಕ್ಕೆ ಅಕ್ಕ ಬೆತ್ತಲೆ ವಿಷಯಕ್ಕೆ ಸಂಬಂಧಿಸಿದಂತೆ ಹೀಗೆ ಹೇಳಿದ್ದನ್ನು ಕಾಣುತ್ತೇವೆ.

---

೧೦ ಬಂಡಾಯ ಕಾವ್ಯ-ಸಂ.ಬರಗೂರು ರಾಮಚಂದ್ರಪ್ಪ-ಪುಟ-೧೮೬
೧೧ ಸ್ತ್ರೀವಾದ-ಡಾ.ಎಚ್.ಎಸ್.ಶ್ರೀಮತಿ-ಪುಟ-೯೫
೧೨ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿ-ಡಾ.ಸರ್ವಮಂಗಳಾ.ಎಂಕುದರಿ-ಪುಟ-೨೧೧

"ನಾಣ ಮರೆಯ ನೂಲು ಸಡಿಲೆ ಸಡಿಲೆ ನಾಚುವರು ನೋಡಾ
ಗಂಡು ಹೆಣ್ಣೆಂಬ ಜಾತಿ
ಪ್ರಾಣದೊಡೆಯ ಜಗದೊಳಗೆ ಮುಳುಗುತ್ತ ತೆರಹಿಲ್ಲದಿರಲು
ದೇವರ ಮುಂದೆ ನಾಚಲೆಡೆಯುಂಟು ?
ಚನ್ನಮಲ್ಲಿಕಾರ್ಜುನಂಗೆ ಜಗವೆಲ್ಲ ಕಣ್ಣಾಗಿ ನೋಡುತ್ತಿರಲು
ಮುಚ್ಚಿ ಮರೆಸಬಹುದೇ ಹೇಳಯ್ಯಾ."[illegible]

ಒಂದೆಡೆ ಕವಯತ್ರಿ ಈ ದುಶ್ಯಾಸನರ ಮಧ್ಯೆ ಬಟ್ಟೆಯಿಲ್ಲದೆ ಇದ್ದೆ ಎಂದು ಕೇಳಿದರೆ ವಚನ ಸಾಹಿತ್ಯ ಸಂದರ್ಭದಲ್ಲಿ ಅಕ್ಕನನ್ನು ಇಡೀ ಪ್ರಪಂಚವೇ ಮಾತ್ರವಲ್ಲ ; ಆ ದೇವನಾದ ಚೆನ್ನಮಲ್ಲಿಕಾರ್ಜುನನೂ ನನ್ನನ್ನು ನೋಡುತ್ತಿದ್ದಾನೆ. ಅಂದಾಗ, ಬಟ್ಟೆ ಬರೆ ಎನ್ನುವ ಮುಚ್ಚುಗೆ ಯಾಕೆ? ಎಂದು ಹೇಳುತ್ತಾಳೆ. ಮುಂದುವರೆದು ಅಕ್ಕನ ಕುರಿತು ವಿಚಾರ ಹೀಗೆ ಬರುತ್ತದೆ.

"ಅನುಭವ ಮಂಟಪಕ್ಕೆ ಬರಿಸಿ
ಮುತ್ತುಗಿತ್ತು ವಿನಿಮಯ ನಡೆಸಿ
ವಿಚಾರಕ್ಕೆ ನಿಲ್ಲಿಸಿ
ಹೆಣ್ಣೆಂಬುದನ್ನು ಪದೇ ಪದೇ ನೆನಪಿಸುವ
ಈ ಮಳ್ಳಯ್ಯರನ್ನು ಕಂಡರೆ ವಾಕರಿಕೆಯ್ಯ."[illegible]

ವಚನ ಸಾಹಿತ್ಯದಲ್ಲಿ ಬರುವ ಅನುಭವ ಮಂಟಪದಲ್ಲಿ ಅಲ್ಲಮಪ್ರಭುದೇವರು ಎಲ್ಲಾ ಜಾತಿ, ವರ್ಗ, ವರ್ಣದವರಿಗೂ ಸಮಾನ ಅವಕಾಶಗಳನ್ನು ಕೊಟ್ಟಿದ್ದರು. ಜೊತೆಗೆ ಹೆಣ್ಣು ಗಂಡುಗಳಿಗೂ ಸಮಾನ ಸ್ಥಾನಮಾನಗಳನ್ನು ಕಲ್ಪಿಸಿದ್ದರು. ವಚನ ಸಾಹಿತ್ಯದಲ್ಲಿ ಅಥವಾ ಹನ್ನೆರಡನೆಯ ಶತಮಾನದ ಸಂದರ್ಭದಲ್ಲಿಯೇ ಅನುಭವ ಮಂಟಪಕ್ಕೆ ಉನ್ನತ ಸ್ಥಾನಕೊಟ್ಟ ವಿಷಯ ಇಡಿಯಾದ ಪ್ರಪಂಚಕ್ಕೆ ಗೊತ್ತಿರುವ ಸಂಗತಿ ಅಲ್ಲದೇ ಈ ಸಂದರ್ಭದಲ್ಲಿ ಶೂನ್ಯ ಸಂಪಾದನೆಗೆ ಅತಿ ಮಹತ್ವ ನೀಡಿದ ಸಂದರ್ಭ ಸನ್ನಿವೇಶವದು. ಹೀಗಿರುವಾಗ ಚ. ಸರ್ವಮಂಗಳ ಅವರು ಅದನ್ನೇ ಕೇಂದ್ರವಾಗಿಟ್ಟುಕೊಂಡು, ತಮ್ಮ ಕವಿತೆಯಲ್ಲಿ ಅಕ್ಕಮಹಾದೇವಿಯನ್ನು ಅನುಭವ ಮಂಟಪದ ಸನ್ನಿಧಿಯಲ್ಲಿ ನಿಲ್ಲಿಸಿ, ಅವಳ ವ್ಯಕ್ತಿತ್ವನ್ನು ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿದಲ್ಲಿ ತಾನು ಹೆಣ್ಣೆಂಬುದನ್ನು ಮತ್ತೆ ಮತ್ತೆ ನೆನಪಿಸಿದ್ದು, ವಾಕರಿಕೆಯ ಸಂಗತಿಯಾಗಿದೆ ಎನ್ನುತ್ತಾರೆ. ವಾಸ್ತವ ಜಗತ್ತಿನ ಬೆಳವಣಿಗೆಗಳನ್ನು ಗಮನಿಸಿದರೆ, ಸಾಮಾಜಿಕ ಬದುಕಿನ ಜೀವಂತ ಸಂಬಂಧಗಳು ಶಿಥಿಲ ಗೊಳ್ಳುತ್ತಿವೆ ಎಂದೆನಿಸುತ್ತದೆ. ಇಂತಹ ಒಂದು

---

[illegible] ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿ-ಡಾ.ಸರ್ವಮಂಗಳಾ.ಎಂಕುದಲ-ಪುಟ-[illegible]
[illegible] ವಚನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ ಮುಖಾಮುಖಿ-ಸಂ.ಡಾ.ವೀರಣ್ಣ ರಾಜೂರ-ಪುಟ-[illegible]

ಸಂಕೀರ್ಣಸಂದರ್ಭದಲ್ಲಿ ಹೆಣ್ಣು ತನ್ನ ಅಸ್ತಿತ್ವಕ್ಕಾಗಿ, ಅಕ್ಕನಂತಹ ದಿಟ್ಟ ಮಹಿಳೆಯ ನಿಲುವನ್ನು ಅನುಕರಿಸುವುದು ಅನಿವಾರ್ಯವಾಗಿದೆ. ವಚನ ಸಾಹಿತ್ಯದಲ್ಲಿ "ಅನುಭಾವಿಗಳೂ ಸಹ ಭಕ್ತಿಯ ಪರಮೋಚ್ಚ ಸ್ತರವನ್ನೇರಲು 'ಸತಿ ಭಾವ' ವನ್ನೇ ಮೊರೆ ಹೋಗಿದ್ದಾರೆಂದರೆ ಹೆಣ್ಣು-ಗಂಡಿನ ಒಲವು ದೈವಿಕವಲ್ಲದೇ ಮತ್ತೇನು ? ಶರಣಸತಿ – ಲಿಂಗಪತಿಯ ಸಮರ್ಪಣಾ ಭಾವವೇ ಭಕ್ತಿಯ ಅತ್ಯಂತ ಪ್ರಬಲ ಮಾಧ್ಯಮವಾಗಿರುವದಕ್ಕೆ ಅವರ ಅಹಂಕಾರ ನಿರಸನದ ಪ್ರೀತಿಯೇ ಕಾರಣವಾಗಿದೆ. "ಪ್ರೇಮ ಮತ್ತು ವೇದಾಂತಗಳು ಭಕ್ತಿಯ ಹಾಸು ಹೊಕ್ಕುಗಳು. ಒಂದು ಪ್ರವೃತ್ತಿ, ಇನ್ನೊಂದು ನಿವೃತ್ತಿ ಪ್ರವೃತ್ತಿಯ ಪರಿಚಯವಿಲ್ಲದವರಿಗೆ ನಿವೃತ್ತಿ ಸಾಧ್ಯವಾಗದು. 'ಪ್ರೇಮದಂತೆ ಬ್ರಹ್ಮವೂ ಮೈ ಮರೆಸುತ್ತದೆ' ಎಂದರು ವೇದಕಾಲಿನ ಋಷಿಗಳು. ಎರಡರಲ್ಲೂ ಸಮಾನ ಧರ್ಮಗಳಿವೆ. ಅರ್ಪಣೆ, ಪರವಶತೆ ಎರಡೂ ಒಂದಾಗುವುದು, ಐಕ್ಯವಾಗುವುದು ಪ್ರೇಮ-ಭಕ್ತಿಗಳಿಂದ ಮಾತ್ರ ಸಾಧ್ಯ ಎರಡರಲ್ಲೂ ಉತ್ಕಟ ಹಂಬಲವಿದೆ. ಅಸಹನೀಯಯಾತನೆ ಇದೆ ಜೀವನವನ್ನು ಹಿಂಡಿ, ಹಿಪ್ಪಿ, ಮಾಡಿ ಬಿಡುವ ತೀವ್ರ ಸಂಕಟವಿದೆ, ಜೊತೆಗೆ ಬದುಕಿನ ಸಮಸ್ತ ಸಂತೃಪ್ತಿಗಳನ್ನು ಬೊಗಸೆಯಲ್ಲಿ ತುಂಬಿ ತಂದು ತಲೆಯ ಮೇಲೆ ಸುರಿವ ಸಮೃದ್ಧಿಯೂ ಇದೆ, ಒಲವಿನಲ್ಲಿ ಏನಿದೆ ? ಏನಿಲ್ಲ ?"[೧೫] ಎಲ್ಲಾ ರೀತಿಯ ಅನುಭವಗಳನ್ನು ಉಳ್ಳ ಶರಣರು ಹಾಗೂ ವೇದ ಕಾಲದ ಋಷಿಗಳು ಸಮಾನವಾದ ಸತಿ-ಪತಿ ಭಾವವನ್ನು ವ್ಯಕ್ತಪಡಿಸಿದರು. ಹೀಗಾಗಿ ಬಂಡಾಯ ಸಾಹಿತ್ಯದ ಕವಿಗಳು ಮುಖ್ಯವಾಗಿ ಅನುಭವ ಮಂಟಪದ ಪ್ರಜ್ಞೆಯನ್ನು ಕೇಂದ್ರವಾಗಿಟ್ಟು ಕೊಂಡು, ಪ್ರತಿಭಟನಾ ಕವಿತೆಗಳನ್ನು ಬರೆಯತೊಡಗಿದರು.

ಶರಣರಲ್ಲಿ ಅಕ್ಕನ ಇರುವಿಕೆಯೇ ಬೇರೆಯಾಗಿ ಭವದ ಸುಖವನ್ನು ತ್ಯಜಿಸಿ ಹೊರಟವಳು ಅಕ್ಕ. "ತಾನು ಬೆಂಬತ್ತಿ ಕೈ ಹಿಡಿದ ಮಿಕ್ಕು, ಮೀರಿ ಹೋದ ಪತಿಯನ್ನು ಹಂಬಲಿಸುತ್ತಾ, ಹುಡುಕುತ್ತಾ ಶ್ರೀ ಶೈಲದ ತನಕವೂ ಸಾಗುವ ಈಕೆಯದು ದ್ವಿಧಾಭಾವದ ಜೊತೆಗೆ ಸಲೀಸಾದ ವ್ಯವಹಾರ"[೧೬] "ಅಕ್ಕಮಹಾದೇವಿಯದು ಸ್ತ್ರೀತತ್ವವನ್ನು ನಿರಾಕರಿಸುತ್ತಲೇ ಸ್ತ್ರೀತತ್ವವನ್ನು ಪ್ರೀತಿಸುವ ವ್ಯಕ್ತಿತ್ವ ಅವಳದು. ದೈಹಿಕ ಸ್ತ್ರೀ ತತ್ವವನ್ನಾಕೆ ತುಚ್ಛವಾಗಿ ಕಾಣುತ್ತಾಳೆ."[೧೭] ಅದಕ್ಕೆ ಅವಳು ಎಲ್ಲಕ್ಕಿಂತ ಭಿನ್ನವಾಗಿ ಕಾಣುತ್ತಾಳೆ.

---

೧೫ ಪ್ರಣಯಿನಿ-ಸಂ.ಶಶಿಕಲಾ ವೀರಯ್ಯ ಸ್ವಾಮಿ ಸುಕನ್ಯಾ ಮಾರುತಿ-ಪುಟ-೬

೧೬ ಮಾನಿಷಾದ-ಧರಣಿದೇವಿ ಮಾಲಗತ್ತಿ-ಪುಟ-೧೫೧

೧೭ ಮಾನಿಷಾದ-ಧರಣಿದೇವಿ ಮಾಲಗತ್ತಿ-ಪುಟ-೧೫೦

“ಉಡು ತಡಿ ಕಲ್ಯಾಣ ಕದಳಿಗೆ
ಕರುಳು ಬಳ್ಳಿಯು ಹಬ್ಬಿ
ಬಯಲು ಹಸಮಣೆಯಲ್ಲಿ
ಬತ್ತಲೆಗೆ ಅಕ್ಷತೆಯನ್ನಿಕ್ಕಿ
ಕೇಶಾಂಬರ ಹೊದ್ದಿ
ಅಕ್ಕ !
ತಕ್ಕ ವರದ ಅನ್ವೇಷಣೆಗೆ
ಇಹದ ಸಿಕ್ಕು ಹರಿದಿ
ಮಾಯಿಸಿದಿ ಮನದ ಮುಂದಣದ ಮಾಯದ ಹುಣ್ಣು
ತೆರೆದು ಅಂತರಂಗದ ಕಣ್ಣು.”[೧೮]

ಲೌಕಿಕ ಗಂಡನಾದ ಕೌಶಿಕನನ್ನು ತೊರೆದು, ಅಲೌಕಿಕ ಗಂಡನಾದ ಚೆನ್ನಮಲ್ಲಿಕಾರ್ಜುನನನ್ನು ಅರಿಸಿ ಹೊರಟ ಅಕ್ಕಾ, ಬೆತ್ತಲೆಯಾಗಿ ತನ್ನ ಕೇಶರಾಶಿಯಿಂದಲೇ ಮೈ ಮನ ಮುಚ್ಚಿ ಕೊಂಡು ಹೊರಟುದನ್ನು ಈ ಕವಿತೆ ಚಿತ್ರಿಸುತ್ತದೆ. ಅಲ್ಲದೆ ಸಾವಿಲ್ಲದ ರೂವಿಲ್ಲದ ಗಂಡನಿಗಾಗಿ ಅನ್ವೇಷಣೆಯಲ್ಲಿ ತೊಡಗಿದೆ.ಎಲ್ಲ ಕಟ್ಟಳೆಗಳನ್ನು ಹರಿದು, ಬಯಲಲ್ಲೇ ಆಧ್ಯಾತ್ಮಿಕ ಬದುಕ ಬೆಳಗಿಸಿದ್ದನ್ನು ಈ ಕವಿತೆ ಕಟ್ಟಿ ಕೊಡುತ್ತದೆ. ಇಲ್ಲಿ ಅಕ್ಕ ಮಾಯೆಯನ್ನು ಮೀರಿದ್ದು ಗಮನಾರ್ಹವಾಗಿದೆ.

ಕವಯತ್ರಿ ಶಶಿಕಲಾ ವೀರಯ್ಯಸ್ವಾಮಿಯವರು ತಮ್ಮ ‘ಪ್ರೇಮಿ’ ಎಂಬ ಕವಿತೆಯಲ್ಲಿ ಅಕ್ಕನನ್ನು ಪ್ರಶ್ನಿಸುವುದು ವಿಶಿಷ್ಟವಾಗಿದೆ. ಅದು ಹೀಗಿದೆ

“ಅಲ್ಲಮ ಪ್ರಭುಗಳ
ಅನುಭವ ಮಂಟಪ
ಶರಣರ ಸಂಗವ ತೊರೆದು
ಗಿಳಿ ಕೋಗಿಲೆಗಳಿಗೆ
ದಾರಿಯನು ಕೇಳುತ್ತಾ
ಗುಡ್ಡ ಬೆಟ್ಟ ದಟ್ಟಡವಿ
ಕಾಡುಗಳ ಸೀಳುತ್ತಾ
ಜನಗಳ ತೊರೆದು
ಕಾಡಿನ ಏಕಾಂತವನು
ಅರಸುತ್ತ ಹೊರಟಿದ್ದು
ಯಾತಕ್ಕಾಗಿ ಅಕ್ಕಾ?”[೧೯]

---

[೧೮] ದೃಷ್ಟಿ-ಡಾ.ಪ್ರಭುಖಾನಾಪುರೆ-ಪುಟ-೩೧
[೧೯] ಅಕ್ಕ-ಸಂ.ವಿಜಯಶ್ರೀ ಸಬರದ-ಪುಟ-೭೩ (ಪ್ರೇಮಿ - ಶಶಿಕಲಾ ವೀರಯ್ಯ ಸ್ವಾಮಿ)

ಎಂದು ಮಹಾದೇವಿಯನ್ನು ಕವಯತ್ರಿ ಶಶಿಕಲಾ ವೀರಯ್ಯಾ ಸ್ವಾಮಿ ಪ್ರಶ್ನಿಸುವ ಜೊತೆಗೆ ಅದಕ್ಕೆ ಕಾರಣವನ್ನು ಹುಡುತ್ತಾರೆ. ಮಹಾದೇವಿಗೆ ಇಹ ಲೋಕದಲ್ಲಿರುವ ಗಂಡಸರಲ್ಲಿ ಪ್ರೀತಿ ಇಲ್ಲ ಎಂದು ಗೊತ್ತಿತ್ತು. ಅದಕ್ಕಾಗಿ ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡ ಎಂದು ಎಲ್ಲವನ್ನೂ ತೊರೆದು ಮುಳ್ಳು, ಕಲ್ಲು, ಕಂಟಿ ಎನ್ನದೇ ಹೊರಟಳು. ತೊಗಲಿನ ಹಂಬಲವನ್ನು ಮರೆತು ಉಟ್ಟ ಬಟ್ಟೆ ಕಳಚಿದ್ದು ಗೊತ್ತು. ಆದರೂ ಕೂಡ ಕವಯತ್ರಿ ಇಲ್ಲಿ ಅಕ್ಕನಿಗೆ ಅಲ್ಲಮನ ಅನುಭವ ಮಂಟಪ, ಶರಣರ ಸಂಗವ ಬಿಟ್ಟು ಗಿಳಿ, ಕೋಗಿಲೆಗಳಿಗೆ ದಾರಿ ಕೇಳುತ್ತಾ ಬೆಟ್ಟ-ಗುಡ್ಡಗಳನ್ನು ದಾಟಿ ಒಬ್ಬೊಂಟಿಯಾಗಿ ಎಲ್ಲಿಗೆ ಹೊರಟೇ? ಯಾತಕ್ಕಾಗಿ ಹೊರಟೇ? ಎಂದು ಪ್ರಶ್ನಿಸುತ್ತಾರೆ. ಸ್ತ್ರೀ ಸಂವೇದನೆ ಅನುಭವ ಇಲ್ಲಿ ಗಾಢವಾಗಿರುವುದು ಕಂಡು ಬರುತ್ತದೆ.

"ಅಕ್ಕಾ !
ಕಾಣದ ಮಲ್ಲಿಕಾರ್ಜುನನ
ಅರಸುತ್ತ ಮತ್ತೆ ಸವೆಸುತ್ತ ದಾರಿ
ದಾರಿಯಾಗುಂಟ ಬಿದ್ದ ನಿಶೆಯು
ಅಳಿಯಲೇ ಇಲ್ಲ !
ಇಹದ ಸುಖವನು ತೊರೆದು
ಪರಕಾಗಿ ಪರದಾಡಿ
ಪರದ ಗುಂಗು ಹಚ್ಚಿದವರ
ಮೈ-ಮನಗಳ ಚುಚ್ಚಿದವರ
ಪರಕಾಯ ಪ್ರವೇಶ ಮಾಡಲಿಲ್ಲ ನೀನು!"[೨೦]

ಅಕ್ಕ ಮಹಾದೇವಿ ಚೆನ್ನಮಲ್ಲಿಕಾರ್ಜುನನ ಹುಡುಕುತ್ತಾ ಹೊರಟಳು. ನೀನು ನಡೆದು ಬಂದ ದಾರಿಯಲ್ಲಿ ಇರುವ ಗುರುತುಗಳು ಮಾತ್ರ ಇನ್ನೂ ಅಳಿಸಿಲ್ಲ. ಈ ಹುಚ್ಚು ಹಿಡಿಸಿದವರಿಗೆ ನೀನು ಬುದ್ಧಿ ಯಾಕೆ ಕಲಿಸಲಿಲ್ಲ? ಆ ದಾರಿ ತೋರಿದವರ ಕಾಯವನ್ನು ನೀನು ಏಕೆ ? ಪ್ರವೇಶಿಸಲಿಲ್ಲ, ಎಂಬುದು ವಿಜಯಶ್ರೀ ಸಬರದರ ಮನದ ಮಾತಾಗಿದೆ. ಜೊತೆಗೆ ಅಕ್ಕಾಮಹಾದೇವಿ ನಡೆದ ದಾರಿ ಸಂಕೀರ್ಣತೆಯಿಂದ ಕೂಡಿದ್ದು, ಎಂಬುದನ್ನು ಸೂಚ್ಯವಾಗಿ ಹೇಳುತ್ತಾರೆ.

ಅಕ್ಕಾಮಹಾದೇವಿ ನೆಲೆಸಿದ ಕಾಲ, ಸನ್ನಿವೇಶ, ಸಂದರ್ಭದ ವಿಕ್ಷಿಪ್ತತೆಯನ್ನು ನೆನೆದು, ಕವಯತ್ರಿ ಕೆ.ಷರೀಫಾರವರು 'ಕದಳಿಯ ಅಕ್ಕನಿಗೆ' ಕವಿತೆಯಲ್ಲಿ

---

[೨೦] ಅಕ್ಕ-ಸಂ.ವಿಜಯಶ್ರೀ ಸಬರದ-ಪುಟ-೬೨ (ಅಕ್ಕಮಹಾದೇವಿ ಒಂದು ನೆನಪು – ವಿಜಯಶ್ರೀ ಸಬರದ)

"ಕಲ್ಯಾಣದಿಂದ ಕದಳಿಯವರೆಗೆ
ಹಬ್ಬಿದ ಪಾಪಾಸುಕಳ್ಳಿಯ
ಚುಚ್ಚಿದ ಮುಳ್ಳುಗಳ
ಒಂದೊಂದೇ ಕಿತ್ತೆಸೆದು
ಅರಮನೆಯ ವೈಭೋಗ
ರಾಜನಂಕುಶವ ಮೆಟ್ಟಿ
ಶರಣರ ಸಂಗವ ಬಯಸಿ
ಕಲ್ಯಾಣದ ಬಾಗಿಲಲಿ
ಬಂದು ನಿಂತ ಅಕ್ಕನಿಗೆ
ನಿನ್ನ ಪತಿಯ ಕುರುಹು
ಹೇಳಿ ಒಳಗೆ ಬರಲು
ತಿಳಿಸಿದ ಅನುಭವ ಮಂಟಪದ
ಅಣ್ಣಂದಿರ – ಬಿರು ನುಡಿಗಳು"[೨೧]

ಎಲ್ಲವನ್ನೂ ತೊರೆದು ರಾಜ್ಯ, ರಾಜ ವೈಭೋಗ, ಆರಾಮ ಜೀವನ ಬಿಟ್ಟು ಕಲ್ಯಾಣದಿಂದ ಕದಳಿಯವರೆಗೆ ಹಲವು ನೋವುಗಳನ್ನು ಅನುಭವಿಸಿದ ಅಕ್ಕನಿಗೆ ಕೆ. ಶರೀಫಾರವರು ಅನುಭವ ಮಂಟಪದಲ್ಲಿಯ ಕಹಿ–ಸಿಹಿ ನುಡಿಗಳಿಂದ ನಿನಗೆ ಯಾವ ಅನುಭವವು ಆಗಲಿಲ್ಲವೆ, ಅದು ಯಾಕೆ? ನನಗೂ ಅಂತಹ ಸ್ಥಿತಿ ಬಂದೊದಗಿದೆ ಅದರಿಂದ ನಾನು ಮುಕ್ತಳಾಗಬೇಕೆಂದಿದ್ದೇನೆ ಎಂದು ಅಕ್ಕನೊಂದಿಗೆ ಪ್ರತಿಕ್ರಿಯಿಸುತ್ತಾಳೆ.

"ಏನೇ ಅನ್ನು ನಿನ್ನ ಅಚಲ ವಿಶ್ವಾಸಕೆ
ಶ್ರೀ ಶೈಲದುದ್ದಕ್ಕೂ ನಿಂತ ದಿಟ್ಟ
ನಿಲುವಿಗೆ ನಾನು ಮನಸೋತಿದ್ದೇನೆ ಕೊನೆಗೊಂದು
ಮಾತು ಕೇಳಲೇ ಅಕ್ಕ ?
ಒಂದಿರುಳಗಲಿದರೆ ತೆಕ್ಕೆ
ಸಡಲಿದ ಜಕ್ಕ ವಕ್ಕಿಯಂತಾಗುವ
ಬಂದಪ್ಪಿದರೆ ಅಸ್ಥಿಗಳು ನುಗ್ಗುನುರಿ
ಯಾಗ ಬೇಕೆನ್ನುವ ಆ ನಿನ್ನ ಚೆನ್ನ
ಮಲ್ಲಿಕಾರ್ಜುನನ ನನಗೊಮ್ಮೆ
ತೋರಿಸುವೆಯಾ ? ಮೂರ್ತರೂಪ
ಗಳ ಸೆರೆ ಬಿಡಿಸಿ ಸಾವಿಲ್ಲದ
ಕೇಡಿಲ್ಲದ, ರೂಹಿಲ್ಲದ ಆ ಚೆಲು
ವನನ್ನೊಮ್ಮೆ ಕಳುಸುವಿರಯಾ?"[೨೨]

---

೨೧ ಅಕ್ಕ–ಸಂ.ವಿಜಯಶ್ರೀ ಸಬರದ–ಪುಟ–೭೨ (ಕದಳಿಯ ಅಕ್ಕನಿಗೆ : ಕೆ. ಷರೀಫಾ)
೨೨ ನೀವು ಕಾಣಿರೆ ನೀವು ಕಾಣಿರೆ–ಎಚ್.ಎಸ್.ಮುಕ್ತಾಯಕ್ಕ–ಪುಟ–೬

ಅಕ್ಕನ ದಿಟ್ಟನಿಲುವು, ಅಚಲ ಆತ್ಮವಿಶ್ವಾಸಕ್ಕೆ ಮಾರುಹೋದ ಕವಯತ್ರಿ ಅಕ್ಕನ ಗುಣ ವ್ಯಕ್ತಿತ್ವನ್ನು ಮನಸಾರೆ ಮೆಚ್ಚಿಕೊಳ್ಳುತ್ತಾರೆ. ಅನಂತ ಸಖಿನಾದ ಆಧ್ಯಾತ್ಮಿಕ ಗಂಡನಾದ ಚೆನ್ನಮಲ್ಲಿಕಾರ್ಜುನನನ್ನು ಅರಸಿ, ಹೊರಟ ಅಕ್ಕನಿಗೆ ಕವಯತ್ರಿ ಈ ವಿರಾಟ ಮುಕ್ತಿಯನ್ನು ನನಗೆ ತೋರಿಸುವೆಯಾ? ಆ ಚೆಲುವನೊಮ್ಮೆ ಕಳುಸುವೆಯಾ? ಎಂದು ಕೇಳಿಕೊಳ್ಳುವ ಪರಿ ಇಲ್ಲಿದೆ.

ಕವಯತ್ರಿ ಎಚ್.ಎಸ್.ಮುಕ್ತಾಯಕ್ಕನವರು ತಮ್ಮ ಇನ್ನೊಂದು 'ಅಕ್ಕಾ' ಎಂಬ ಕವಿತೆಯಲ್ಲಿ ಅಕ್ಕನ ಆಗು ಹೋಗುಗಳು ನೆನಪಿಸಿಕೊಳ್ಳುತ್ತಾರೆ. ಹಾಗೂ ನಾವು ನಿನ್ನ ಹಾಗೆ ದಿಟ್ಟ, ಧೀರ, ಧೈರ್ಯವಂತೆ ಅಲ್ಲ ಎನ್ನುತ್ತಾರೆ.

"ಈಗ ನಾವೆಲ್ಲ ನಿನ್ನ ಧೈರ್ಯಕೆ ಮೆಚ್ಚುತ
ಮೂರ್ತರೂಪಗಳಲಿ ಪ್ರೀತಿ ಕಾಮ
ಕರುಣೆ ಕಾಣದೆ ಕಳವಳಿಸುತ್ತ ಅವರ
ಹಿಡಿತದಲಿ ಹಳವಂಡ ಕನಸ ಕಾಣುತ
ಬದುಕಿಗೆ ಬೆತ್ತಲೆಯಾಗದೆ ಅವರಡಿ
ಸುತ್ತ ಹೋಗುವ ಸೀರೆಗಳಲಿ ಹುದುಗುತ್ತ
ನಿನ್ನ ದಿಟ್ಟತನಕೆ ಅಚಲ ವಿಶ್ವಾಸಕೆ
ಮನದಲ್ಲೇ ಮೆಚ್ಚಿಕೊಳುತ ನಮ್ಮ ಕಾಲ
ಸರಪಳಿಗಳ ನೋಡುತ ಬಿಚ್ಚಲಾಗದ
ಹೇಡಿತನಕೆ ರೋಸುತ್ತ
ಸಾಯೆವು ಅಂತೆ ಬದುಕೆವು ಕೂಡ"[೨೩]

ಈ ಜಗತ್ತು ಹೆಣ್ಣನ್ನು ಎಂದೂ ವಾಸ್ತವ ಸ್ಥಿತಿಯಲ್ಲಿ ನೋಡದೆ ವೈಭವೀಕರಿಸಿ ಇಲ್ಲವೇ ತುಚ್ಛೀಕರಿಸಿ ಕಂಡಿದೆ. ನಶ್ವರವಾದ ಬದುಕನ್ನು ತ್ಯಜಿಸಿ ಶಾಶ್ವತ ಸುಖವನ್ನು ನೀನು ಪಡೆದುಕೊಂಡೆ. ಆ ನಿನ್ನ ಚೆಲುವನಿಗೆ ಒಲಿದಿರುವ ಔಚಿತ್ಯ ನಮಗೆ ತಿಳಿಯುವುದರಲ್ಲಿಯೇ ನಾವು ಮೂರ್ತ ರೂಪಗಳ ವಿಚಿತ್ರ ಸುಳಿಗಳಲ್ಲಿ ಬತ್ತಲೆಯಾಗಿ ಸಂಸಾರದ ಜಂಜಾಟದಲ್ಲಿ ಸಿಕ್ಕು ನರುಳುತ್ತಾ, ಕನವರಿಸುತ್ತಾ ಭ್ರಮನಿರಸನದಲ್ಲಿ ಅವಿಶ್ವಾಸದ ಪಂಜರದ ಗಿಣಿಯಾಗಿ ನಮ್ಮ ಹೃದಯಗಳ ಮೇಲೆ ನಿರಂತರ ಹೆಜ್ಜೆಗಳ ಮೆರವಣಿಗೆ ಒತ್ತೆಯಿಟ್ಟು ನಗುವ ಅಂಗಾಂಗಗಳು ಇದರ ಪದರು ಪದರುಗಳೇ ಸಿಕ್ಕು ಉಸಿರುಗಟ್ಟಿ ಹೋಗಿದ್ದೇವೆ ಎಂದು ಹೇಳುತ್ತಾ ತನ್ನ ಅಸಹಾಯಕ ಸ್ಥಿತಿಯನ್ನು ನಿವೇದಿಸಿಕೊಳ್ಳುವುದನ್ನು ಇಲ್ಲಿ ಕಾಣುತ್ತೇವೆ.

[೨೩] ನೀವು ಕಾಣಿರೆ ನೀವು ಕಾಣಿರೆ–ಎಚ್.ಎಸ್.ಮುಕ್ತಾಯಕ್ಕ–ಪುಟ–೧೨, ೧೩

"ಭಾರತೀಯ ಚರಿತ್ರೆಯಲ್ಲಿ ವೈದಿಕ ಕಾಲದಿಂದಲೂ ಮುಂದಿನ ಅವಧಿಯಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ಕೆಲವು ಮಹಿಳಾ ಮಣಿಗಳನ್ನು ಕಾಣಬಹುದು. ಆದರೆ ಕನ್ನಡ ಸಾಹಿತ್ಯ ಸಂಸ್ಕೃತಿಗೆ ಸಂಬಂಧಪಟ್ಟಂತೆ ಕಂತಿ ಎಂಬುವಳು 'ಕಂತಿ ಹಂಪನ ಸಮಸ್ಯೆಗಳು' ಎಂಬ ಕೃತಿಯನ್ನು ಹನ್ನೊಂದನೆಯ ಶತಮಾನದಲ್ಲಿ ರಚಿಸಿದ್ದು, ಅವಳೇ ಕನ್ನಡದ ಮೊದಲನೇ ಕವಯತ್ರಿ ಎನಿಸಿದ್ದಾಳೆ. ಆದರೆ ಅವಳ ಚಾರಿತ್ರಿಕ ಅಸ್ತಿತ್ವವೇ ಪ್ರಶ್ನಾರ್ಹವಾಗಿದೆ. ಕಂತಿಯ ಚಾರಿತ್ರಿಕ ಅಸ್ತಿತ್ವ ಸಾಬೀತಾದರೂ ಅವಳನ್ನು ಕನ್ನಡದ ಆದಿ ಕವಯತ್ರಿ ಎಂದು ಪ್ರತಿಷ್ಠಾಪಿಸುವ ಮೌಲಿಕ ಗ್ರಂಥ ಅವಳದಲ್ಲ ಎಂಬುದು ಗಮನಾರ್ಹ ಸಂಗತಿ. ಈ ಹಿನ್ನೆಲೆಯಲ್ಲಿ ಕನ್ನಡದ ಆದಿ ಕವಯತ್ರಿ ಎಂಬ ಗೌರವಕ್ಕೆ ಪಾತ್ರವಾಗಬಲ್ಲ, ಅದಕ್ಕೂ ಮೀರಿ ಸ್ತ್ರೀ ವಿಮೋಚನಾ ಹೋರಾಟದ ನೆಲೆಯಲ್ಲಿ ಪುರುಷ ಪ್ರಾಧಾನ್ಯತೆಯ ಎಲ್ಲ ಅತಿಕ್ರಮಗಳನ್ನು ಧಿಕ್ಕರಿಸಿ ನಿಂತ ಜಗತ್ತಿನ ಮೊದಲ ಮಹಿಳೆ ಎಂಬ ಗೌರವ ಕೂಡ ಅವಳ ಪಾಲಿನದು. ಪುರುಷ ಸಮಾನ ಅಥವಾ ಕೆಲವು ವಿಷಯಗಳಲ್ಲಿ ಪುರುಷನನ್ನು ಮೀರಿಸುವ ಸತ್ವ ಶಕ್ತಿಗಳಿಂದ ಕೂಡಿದ ವ್ಯಕ್ತಿತ್ವ ಹಾಗೂ ರಚನೆಗಳು ಅಕ್ಕಮಹಾದೇವಿಯಿಂದ ಮೂಡಿವೆ ಎಂಬುದನ್ನು ಕನ್ನಡ ಕಾವ್ಯ ಪರಂಪರೆ ಅಂಗೀಕರಿಸಿದೆ."[೨೪]

ಅಕ್ಕಮಹಾದೇವಿ ಇಡಿಯಾಗಿ ಹೆಣ್ಣು ಕುಲಕ್ಕೆ ಮಾದರಿಯಾಗಿ ನಿಲುತ್ತಾಳೆ. ಧೈರ್ಯ ಸಾಹಸಕ್ಕೆ ಹೆಣ್ಣುತನದ ಮೇಲೆ ಪುರುಷ ಮಾಡುವ ಅನೇಕ ಬಗೆಯ ಶೋಷಣೆ, ದಬ್ಬಾಳಿಕೆ ಇವೆಲ್ಲವುಗಳಿಗೆ ಪ್ರತಿಭಟಿಸಿ ತೊರೆದು ದಿಗಂಬರೆಯಾಗಿ ಒಬ್ಬ ಅಲೌಕಿಕ ಗಂಡನನ್ನು ಹುಡುಕುತ್ತಾ ದೈಹಿಕವಾದ ಮೋಹಕ್ಕೆ ಬಲಿಯಾಗದೇ ಬಟ್ಟೆಗಳನ್ನೇ ತೊರೆದು ಮುನ್ನಡೆದ ಏಕೈಕ ಧೀರ ಮಹಿಳೆ ಅಕ್ಕಮಹಾದೇವಿಯೇ ಆಗಿದ್ದಾಳೆ. ಹೀಗಾಗಿ ಅಕ್ಕನ ದಿಟ್ಟ ನಿಲುವು ಆತ್ಮಸ್ಥೈರ್ಯ, ಇಂದಿಗೂ ಎಂದಿಗೂ ಸ್ವೀಕಾರಾರ್ಹವಾಗಿದೆ.

## ೫.೨ ಬಂಡಾಯ ಕವಿತೆಗಳಲ್ಲಿ ಮಹಿಳಾ ಪೌರಾಣಿಕ ಪಾತ್ರಗಳು :

ಮಹಿಳೆಯ ಮೇಲಿನ ದೌರ್ಜನ್ಯ ಶೋಷಣೆ ಇಂದು ನಿನ್ನೆಯದಲ್ಲ. ಶತಮಾನಗಳಿಂದ ನಡೆದು ಬರುತ್ತಿದೆ. ಮಹಾಕಾವ್ಯಗಳಲ್ಲಿಯೂ ಕೂಡ ಸೀತೆಯನ್ನು ಸಂಶಯಕ್ಕೆ ಒಳಪಡಿಸಿದ್ದು, ದ್ರೌಪದಿಯನ್ನು ಪಣಕಿಟ್ಟು ಸೋಲಿಸಿದ್ದು, ವಸ್ತ್ರಹರಣ ಮಾಡಿದ್ದು ಎಲ್ಲವೂ ರಾಮಾಯಣ ಮತ್ತು ಮಹಾಭಾರತದಂತಹ ಮಹಾಕಾವ್ಯಗಳಲ್ಲಿ ಹೆಣ್ಣಿನ್ನು ಹಿಂಸಿಸಿದ್ದು, ಶಿಕ್ಷೆ ನೀಡಿದ್ದು ಕಂಡು ಬರುತ್ತದೆ.

---

[೨೪] ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿ–ಡಾ.ಸರ್ವಮಂಗಳಾ.ಎಂ.ಕುದರಿ–ಪುಟ–೫

"ಬಸುರಿ ಸೀತೆಯ ಅಗ್ನಿಯಂಥ ಅಡವಿಗೆ ಅಟ್ಟಿದ್ದು ಪ್ರಜೆಗಳಿಗಾಗಿ
ಗಂಡರೈವರು ಹೆಂಡತಿಯ ಪಣಕ್ಕಿಟ್ಟಿದ್ದು ಧರ್ಮಕ್ಕಾಗಿ
ಹರಿಶ್ಚಂದ್ರ ಹೆಂಡತಿಯ ಮಾರಿದ್ದು ಸತ್ಯಕ್ಕಾಗಿ
ಬುದ್ಧ ಮಧ್ಯರಾತ್ರಿಯಲ್ಲೆದ್ದು ಹೆಂಡತಿಯ ಬಿಟ್ಟು
ಹೋಗಿದ್ದು ಜ್ಞಾನೋದಯಕ್ಕಾಗಿ
ದೇವಾನು ದೇವತೆಗಳಿಂದ
ಹುರಿಗೊಂಡ ಸಂಕೋಲೆಯ ತುದಿ
ನಿಮ್ಮ ಕೈಯಲ್ಲಿರುವುದು ನಿಚ್ಚಳವಾಗಿ ಕಾಣುತ್ತಿದೆ."[೨೫]

"ಚರಿತ್ರೆಯನ್ನು ಸ್ತ್ರೀಯ ಕಣ್ಣಿನಿಂದ ನೋಡುವ ಈ ಕವನ ಪುರುಷರು ಮಹಿಳೆಯರನ್ನು ತಮ್ಮ ಕೀರ್ತಿ, ಕಾಮನೆ, ಧರ್ಮ, ಸ್ವಾರ್ಥ, ಸಾಧನೆಗಳಿಗಾಗಿ ಹೇಗೆ ಆಕೆಯನ್ನು ಜೀವ ರಹಿತ ಪ್ರಾಣಿಯನ್ನಾಗಿ ಬಳಸಿಕೊಂಡರು ಎಂಬುದನ್ನು ಅಲ್ಲದೆ, ನಮ್ಮೆಲ್ಲಾ ಮಹಾಕಾವ್ಯಗಳ ಮರು ವಿಮರ್ಶೆಗೆ ಕರೆ ಕೊಡುತ್ತದೆ. ಪೋಲಂಕಿಯವರ 'ಸೀತಾಯಣ' ಪುಸ್ತಕ ಈ ದಿಕ್ಕಿನಲ್ಲಿ ಮೂಡಿದ ಅಂಥ ಪ್ರಯತ್ನವೆನ್ನಬಹುದು"[೨೬]

ಹೆಣ್ಣಿಗೆ ಇರುವ ನೋವುಗಳ ಪರಂಪರೆ ಇಂದು ನಿನ್ನೆಯದಲ್ಲ. ಅವು ಅನಾದಿ ಕಾಲದಿಂದಲೂ ಬಂದವು. ಅದಕ್ಕಾಗಿ ಇಲ್ಲಿ ಕವಯತ್ರಿಯರು ಪೌರಾಣಿಕ ಗ್ರಂಥ ಕಥೆಗಳಲ್ಲಿ ಬರುವ ಸೀತೆ, ದ್ರೌಪದಿ, ಅಹಲ್ಯೆ, ಕುಂತಿ, ಶಕುಂತಲೆಯಂಥ ಪಾತ್ರ ಪ್ರತಿಮೆಗಳನ್ನು ದುರ್ಗಿ, ಹುಲಿಗೆಮ್ಮದಂತಹ ದೇವಿ ಪಾತ್ರಗಳನ್ನು ಪೌರಾಣಿಕ ಐತಿಹಾಸಿಕ ಹಿನ್ನೆಲೆಯಲ್ಲಿ ಚಿತ್ರಿಸಿದ್ದನ್ನು ಕಾಣುತ್ತೇವೆ.

ಹೀಗೆ ಮಹಾಕಾವ್ಯಗಳಲ್ಲಿ ಕಂಡು ಬರುವ ವಸ್ತು ಸ್ಥಿತಿಯನ್ನು ಮರು ವ್ಯಾಖ್ಯಾನಕ್ಕೆ ತೊಡಗಿಸಿ ಸತ್ಯದ ಹೊಳವುಗಳನ್ನು ಪತ್ತೆ ಹಚ್ಚಿದ ಲೇಖಕರು ಸಾಹಿತ್ಯದಲ್ಲಿ ಹೊಸ ಅನ್ವೇಷಣೆಯ ಕಲ್ಪನೆಯನ್ನು ಮೂಡಿಸಿದ್ದಾರೆ. ಇದಕ್ಕಿಂತ ಪ್ರಮುಖವಾಗಿ ಮಹಿಳಾ ಶೋಷಣೆಯ ಮೂಲ ಮಹಾಕಾವ್ಯಗಳಲ್ಲಿಯೂ ಕಾಣ ಸಿಗುತ್ತದೆ. "ಸೀತೆಯ ಬಗೆಗಿನ ಶೀಲ ಪಾವಿತ್ರ್ಯ ಮತ್ತು ಪಾತಿವ್ರತ್ಯದ ಬಗ್ಗೆ ಪರಿಶೀಲಿಸಬಹುದಾಗಿದೆ. ಶೀಲವೆಂಬುದು ಒಬ್ಬ ವ್ಯಕ್ತಿಯ ವ್ಯಕ್ತಿತ್ವದ ವಿಚಾರಕ್ಕೆ ಸಂಬಂಧಿಸಿದುದಾಗಿದೆ. ಸೀತೆ ರಾವಣನ ಸೆರೆಯಲ್ಲಿ ಒಂದು ವರ್ಷ ಕಾಲ ದೂಡಿರಬಹುದು. ರಾಮನ ದೃಷ್ಟಿಯಲ್ಲಿ ಹೆಣ್ಣಿನ ಶೀಲ, ಪಾವಿತ್ರ್ಯ ಮತ್ತು ಪಾತಿವ್ರತ್ಯ ಪರಿಕಲ್ಪನೆಯು ಒಬ್ಬ ವ್ಯಕ್ತಿಯ ವ್ಯಕ್ತಿತ್ವದ ಅಂಗವಾಗಿರದೆ ದೈಹಿಕ ಸಂಬಂಧಗಳನ್ನು ಆಧರಿಸಿದುದೇ ಆಗಿದೆ. ಆದುದರಿಂದಲೇ

[೨೫] ರೊಟ್ಟಿ ಮತ್ತು ಹುಡುಗಿ–ಡಾ.ಮಲ್ಲಿಕಾಘಂಟಿ–ಪುಟ–೩
[೨೬] ದಲಿತ–ಬಂಡಾಯ ಕಾವ್ಯ ಮತ್ತು ವಿಚಾರವಾದಗಳು–ಡಾ.ಪ್ರಹ್ಲಾದ ಅಗಸನ ಕಟ್ಟೆ–ಪುಟ–೪೧೭.೪೧೮

ರಾಮನು ರಾವಣನ ಗೃಹದಲ್ಲಿಯೇ ನೀನು ಸುತ್ತಾಡಿಕೊಂಡಿರುವಾಗ, ಬಹುಕಾಲದವರೆಗೆ ಹೇಗೆ ಸುಮ್ಮನಿದ್ದಾನು ಎಂದು ಶಂಕೆಯನ್ನು ವ್ಯಕ್ತಪಡಿಸಿದ್ದಾನೆ. ಈ ಮೂಲಕ ಹೆಣ್ಣಿಗೆ ಸಂಬಂಧಿಸಿದ ಮೌಲ್ಯಗಳಿಗೂ ಕ್ಷೇತ್ರ ಪಾವಿತ್ರ್ಯಕ್ಕೂ ಸಂಬಂಧ ಬೆಸೆಯುತ್ತಾನೆ."[೨೭]

"ಹೇಗೆ ಸಹಿಸದೆ ತಾಯಿ
ಹೇಗೆ ಸಹಿಸದೆ ?
ಇರುಳು ಹಗಲು ಎವೆ ಮುಚ್ಚದೆ
ಲಂಕೆಯ ದೆವ್ವ ಬನದಲ್ಲಿ
ಹೆದರಿ ಗೂಡಾಗಿ ಕುಳಿತು
ಕಾದ ಮೌಲ್ಯಗಳು
ಅಪಶಂಕೆಯ ಬೆಂಕಿಯಲ್ಲಿ
ಸೀದು ಕರಿಕಾಗುವಾಗ
ಹೇಗೆ ನುಂಗಿದೆ."[೨೮]

ಸೀತೆಯಂತಹ ಪವಿತ್ರವೆನಿಸಿಕೊಂಡ ಮಹಿಳೆ ಕೂಡ ಸಾಮಾಜಿಕ ಮೌಲ್ಯಗಳೆದುರು ಶರಣಾಗಿದ್ದಾಳೆ. ಇನ್ನೊಂದೆಡೆ ಪುರುಷ ವರ್ಗ ನೀಡುವ ಕಿರುಕುಳದಿಂದ ರೂಪಿಸಲ್ಪಟ್ಟ ಸೀಮಿತ ಪರಿಧಿಯಿಂದ ಸೀತೆ ತಪ್ಪಿಸಿಕೊಂಡಿಲ್ಲ ಹೀಗೆ ಸ್ತ್ರೀ ಕುರಿತಾದ ನಿರಂತರವಾಗಿ ನಡೆದು ಬಂದ ಶೋಷಣೆಯನ್ನು ದಾಖಲಿಸಲಾಗಿರುವ ಇಲ್ಲಿ ಕೊನೆಗೆ ವ್ಯವಸ್ಥೆಯನ್ನು ಪ್ರಶ್ನಿಸುವ ಮಹಿಳೆಯ ನಿಲುವು ವ್ಯಕ್ತವಾಗಿದೆ.

"ನಿನ್ನ ಮಡಿಲಲ್ಲಿ ಮಲಗಿ
ಮತ್ತೆ ಕೇಳುತ್ತೇನೆ
ಈ ಎಲ್ಲ ಶಿಕ್ಷೆ ಯಾಕಾಗಿ."[೨೯]

ನೊಂದ ಮನಸ್ಸಿನ ದನಿಗಳನ್ನು ಅಭಿವ್ಯಕ್ತಿಸುವ ಮಹಿಳಾ ಪ್ರಜ್ಞೆ ಕೇವಲ ಸ್ತ್ರೀ ಬದುಕಿನ ದುರಂತ ಕ್ಷಣಗಳನ್ನು ಮಾತ್ರ ಕೆದಕದೆ ಹೆಣ್ಣಿನ ಸಹಜ ಮನಸ್ಸಿನ ಭಾವನೆಗಳನ್ನು ಕೂಡ ಅರ್ಥೈಸುತ್ತದೆ. ಪುರಾಣಗಳಲ್ಲಿ ವ್ಯಕ್ತವಾಗಿರುವ ಹಲವು ಸ್ತ್ರೀಯರ ಮನದ ಹೊಯ್ದಾಟವನ್ನು ದರ್ಶಿಸುವುದರೊಂದಿಗೆ ವಸ್ತು ಸ್ಥಿತಿಯನ್ನು ತೆರೆದಿಡುತ್ತದೆ.

---

೨೭ ಮಹಿಳಾ ಶೋಷಣೆಯ ನೆಲೆಗಳು-ಡಾ.ಅನುಸೂಯ ಎಂ.ಕದಂ-ಪುಟ-೩೩
೨೮ ಇತಿಗೀತಿಕೆ-ವಿಜಯಾ ದಬ್ಬೆ-ಪುಟ-೮೫
೨೯ ಇತಿಗೀತಿಕೆ-ವಿಜಯಾ ದಬ್ಬೆ-ಪುಟ-೮೫

ಕವಯತ್ರಿಯರು ಬಂಡಾಯ ಧೋರಣೆಯಲ್ಲಿ ಬಂದಾಗ ಗಮನಾರ್ಹ ಚಿಂತನೆಯನ್ನು ಪುನರ್ ವಿಮರ್ಶೆಗೆ ಒಳಪಡಿಸಿರುವುದು ಇಲ್ಲಿ ಪ್ರಮುಖವಾಗಿ ಗುರುತಿಸಲ್ಪಡುವ. ಮಹಿಳೆಯರ ಬದುಕಿನ ವಾಸ್ತವವನ್ನು ಅರಿಯುವ ಕಾಳಜಿ ಮುಖ್ಯವಾಗಿದೆ. ಮತ್ತು ಅಂದಂದಿನ ಪರಿಸ್ಥಿತಿಯಲ್ಲಿ ಮಹಿಳೆ ಎದುರಿಸಿದ ಬಿಕ್ಕಟ್ಟುಗಳು ಇಂದಿನ ಸಾಮಾಜಿಕ ವೈಷಮ್ಯದಲ್ಲಿ ಅವಳ ಸ್ಥಿತಿಗತಿ ಕುರಿತಾದ ಚಿಂತನೆ ಬಹುತೇಕ ಬಂಡಾಯ ಕಾವ್ಯದಲ್ಲಿ ದಾಖಲಾದ ಅಂಶವಾಗಿದೆ.

ಸೀತೆಯ ಪಾವಿತ್ರ್ಯದ ಕುರಿತು ಬಂದ ಅಭಿಪ್ರಾಯ ಹೀಗಿದೆ. "ಸೀತೆ ಸಂಶಯಕ್ಕೆ ಗುರಿಯಾದಳೆಂದು ಅವಳ ಅಪಾರ ಶೋಕಕ್ಕೆ ಕಾರಣವಾಯಿತು. ಪರಿಸ್ಥಿತಿಗಳು ಈ ಸಂಶಯಕ್ಕೆ ಇಂಬುಕೊಟ್ಟವು. ಕುತೂಹಲದ ವಿಷಯವೆಂದರೆ ಸೀತೆಯ ಪರೀಕ್ಷೆ ಮತ್ತು ತ್ಯಾಗ ಮಹಾಭಾರತದಲ್ಲಿ ಹೇಳುವ ಉದ್ದೇಶ ದ್ರೌಪದಿಯ ಹಾಗೆಯೇ ಬಳಲಿದವರುಂಟು ಎಂದು ಹೇಳುಬಹುದು. ಆದರೆ ಸೀತಾ ಪರಿತ್ಯಾಗ ವಿಚಾರ ಬಂದೇ ಇಲ್ಲದಿರುವುದರಿಂದ ಮೂಲ ರಾಮಾಯಣದಲ್ಲಿ ಸೀತೆಯ ಪಾತಿವ್ರತ್ಯದ ಬಗ್ಗೆ ಪ್ರಶ್ನೆಗಳೇ ಎದ್ದಿಲ್ಲವೇನೊ ಎಂಬ ಅನುಮಾನ ಬರುತ್ತದೆ"[೩೦] ಎಂದಿದ್ದಾರೆ.

"ಧಾವಿಸಿ ಬಂದ ದುಷ್ಯಂತ
ದುರ್ವಾಸನ ಶಾಪ, ಉಂಗುರದ ನೆಪ
ಒಡ್ಡಿ ನಿಂತವನ ನೋಡಿ ನಕ್ಕಳು
(ನೋವುಂಡ ನಕ್ಕ ನಗೆಯಲ್ಲ)
ಚಿಗುರು ಬೆರಳಿಗೆ ಮತ್ತೆ ಉಂಗುರದ ಸಂಭ್ರಮ
ಹಿಮಗಟ್ಟಿದ ಹುಡುಗಿ ಅಲ್ಲಲ್ಲಿ ಪ್ರೌಢೆ
ಥಣ್ಣಗೆ ನುಡಿದಳು। ನನಗೆ ಉಂಗುರದಲಿ ನೆಚ್ಚಿಗೆಯಿಲ್ಲಿ."[೩೧]

ಪುರಾಣ ಪ್ರಸಿದ್ಧವಾದ ಶಕುಂತಲೆ–ದುಷ್ಯಂತರ ಕಥೆ ಆಧುನಿಕ ಅದರಲ್ಲೂ ದಲಿತ–ಬಂಡಾಯ ಕಾವ್ಯ, ಸಂದರ್ಭದಲ್ಲಿ ಮತ್ತೆ ಮತ್ತೆ ಚರ್ಚೆಗೊಳಗಾಗಿ, ಚಿತ್ರಿತಗೊಂಡಿದೆ. ಜೊತೆಗೆ ಆ ಪುರಾಣ ಪಾತ್ರಗಳ ಮೂಲಕ ಸಮಕಾಲೀನ ಸಂದರ್ಭದ ಮನುಷ್ಯನ ಗುಣ ಸ್ವಭಾವಗಳಿಗೆ ಕನ್ನಡಿ ಹಿಡಿಯುವ, ವಿಡಂಬಿಸುವ ಪ್ರಯತ್ನ ನಡೆಯುತ್ತಲೇ ಇದೆ. ಈ ಹಿನ್ನೆಲೆಯಲ್ಲಿ ಕವಯತ್ರಿ ಎಂ.ಆರ್. ಕಮಲರವರು ಉಂಗುರ ಪ್ರಸಂಗದ ಹಿನ್ನೆಲೆಯಲ್ಲಿ ದುಷ್ಯಂತನ ಮರೆವು ಪುನಃ ಸ್ಮರಣೆ ಬಂದು, ಶಕುಂತಲೆಯೊಂದಿಗೆ ಒಂದಾಗಲು ಪ್ರಯತ್ನಿಸುವುದು. ಅದಕ್ಕೆ ಪ್ರತಿಯಾಗಿ ಶಕುಂತಲೇ

---

೩೦ ಇರಾವತಿ ಕರ್ವೆ. ಹೆಚ್.ಎಸ್.ಶಿವಪ್ರಕಾಶ–ಯುಗಾಂತರ–ಪುಟ–೭೯

೩೧ ಶಕುಂತಲೋಪಾಖ್ಯಾನ–ಎಂ.ಆರ್.ಕಮಲ–ಪುಟ–೨೩

ನನಗೆ ಉಂಗುರದಲ್ಲಿ ಮೆಚ್ಚಿಗೆ ಇಲ್ಲಾ ಎಂದು ಸೂಕ್ಷ್ಮವಾಗಿ ಪ್ರತಿಕ್ರಿಯಿಸುವುದು ಮಹಿಳೆಯ ವಿವೇಕದ ಸಬಲತೆಯ ಪ್ರತೀಕವಾಗಿದೆ.

ರಾಮ, ಪಾಂಡವರು, ಹರಿಶ್ಚಂದ್ರ, ಬುದ್ಧ ಎಲ್ಲಾ ಪುರುಷರು ತಮ್ಮ ಸುಖಕ್ಕಾಗಿ ತಮ್ಮ ಹೆಂಡತಿ, ಮಕ್ಕಳನ್ನು ಬಿಟ್ಟು ಹೊರಟು ಹೋದರು. ಅದೇ ಸಂದರ್ಭದಲ್ಲಿ ಒಂದು ವೇಳೆ ಹೆಣ್ಣು ಮನೆ ಬಿಟ್ಟರೆ, ಗಂಡ ಮಕ್ಕಳನ್ನು ತೊರೆದರೆ ಸಮಾಜ ಒಪ್ಪುದಿಲ್ಲ. ದೇವಾನು ದೇವತೆಗಳಿಗೂ ಈ ವಿಧಾನ ಬಿಟ್ಟಿಲ್ಲ ಗಂಡು, ಹೆಣ್ಣು ಬೇರೆ ಮೇಲು ಕೀಳೆಂಬ ಭಾವನೆಗಳು ಪರಂಪರಾಗತವಾಗಿ ಹರಿದು ಬಂದವುಗಳಾಗಿವೆ.

ಇನ್ನೊಂದು ರೀತಿಯಲ್ಲಿ ನೋಡಿದಾಗ “ರಾಮಾಯಣ ಕಾಲದಲ್ಲಿ ಪುಣ್ಯಗಳಿಸಲು ಅಥವಾ ಆತ್ಮ ವಿಕಾಸ ಮಾಡಿಕೊಳ್ಳಲು ಪತಿಯು ಮಾಡುತ್ತಿದ್ದ ಎಲ್ಲ ಕರ್ಮಾನುಷ್ಠಾನಗಳಲ್ಲೂ ಹೆಂಡತಿಗೆ ಸಮಾನವಾದ ಪಾಲುಗಾರಿಕೆ ಇತ್ತು. ಅವಳು ಪುರುಷನೊಡನೆ ದೀಕ್ಷಾಬದ್ಧಳಾಗಿ ಕುಳಿತುಕೊಂಡರೆ ಮಾತ್ರವೇ ಆ ಸತ್ಕಾರ್ಯವು ಸಂಪನ್ನಗೊಳ್ಳುವಂತಿತ್ತು. ಈ ಅರ್ಥದಲ್ಲಿ ಹೆಣ್ಣು ಅಂದು ಗಂಡಿಗೆ ಸಮಾನಸ್ಕಂದಳಾಗಿದ್ದಳು.”[೩೨] ಎಂದು ಮಹಿಳೆಗೆ ಎಲ್ಲಾ ರಂಗದಲ್ಲೂ ಮುಕ್ತ ಅವಕಾಶ ಇರುವುದನ್ನು ನಿರೂಪಿಸುತ್ತದೆ. ಅಲ್ಲದೆ ಹಿಂದೂ ಸಂಪ್ರದಾಯ ಹೇರುವ ಆದರ್ಶಗಳು ಅನೇಕ ಪೌರಾಣಿಕ ಪಾತ್ರಗಳನ್ನು ಪರಂಪರೆಯನ್ನು ನೋಡಿದಾಗ ನಮ್ಮ ಗಮನಕ್ಕೆ ಬರುವ ಸ್ತ್ರೀಯರು ಕಾಣಸಿಗುತ್ತಾರೆ. ಅದಕ್ಕಾಗಿ ಕವಯತ್ರಿ.

“ನಾನು ಸೀತೆ ದ್ರೌಪದಿ
ಚಿತ್ರಾಂಗದೆ ಸಾವಿತ್ರಿಯಲ್ಲ
ನಾನು
ನನ್ನೆಲ್ಲ ಸಣ್ಣತನದ
ಸ್ವಾರ್ಥದ
ಮಾನವೀಯ ಭಾವನೆಗಳ
ಒಂದು ಮೊತ್ತ”[೩೩]

ಇಲ್ಲಿ ಎಂ. ಆರ್ ಕಮಲರವರು ಪುರಾಣಗಳಲ್ಲಿ ಪ್ರಮುಖರೆನಿಸಿಕೊಂಡ ಸೀತೆ, ದ್ರೌಪದಿ, ಚಿತ್ರಾಂಗದೆ, ಸಾವಿತ್ರಿಯರಂಥ ಆದರ್ಶ ಸ್ತ್ರೀ ತಾನಾಗದೇ ಸಹಜ ಮಾನವೀಯ ಭಾವನೆಗಳುಳ್ಳ ಸ್ತ್ರೀ ಯಾಗುವ ಆಶಯವನ್ನು ವ್ಯಕ್ತಪಡಿಸುತ್ತಾರೆ. ಪುರಾಣಗಳಲ್ಲಿ ಆದರ್ಶವೆನಿಸಿಕೊಂಡ ಸ್ತ್ರೀ

---

೩೨ ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ – ಡಾ.ಜಿ.ಕೃಷ್ಣಪ್ಪ–ಪುಟ–೨೬

೩೩ ಶಕುಂತಳೋಪಾಖ್ಯಾನ–ಎಂ.ಆರ್.ಕಮಲ–ಪುಟ–೩೦

ಪಾತ್ರಗಳು ಪ್ರಸ್ತುತ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಮಾದರಿಯಾಗಿಸುವುದು. ಶೋಷಣೆಯ ಇನ್ನೊಂದು ಮುಖವನ್ನೇ ತೋರಿಸುತ್ತದೆ. ಅಲ್ಲದೆ ಇಲ್ಲಿ ಕವಯಿತ್ರಿ ತಾನು ಮಾನವೀಯ ಭಾವನೆಗಳ ಮೊತ್ತವೆಂದು ಪರಿಭಾವಿಸಿಕೊಳ್ಳುವುದು ಅನನ್ಯವಾಗಿದೆ.

ಮಹಿಳಾ ಕುಲಕ್ಕೆ ಆದರ್ಶವಾಗಿರುವ ಪೌರಾಣಿಕ ಸ್ತ್ರೀ ಪಾತ್ರಗಳು ತಮ್ಮ ಬದುಕಿನುದ್ದಕ್ಕೂ ಶೋಷಣೆಯನ್ನೆ ಅನುಭವಿಸಿವೆ. ಸೀತೆ, ದ್ರೌಪದಿ, ಊರ್ಮಿಳೆ, ಸ್ತ್ರೀ ಶ್ರೇಷ್ಠರೆನಿಸಿಕೊಂಡ ಪಾತ್ರಗಳ ನೈಜ ಬದುಕಿನ ಹಿಂದಿರುವ ಕಹಿಯನ್ನು ಬಹುಶಃ ಸಮಾಜ ಗಮನಿಸಿಲ್ಲ. ಹೀಗೆ ಇಬ್ಬಗೆಯ ನೀತಿಯನ್ನು ಅನುಸರಿಸುವ ಪುರಾಣಗಳು ಅವು ಚಿತ್ರಿಸಿರುವ ಮಹಿಳೆಯರ ಕುರಿತಾದ ಮನೋಭೂಮಿಕೆಯನ್ನು ವರ್ತಮಾನದ ಸ್ಥಿತಿಯಲ್ಲಿ ಬಹಳ ಹತ್ತಿರವಾಗಿ ಕಾಣುತ್ತದೆ. ಆದ್ದರಿಂದ ಪುರಾಣದಲ್ಲಿಯ ಹಿಂಸೆ, ಕ್ರೌರ್ಯಗಳು ಮತ್ತೆ ಪುನರಾವರ್ತನೆ ಆಗುವುದು ಬೇಡ ಎಂಬ ನಿಲುವು ಲತಾಗುತ್ತಿಯವರದು. ರಾಮಾಯಣದಲ್ಲಿ ಸೀತೆಯನ್ನು ಕಾಡಿಗಟ್ಟುವ ಹಿನ್ನೆಲೆಯಲ್ಲಿ ನಡೆದ ಅಚಾತುರ್ಯವನ್ನು ಸ್ಮರಿಸುತ್ತಾ ತಮ್ಮ 'ಕಾಲ' ಎಂಬ ಕವಿತೆಯಲ್ಲಿ ಹೀಗೆ ಚಿತ್ರಿಸಿದ್ದಾರೆ.

"ಮತ್ತೆ ಬರುವುದು ಬೇಡ
ಸೀತೆಯನು ಕಾಡಿಗಟ್ಟಿ
ಊರ್ಮಿಳೆಯನು ಅಳಲು ಬಿಟ್ಟು
ರಾಮ ಲಕ್ಷ್ಮಣರು ಹುಟ್ಟಿ
ರಾಮಾಯಣ ಮಾಡುವ ಕಾಲ "[೩೪]

ಇಲ್ಲಿಯವರೆಗೆ ಪುರಾಣ ಚರಿತ್ರೆಗಳ ಬಗ್ಗೆ ಒಳ್ಳೆಯ ಅಭಿಪ್ರಾಯವನಿಟ್ಟುಕೊಂಡ ಸಾಮಾನ್ಯ ಜನತೆಗೆ ಅದರ ಕರಾಳ ಮುಖವನ್ನು ಪರಿಚಯಿಸುವ ಮೂಲಕ ಪುರಾಣಗಳ ಮರು ವ್ಯಾಖ್ಯಾನಕ್ಕೆ ತೊಡಗಿರುವ ಲೇಖಕಿಯರ ಶ್ರಮ ಕನ್ನಡ ಕಾವ್ಯಕ್ಕೆ ಹೊಸ ದೃಷ್ಟಿ ಕಲ್ಪಿಸಿದೆ.

ನಮ್ಮಲ್ಲಿ ಹಳೆಯ ಸಂಪ್ರದಾಯ ಪದ್ಧತಿಗಳು ಇನ್ನೂ ಕೂಡ ಜೀವಂತ ಇರುವುವು. ಇದಕ್ಕೆ ದೇವರ ಆರಾಧನೆ, ಜೋಗತಿ ಬಿಡುವುದು ಇತ್ಯಾದಿಗಳನ್ನು ಉದಾರಿಸಬಹುದು. ಇಲ್ಲಿ ಕವಿ ಜೋಗತಿಯರು, ಊರಿನ ಗೌಡ್ರು ಹೇಗಿರುತ್ತಾರೆ ಎನ್ನುವುದನ್ನು ಒಂದು ಕವಿತೆಯಲ್ಲಿ ಹೇಳುತ್ತಾರೆ.

---

[೩೪] ಬೆಳ್ಳಿ-ಹೂವು-ಲತಾಗುತ್ತಿ-ಪುಟ-೧೬

"ನಮ್ಮೂರಾಗ ಹಿಂದೆ
ಗೌಡ್ರು-ದೌಡ್ರು ಕೂಡಿ ನಾಟಕಾಡಿದಾಗ
ಆನೆ ಹುಚ್ಚೆದ್ದು. ಆಯಾರಿ ಮಾಡಿದ್ದಲ್ಲದೆ
ನಾಯಕಿ ಪಾತ್ರ ಮೆಚ್ಚಿ
ಅದೇ ನಾಟಕನ ಆಡಬೇಕಂತ ಹಟಹಿಡಿದಿದ್ರು
ಗೌಡನ ಪಾತ್ರಕ್ಕಿಂತ ಅವರ್ಹಿಂದಿನ
ದಂಡಿನ ಪಾತ್ರನೆ ಜೋರಾಗಿತ್ತು."[೩೫]

ಕವಿ ಇಲ್ಲಿ ಆ ನಾಟಕಕ್ಕೂ ಹಾಗೂ ಗೌಡ್ರ ಮತ್ತು ಆ ಪಾತ್ರದ ಹಿಂದಿನ ನಾಯಕಿಯ ಸಂಬಂಧ ಯಾವ ರೀತಿಯಿತ್ತು ಎಂಬುದು ಇದರಿಂದ ತಿಳಿಯುತ್ತದೆ. ಪುರುಷ ಪ್ರಧಾನತೆಯನ್ನು ಸ್ತ್ರೀಯ ಪರಾಧೀನತೆಯನ್ನು ಬೆಂಬಲಿಸುವ ವ್ಯವಸ್ಥೆ ಜಗತ್ತಿನ ಎಲ್ಲಾ ಧರ್ಮಗಳಲ್ಲೂ ಕಂಡು ಬರುತ್ತದೆ.

"ಪಾತ್ರದವರು, ಬಸವಿಯರು, ಜೋಗತಿಯರು ದೈವಕೇಂದ್ರಿತ ಲೈಂಗಿಕ ದಾಸಿಯರಾದರೆ. ಕಸುಬಿನವರು (ಸೆಕ್ಸ್ ವರ್ಕರ್ಸ್) ಲೌಕಿಕ ಕೇಂದ್ರಿತ ದೇವದಾಸಿಯರು. ಇವರೆಲ್ಲರನ್ನು ಒಟ್ಟು ಸೇರಿಸಿ ದೇವದಾಸಿಯರು ಎಂದು ಕರೆಯುವ ವಾಡಿಕೆ ಇದೆ. ಆದರೆ ಅದು ಸಮರ್ಪಕ ಎನಿಸುವುದಿಲ್ಲ. ಇದು ಇತ್ತೀಚಿನ ಪದ ಬಳಕೆ ಬಸವಿಯರು, ಜೋಗತಿಯರು ಪಾತರದವರು ಈ ಒಂದೊಂದು ಪದ ಭಿನ್ನ ಭಿನ್ನ ಸಾಂಸ್ಕೃತಿಕ ಚರಿತ್ರೆಯನ್ನು ಹೊಂದಿದೆ"[೩೬] ಇವರೆಲ್ಲರನ್ನು ಊರು ಗೌಡ ತನ್ನ ಭೋಗಕ್ಕಾಗಿ ಬಳಸಿಕೊಳ್ಳುತ್ತಾನೆ. ಅದಕ್ಕೆ ಕವಿ ಜೋಗುತಿಯ ರಾತ್ರಿ ಸಂಚಾರವನ್ನು ಇಲ್ಲಿ ಹೇಳುತ್ತಾರೆ.

"ಈಗ ಜೋಗುತಿಯಾಗಿ ಹಳೇ ಹಾಡೇಳುತ
ಗುಡಿ ಗುಡಿ ತಿರುಗುತಾಳ
ಮೊನ್ನೆ ಮಧ್ಯರಾತ್ರಿ ನಮ್ಮೂರಿಗೆ ಬಂದಾಗ
ಕತ್ತೆ ಕಿರಿಚಿದವು, ನಾಯಿ ಬೊಗಳಿದವು
ಎದ್ದು ನೋಡಿದರೆ, ಅದೇ ಜೋಗತಿ"[೩೭]

ಜೋಗತಿಯು ಗೌಡನ ಅಧೀನವಾಗಿ ಊರಲ್ಲಿ ರಾತ್ರಿಯಲ್ಲಿ ತಿರುಗಾಡುತ್ತಾಳೆ. ಅಲ್ಲಿ ರಾತ್ರಿ ನೋಡಿದಾಗ ಜೋಗತಿ ಕಂಡದ್ದನ್ನು ಕವಿ ಹೇಳುತ್ತಾನೆ.

---

[೩೫] ಉಂಡು ಮಲಗಿದವರು-ಸೂಗಯ್ಯ ಹಿರೇಮಠ-ಪುಟ-೧೯
[೩೬] ದಲಿತರ ಬದುಕು ಮೆಲಕು-ಡಾ.ಎನ್.ಚಿನ್ನಸ್ವಾಮಿ ಸೋಸಲೆ-ಪುಟ-೧೩೭
[೩೭] ಉಂಡು ಮಲಗಿದವರು-ಸೂಗಯ್ಯ ಹಿರೇಮಠ-ಪುಟ-೧೯

ಅಲ್ಲದೇ ಇಲ್ಲಿ ಆ ಜೋಗತಿ ತನ್ನ ದೇಹವನ್ನು ಗೌಡನಿಗೆ ನೀಡಿ, ತನಗೆ ಇಷ್ಟವಿಲ್ಲದಿದ್ದರೂ ಗೌಡನೊಂದಿಗೆ ಒಂದಾಗುತ್ತಾಳೆ. ಜೋಗತಿ ಎಂಬ ಪದನಾಮವನ್ನು ಧರಿಸುತ್ತಾಳೆ. ಎಂದು ಸೂಚ್ಯವಾಗಿ ಹೇಳುವುದನ್ನು ಇಲ್ಲಿ ಕಾಣುತ್ತೇವೆ. ಆದರೆ ಇನ್ನೊಂದೆಡೆ ಸಿರಿಸಂಪತ್ತು ನಗಣ್ಯವಾಗಿ, ದೈಹಿಕ ಸುಖ ಮುಖ್ಯವಾಗಿ ಅದಕ್ಕಾಗಿ ಹರಿದು ಹಂಬಲಿಸುವುದು, ಸಮಾಜದ ನಿಂದನೆಗೆ ಒಳಗಾಗುವುದನ್ನು ಕಾಣುತ್ತೇವೆ. ಇದಕ್ಕೆ ಕವಯತ್ರಿ ಎಚ್.ಎಲ್. ಪುಷ್ಪರವರ 'ಅಮೃತ ಮತಿಯ ಸ್ವಗತ' ಕವಿತೆಯನ್ನು ಉದಾಹರಿಸಬಹುದು.

ಅರಮನೆಯ ಅರೆಸೊತ್ತಿಗೆಯಲ್ಲಿ ಸುಖವನ್ನು ಭೋಗಿಸಬೇಕಾಗಿರುವ ಅಮೃತಮತಿ, ತನ್ನ ಸಂಕಷ್ಟದ ಅಳಲನ್ನು ತೋಡಿಕೊಳ್ಳುವಲ್ಲಿ ಸ್ಪಷ್ಟವಾದ ಕೊರಗಿದೆ. ಆಕೆಗೆ ಬೇಕಾಗಿರುವುದು ಕೇವಲ ಸುಖದ ಸೊಪ್ಪತ್ತಿಗೆಯ ಆಶಾದಾಯಕ ಜೀವನದಲ್ಲಿ ಪ್ರೇಮ ಕಾಮದ ಬಯಕೆಯ ಈಡೇರಿಕೆ. ಅದನ್ನು ಪೂರೈಸುವ ಗುಣವಿರುವುದು ಬದಗನಲ್ಲಿ. ಅದಕ್ಕಾಗಿಯೇ ಅವಳು ಬದಗನ ಮೇಲೆ ಮೋಹಿತಳಾಗಿರುವುದು ಮತ್ತು ಧರ್ಮ ಹೇರಿರುವ ನಿರ್ಬಂಧದಿಂದ ಬಿಡುಗಡೆ ಬಯಸಿ, ತನ್ನ ಇಚ್ಛೆಯ ಮೇರೆಗೆ ಬಾಳುವುದು. ಇಲ್ಲಿ ಕವಯತ್ರಿಯ ಮುಖ್ಯ ಧೋರಣೆ ಹೆಣ್ಣನ್ನು ವ್ಯವಸ್ಥೆಯಿಂದ ವಿಮೋಚನೆ ಗೊಳಿಸುವುದಾಗಿದೆ.

"ಹಸಿವಿನೆದುರು ಏನಿಲ್ಲ ಏನಿಲ್ಲ ಭೀತಿ
ಕತ್ತಿಯೂ ಕೂಡ ಅಳುಕುತ್ತದೆ
ಧರ್ಮದ ಸೂಕ್ಷ್ಮ ಜಂಜಾಟದಲ್ಲಿ
ನಾವು ಜನ್ಮವೆತ್ತುತ್ತಲೇ ಇದ್ದೇವೆ
ಅಮೃತ ಮತಿಯಾಗಿ
ನಿನ್ನಂಥವನ ಗದ್ದುಗೆಯ ರಾಣಿಯರಾಗಿ."[೩೮]

ಇಲ್ಲಿ ಅಮೃತಮತಿ ಕೇವಲ ಪೌರಾಣಿಕ ವ್ಯಕ್ತಿಯಲ್ಲಿ, ವಾಸ್ತವದಲ್ಲಿ ಅನುಭವಿಸುತ್ತಿರುವ ಸಕಲ ಮಹಿಳೆಯರ ಪ್ರತಿನಿಧಿ. ಇದು ಕೇವಲ ಅಮೃತ ಮತಿಯ ಸ್ವಗತವಲ್ಲ. ಇಡೀ ಹೆಣ್ಣು ಕುಲದ ಆಂತರ್ಯದ ಭಾವನೆ ಇಲ್ಲಿದೆ. 'ನಾವು ಜನ್ಮವೆತ್ತುತಲೇ ಇದ್ದೇವೆ ಅಮೃತ ಮತಿಯಾಗಿ' ಎಂಬುದರ ಅರ್ಥ ಮಹಿಳಾ ಶೋಷಣೆಯ ಮುಂದುವರಿಕೆಯನ್ನು ಸೂಚಿಸುತ್ತದೆ. ಪೌರಾಣಿಕ ಕಥೆಗಳಲ್ಲಿ ಬರುವ ಎಲ್ಲವ್ವನನ್ನು ಯಾರು ಕೇಳಿಲ್ಲ. ಅವಳನ್ನು 'ರೇಣುಕಾ' ಎಂದು ಕರೆಯುತ್ತಾರೆ. ಅವಳು ತನ್ನ ಮಗನಿಂದಲೇ ಕೊಲೆಯಾಗಿ ಮತ್ತೆ ಜೀವದಾನ ಪಡೆಯುವ ಸನ್ನಿವೇಶ ಅದು

---

[೩೮] ಬಂಡಾಯ ಕಾವ್ಯ-ಸಂ. ಬರಗೂರು ರಾಮಚಂದ್ರಪ್ಪ-ಪುಟ-೧೬೩

ಕೂಡ ಹೆಣ್ಣು ತನಕ್ಕೆ ಬರುವ ಒಂದು ಪ್ರಮುಖವಾದ ಹಿಂಸೆಯ, ಶೋಷಣೆಯ ವಿಷಯವಾಗಿದೆ. ಇಲ್ಲಿ ಕವಿ ತಮ್ಮ ಊರಲ್ಲಿ ಎಲ್ಲವ್ವನ ಜಾತ್ರೆ ನಡೆದ ಸನ್ನಿವೇಶವನ್ನು ಬಣ್ಣಿಸುತ್ತಾರೆ.

"ನೀರಿಗೆ ಹೋಗುವ ನಾರೇರಿಗೆ ತಡದಾನ
ಸೀರಿ ಸರಗ್ಹಿಡದು ಎಳದಾನ । ಮಗರಾಮ
ನೀರೆಯರ ಮಾನ ಕಳದಾನ"[೩೯]

ರೇಣುಕಾಳ ಮಗ ಪರಶುರಾಮ ತನ್ನ ತಾಯಿಯನ್ನೇ ಕೊಂದನು. ಅಪ್ಪನ ಆಜ್ಞೆಯನ್ನು ಪಾಲಿಸಿ ಹೆತ್ತ ಕರುಳಿನ ವಿಚಾರವನ್ನು ಮಾಡಲಿಲ್ಲ. ಅದಕ್ಕೆ ಈ ಕವಿತೆಯಲ್ಲಿ ವಿಡಂಬನೆ ಇದೆ, ವ್ಯಂಗ್ಯವಿದೆ. ಪರಶುರಾಮನು ತನ್ನ ತಾಯಿಯನ್ನು ಹಿಂದೂ ಮುಂದು ನೋಡದೆ ಕೊಲ್ಲುತ್ತಾನೆಂದರೆ ಅವನೇನು ಒಳ್ಳೆಯವನೇ ಅಲ್ಲ ಎಂದು ಕವಿ ಹೇಳುತ್ತಾ ನೀರಿಗಿ ಬಂದ ಹೆಣ್ಣನ್ನು ಬಿಡುತ್ತಿರಲಿಲ್ಲ ಎಂಬಲ್ಲಿ ಪರಶುರಾಮನ ಹೇಯಕೃತ್ಯದ ವ್ಯಕ್ತಿತ್ವ ವ್ಯಕ್ತವಾಗುತ್ತದೆ. ದ್ರೌಪದಿಗೆ ಐದು ಜನ ಗಂಡಂದಿರನ್ನು ಹಂಚಿಕೊಳ್ಳಲು ಕುಂತಿ ಹೇಳಿದಾಗ ಅದಕ್ಕೆ ದ್ರೌಪದಿ ಒಪ್ಪಿಕೊಂಡು, ಪಾಂಚಾಲಿಯಾಗುತ್ತಾಳೆ. ಈ ಕುರಿತು "ಲೋಹಿಯಾ ಅವರು ಭಾರತದ ನಾರಿಗೆ 'ಸೀತೆ' ಆದರ್ಶವಲ್ಲ ದ್ರೌಪತಿಯ ಆದರ್ಶವಾಗಬೇಕು ಎನ್ನುತ್ತಿದ್ದರು."[೪೦]

"ಅಪ್ಪ ಹೇಳಿದವನಿಗೆ ಮಾಲೆ ಹಾಕಿ
ಅತ್ತೆ ಹೇಳಿದವರಿಗೆಲ್ಲ ಸೆರಗು ಹಾಸಿ
ಕೊನೆಗೂ ನೀನು ಪತಿವ್ರತೆಯಾದೆ
ಅಲ್ಲವೇ ದ್ರೌಪದಿ?
ಆದರೂ ನಿನ್ನ ಬಗ್ಗೆ
ಎಲ್ಲ ಹೆಣ್ಣುಗಳ ಮನದಲ್ಲಿ
ಅದೇನೋ ಅನುಕಂಪ
ಗಂಡರೈವರಿದ್ದರೂ ವ್ಯಸನವ ನೀಡದೆ
ವ್ಯಸನವ ತಂದಿಟ್ಟರಲ್ಲಾ ಆ ಕೃಷ್ಣನಿಲ್ಲದಿದ್ದರೆ
ನಿನ್ನ ಗತಿ ಏನಾಗುತ್ತಿತ್ತೋ ಯಾರಿಗೆ ಗೊತ್ತು ?
ನಮಗೆ ನೋಡು ಕೃಷ್ಣನೂ ಇಲ್ಲ
ಕರ್ಣನೂ ಇಲ್ಲ
ಆದರೂ ತೊಡೆ ತಟ್ಟಿ ಕರೆವ
ದುರ್ಯೋಧನರಿದ್ದಾರೆ
ಮುಡಿಗೆ ಕೈ ಹಾಕುವ ದುಶ್ಯಾಸನರಿದ್ದಾರೆ
ರಾತ್ರಿ ಕೂಟಕೆ ಕರೆವ ಕೀಚಕರಿದ್ದಾರೆ."[೪೧]

---

[೩೯] ಉಂಡು ಮಲಗಿದವರು-ಸೂಗಯ್ಯ ಹಿರೇಮಠ-ಪುಟ-೩೯

[೪೦] ದಲಿತ-ಬಂಡಾಯ ಕಾವ್ಯ ಮತ್ತು ವಿಚಾರವಾದಗಳು-ಡಾ.ಪ್ರಹ್ಲಾದ ಅಗಸನಕಟ್ಟೆ-ಪುಟ-೧೯೦

[೪೧] ದಲಿತ-ಬಂಡಾಯ ಕಾವ್ಯ ಮತ್ತು ವಿಚಾರವಾದಗಳು-ಡಾ.ಪ್ರಹ್ಲಾದ ಅಗಸನಕಟ್ಟೆ-ಪುಟ-೧೯೦

ದ್ರೌಪದಿ ರಕ್ಷಣೆಗೆ ಕೃಷ್ಣನು ಬಂದನು. ದೇವರೇ ದ್ರೌಪದಿಯನ್ನು ರಕ್ಷಿಸಿದ. ಆದರೆ ನಮ್ಮ ರಕ್ಷಣೆಗೆ ಯಾರು ಇಲ್ಲ. ಆ ಕಾಲದಲ್ಲಿ ಇದ್ದಂತಹ ದುರ್ಯೋಧನ, ದುಶ್ಯಾಸನರಂತಹ ದುಷ್ಕರ್ಮಿಗಳು ಈ ಕಾಲದಲ್ಲಿಯೂ ಇದ್ದಾರೆ. ಪ್ರತಿಯೊಂದು ಕಾಲದಲ್ಲಿಯೂ ಹೆಣ್ಣುಮಕ್ಕಳ ಮೇಲೆ ಶೋಷಣೆಗಳು ನಡೆಯುತ್ತಲೆ ಇವೆ ಎಂದು ಹೇಳುತ್ತಾ ಪುರುಷರ ಅಟ್ಟಹಾಸವನ್ನು ಚಿತ್ರಿಸಿದ್ದಾರೆ.

"ಸ್ತ್ರೀಯರು ತಮ್ಮನ್ನೂ ತಮ್ಮ ಬದುಕನ್ನೂ ಅನುಭವಗಳನ್ನೂ ತಾವೇ ವ್ಯಾಖ್ಯಾನಿಸಬೇಕಾದ ಅವಶ್ಯಕತೆಯ ಬಗ್ಗೆ ಆಗ್ರಹಪಡಿಸಿರುವುದು ಗಮನಿಸಬೇಕಾದ ಸಂಗತಿ. ಈ ಜಗತ್ತಿನ ಒಳಿತು ಕೆಡುಕುಗಳ ಬಗ್ಗೆ ನಿರ್ಧರಿಸುವ ಅಧಿಕಾರವನ್ನು ಪುರುಷರೇ ಏಕೆ ಇಟ್ಟುಕೊಂಡಿರಬೇಕು? ಸ್ತ್ರೀಯರಿಗೆ ಯಾವುದು ಬೇಕು, ಯಾವುದು ಬೇಡವೆಂದು ನಿರ್ಧರಿಸುವ ಹಾಗೂ ನಿರ್ಮಿಸುವ ಅಧಿಕಾರವನ್ನು ಅವರು ಪಡೆದದ್ದು ಹೇಗೆ? ಎಂಬ ಪ್ರಶ್ನೆಗಳನ್ನು ಈಕೆ ಚರ್ಚಿಸುತ್ತಾಳೆ. ಪುರುಷರ ದಬ್ಬಾಳಿಕೆಗಳ ಫಲವಾಗಿ ಮಹಿಳೆಯರು ತಮ್ಮ ಧ್ವನಿಯನ್ನು ಕಳೆದುಕೊಂಡಿದ್ದಾರೆ. ತುಂಬ ದಮನಗೊಂಡಿರುವ ಅವರು ತಮ್ಮನ್ನು ಕುರಿತು ತಾವೇ ಏನನ್ನೂ ಹೇಳಲು ಅಸಮರ್ಥರಾಗಿದ್ದಾರೆ. ಇದರಿಂದಾಗಿ ಹೆಂಗಸರ ಬುದ್ಧಿಮತ್ತೆ ಕೆಳದರ್ಜೆಯದೆಂದು ಪುರುಷರು ನಿರ್ಧರಿಸಲು ಕಾರಣವಾಗಿದೆ. ಹತ್ತಿಕ್ಕುವಿಕೆಯೇ ಸ್ತ್ರೀಯರ ಅವನತಿಯ ಮೂಲವೆಂದು ಈಕೆ ವಿಶ್ಲೇಷಿಸುತ್ತಾಳೆ."[೬೨]

ಮಹಾಭಾರತ ದ್ರೌಪದಿಯ ವ್ಯಕ್ತಿತ್ವಕ್ಕೂ ದ್ರುಪದ, ದ್ರೋಣರ ಸ್ನೇಹ, ಮಾತ್ಸರ್ಯ, ಹಗೆತನ ಹಾಗೂ ಪಾಂಡವ ಕೌರವರ ನಡುವಿನ ವ್ಯಕ್ತಿತ್ವಗಳಿಗೂ ಸಂಬಂಧವಿರುವಂತೆ ತೋರುತ್ತದೆ. "ಆಕೆ ಐದು ಮಂದಿಯ ಹೆಂಡತಿಯಾಗಿರುವುದು ಪುರುಷ ಕುತೂಹಲದ ವಸ್ತುವಾಗಲು ಕಾರಣವಾಗುತ್ತದೆ. ಹಾಗಾಗಿ ಆಕೆ ಮಹಾಭಾರತದಲ್ಲಿ ಇತರ ಸ್ತ್ರೀಯರು ಎದುರಿಸುವ ಪುರುಷರ ಲಂಪಟ ಸ್ವಭಾವವನ್ನು ಎದುರಿಸಬೇಕಾಗುತ್ತದೆ ಎಂದು ಕಾಣುತ್ತದೆ. ಶಕ್ತಿ ರಾಜಕಾರಣ ಹಾಗೂ ಪುರುಷ ರಾಜಕಾರಣದ ಸೂಕ್ಷ್ಮ ನೆಲೆಗಳನ್ನು ಮಗ್ಗುಲುಗಳನ್ನು ಅರಿತ ದ್ರೌಪದಿ ಅಷ್ಟೇ ಸೂಕ್ಷ್ಮವಾಗಿ ಅದಕ್ಕೆ ಸ್ಪಂದಿಸುವ, ಪ್ರತಿಕ್ರಿಯಿಸುವ ಹಾಗೂ ಅವುಗಳ ನಡೆಯನ್ನು ನಿಯಂತ್ರಿಸುವಂತಹ ಮುನ್ನಡೆಸುವಂತಹ ಧೀಮಂತಿಕೆಯನ್ನು ಪ್ರಕಟಿಸಿದ್ದಾಳೆ. ಆಕೆ ತನ್ನ ವಸ್ತ್ರಾಪಹರಣದ ಕಾಲದಲ್ಲಿ ಹಿರಿಯ ಮುತ್ಸದ್ದಿಗಳನ್ನು ತನ್ನ ಮಾತಿನಿಂದ ಕಟ್ಟಿ ಹಾಕಬಲ್ಲ ಚತುರರ ಮೇಲೆ ಹಾಗೂ ತನ್ನ ವೈಯಕ್ತಿಕ ಅಪಮಾನವನ್ನು ಪಕ್ಕಕ್ಕಿರಿಸಿ ತನ್ನ ಗಂಡಂದಿರನ್ನು

---

೬೨ ಸ್ತ್ರೀವಾದ-ಡಾ.ಬಿ.ಎನ್.ಸುಮಿತ್ರಾಬಾಯಿ-ಪುಟ-೧೫

ಕಾಪಾಡಿಕೊಳ್ಳಬಲ್ಲ ಚಾಣಾಕ್ಷೆ. ಹಾಗಾಗಿಯೇ ಎ.ಆರ್. ಕೃಷ್ಣಶಾಸ್ತ್ರಿಗಳು ಮಹಾಭಾರತದಲ್ಲಿ ಯಾರಾದರೂ ಗಂಡಸಿದ್ದರೆ ಅದು ದ್ರೌಪದಿ ಎಂದು ಉಲ್ಲೇಖಿಸಿರುವುದು ಒಮ್ಮತದ ಅಭಿಪ್ರಾಯವೆಂದು ಹೇಳಬಹುದು"[೪೩] ಎಂದಿದ್ದಾರೆ. ಈ ಮಾತು ಆ ಸಂದರ್ಭದಲ್ಲಿ ವಾಸ್ತವ ಎಂದು ತೋರುತ್ತದೆ.

"ಇದಕ್ಕೆ ಹ್ಯಾಂಗ ಮಾಡಬೇಕು ನೀವ ಹೇಳ್ರಿ !
ಈ ಅಪಹರಣದ ಕತೆ ಹೊಸದಲ್ಲಂತಿರೇನು ?
ಹಿಂದ ದ್ವಾಪರ ಯುಗದಾಗ ದ್ರೌಪದಿ
ವಸ್ತ್ರಾಪಹರಣ ಮಾಡಿದ್ರು
ಇಂದು ಕಲಿಯುಗದಾಗ ಇಂಡಿಯನ್
ಏರ್‌ಲೈನ್ಸ್ ಅಪಹರಣದ ಮಾಡಿದ್ರು."[೪೪]

ಮಹಾಕಾವ್ಯದಲ್ಲಿ ನಡೆದಂತಹ ಕೆಲವು ಘಟನೆಗಳು ಇಂದಿಗೂ ಹೆಣ್ಣಿನ ಜೀವನದಲ್ಲಿ ನಡೆಯುತ್ತಿವೆ. ಮಹಾಭಾರತದಲ್ಲಿ ಬರುವ ದ್ರೌಪದಿ, ಕುಂತಿಗಿಂತಲೂ ವಿಶೇಷ ಸ್ಥಾನ ಪಡೆದುಕೊಳ್ಳುತ್ತಾಳೆ. ಇಲ್ಲಿ ದ್ರೌಪದಿಯನ್ನು ಕುರಿತು ಕವಯತ್ರಿ ಕೆ. ಶರೀಫಾರವರು.

"ಜೂಜಿನ ವಸ್ತುವಾಗಿ
ಪತಿಗಳೈವರ ಆಟದಲಿ
ತುಂಬಿದ ಸಭೆಯಲಿ
ಸೀರೆ ಸೆಳೆಸಿಕೊಂಡು
ಗಂಡಂದಿರ ಧರ್ಮ ಕಾಯಲು
ಮರು ಮಾತಿಲ್ಲದೆ
ಪಣಕ್ಕಿಡಿಸಿಕೊಂಡಿರಲ್ಲೆ ?"[೪೫]

ಹೆಣ್ಣು ತಾನು ಪತಿವ್ರತೆ ಎನಿಸಿಕೊಳ್ಳಲು ಏನೆಲ್ಲವನ್ನು ಮಾಡುತ್ತಾಳೆ. ಅದಕ್ಕೆ ದ್ರೌಪದಿಯು ತನ್ನ ಗಂಡಂದಿರ ಮಾನವನ್ನು ಉಳಿಸಲು ತನ್ನ ಸೀರೆ ಸೆಳೆಸಿಕೊಂಡಳು. ಮತ್ತು ತನ್ನನ್ನೇ ಪಣಕಿಟ್ಟಳು. ಹಿಂದೂ ಧರ್ಮ ಅಥವಾ ಭಾರತೀಯ ಸಂಸ್ಕೃತಿಯ ಹೆಣ್ಣಿನ ನಿಲುವೇ ಗಂಡನಿಗಾಗಿ ಬದುಕುವುದಾಗಿದೆ.

---

೪೩ ಮಹಿಳಾ ಶೋಷಣೆಯ ನೆಲೆಗಳು–ಡಾ.ಅನುಸೂಯ ಎಂ.ಕದಂ–ಪುಟ–೭೫

೪೪ ಹೊಸ ಶತಮಾನದ ಕಾವ್ಯ–ಸಂ.ಕೆ.ಷರೀಫಾ–ಪುಟ–೧೫೧, ೧೫೨ (ದ್ರೌಪದಿ ವಸ್ತ್ರಾಪಹರಣ ಮತ್ತು ಇಂಡಿಯಾ ಏರಲೈನ್ಸ್ : ಡಾ.ಬಸವರಾಜ ಸಬರದ)

೪೫ ಕನ್ನಡ ಬಂಡಾಯ ಸಾಹಿತ್ಯ–ಸಂ.ಸರಜೂ ಕಾಟ್ಕರ್–ಪುಟ–೧೩೧ (ಪ್ರತಿಸಲಿಲ್ಲ : ಕೆ.ಶರೀಫಾ)

ಗಂಡನಿಲ್ಲದೆ ತಾಯಿಯಾದ ಕುಂತಿಯ ಮನಸ್ಸನ್ನು ಪರಿಚಯಿಸುತ್ತ ಸರಸ್ವತಿ ಗೌಡ ಅವರು ಮಹಾಭಾರತದ ಕುಂತಿಯ ಚಿತ್ರಣವನ್ನು ಹೆಣೆಯುತ್ತಾರೆ. ಮದುವೆಯಾಗದೆ ಮುನಿಯ ಮಂತ್ರದಿಂದ ಕರ್ಣನನ್ನು ಪಡೆದ ಕುಂತಿ ಸಮಾಜದ ದೃಷ್ಟಿಗೆ ಹೆದರಿ ಹೆತ್ತ ಕೂಸನ್ನೇ ಗಂಗ ಮಡಲಿಗೆ ಅರ್ಪಿಸುತ್ತಾಳೆ. ಇಲ್ಲಿ ತನ್ನ ಕರುಳಬಳ್ಳಿಯಿಂದ ಹುಟ್ಟಿದ ಕೂಸನ್ನು ತೊರೆಯುವಾಗ ತಾಯಿಯ ಸಹಜ ಅಂತಃಕರಣ ಮೂಡಿದರೆ, ಇನ್ನೊಂದೆಡೆ ತಂದೆಯಿಲ್ಲದ ಮಗುವನ್ನು ಸಮಾಜ ಸ್ವೀಕರಿಸದ ಸ್ಥಿತಿ ವ್ಯಕ್ತವಾಗುತ್ತದೆ.

"ಹಸಿದ ಮೈಯ ಅಂತಃ ಸತ್ವ ಮೀರಿದ ತೃಷೆ
ಹುಡುಗಾಟವಾಡೆ ಬಿಟ್ಟಳು
ಅಸಾಧ್ಯವಾಯಿತು ಬದುಕು
ಮುಂದಿನ ವಿವೇಚನೆ ಗಾಳಿಗೆ ತೂರಿ
ತೃತೀಯ ಉಸಿರಲಿ
ಉಸಿರು ಕಂಡು ಕೆಂಗಡಲಿಲ್ಲ."[೪೬]

ಮುಖ್ಯವಾಗಿ ಪುರಾಣಗಳಲ್ಲಿ ಸ್ತ್ರೀ ಎದುರಿಸಬೇಕಾಗಿ ಬಂದಿರುವ ಸಮಸ್ಯೆಯನ್ನು ಸಮಕಾಲೀನ ಮಹಿಳೆಯ ಬದುಕಿನಲ್ಲಿಯೂ ಅನುಭವಿಸಬೇಕಾಗಿರುವ ಪರಿಸ್ಥಿತಿಯ ಒತ್ತಡವನ್ನು ಮಾರ್ಮಿಕವಾಗಿ ಹೇಳಲಾಗಿದೆ.

"ಸತ್ಯಕ್ಕಾಗಿ ಹಲುಬಿದ
ಹರಿಶ್ಚಂದ್ರನಂತವರ
ಮಾತು ಉಳಿಸಲು
ಕಿಕ್ಕಿರಿದ ಸಂತೆಯಲಿ
ಮೂಕ ಪ್ರಾಣಿಯಂತೆ
ತಲೆಯ ತಗ್ಗಿಸಿಕೊಂಡು
ಮಾರಾಟದ ಬೋಲಿಗಳನ್ನು
ಕೇಳುತ್ತ ಹರಾಜಾದಿರಲ್ಲೆ."[೪೭]

ಹರಿಶ್ಚಂದ್ರನ ಸತ್ಯ ಪರೀಕ್ಷಿಸಲು ಎಲ್ಲವನ್ನು ಕಸಿದುಕೊಂಡಾಗ ಅವನಲ್ಲಿ ಏನು ಇಲ್ಲದೇ ತನ್ನ ಹೆಂಡತಿಯನ್ನೆ ಮಾರುತ್ತಾನೆ. ಅದಕ್ಕೆ ಕವಯತ್ರಿಯಲ್ಲಿ ಆಕ್ರೋಶ ಭಾವವಿದೆ. ಸಿಟ್ಟಿದೆ 'ಮಾರಾಟದ ಬೋಲಿಗಳನ್ನು ಕೇಳುತ್ತ ಹರಾಜಾದಿರಲ್ಲೆ' ಎನ್ನುವಾಗ ಬಂಡಾಯ ಸಾಹಿತ್ಯದಲ್ಲಿರುವಂತಹ ಆವೇಶ, ಕ್ರೋಧ ಈ ಮಾತುಗಳಲ್ಲಿ ತಿಳಿದು ಬರುತ್ತದೆ. ದಲಿತರಲ್ಲಿ

---

೪೬ ಬಂಡಾಯ ಕಾವ್ಯ-ಸಂ.ಬರಗೂರು ರಾಮಚಂದ್ರಪ್ಪ-ಪುಟ-೩೪೯

೪೭ ಕನ್ನಡ ಬಂಡಾಯ ಸಾಹಿತ್ಯ-ಸಂ.ಸರಜೂ ಕಾಟ್ಕರ್-ಪುಟ-೧೩೦ (ಪ್ರಶ್ನಿಸಲಿಲ್ಲ : ಕೆ.ಶರೀಫಾ)

ದಲಿತಳಾದ ಮಹಿಳೆ ಶೋಷಣೆ, ಅತ್ಯಾಚಾರ ಇವೆಲ್ಲವುಗಳಿಂದ ರೋಸಿ ಹೋಗಿ ಹೆಣ್ಣಿನ ಭಾವನೆಗಳನ್ನು ಹೆಣ್ಣೇ ಅರಿಯಲು ಸಾಧ್ಯ. ಅದಕ್ಕೆ ಪೌರಾಣಿಕ ಸನ್ನಿವೇಶದಲ್ಲಿ ಸೀತೆ, ದ್ರೌಪದಿ, ಕುಂತಿ, ಚಂದ್ರಮತಿಯರನ್ನು ಯಾಕೆ ನೀವು ಹೀಗೆ ಮಾಡಿರಿ? ನೀವು ಎಲ್ಲವನ್ನೂ ಯಾಕೆ ಸಹಿಸಿಕೊಂಡಿರಿ? ಎಂದು ಹೆಚ್ಚಾಗಿ ಕವಯತ್ರಿಯರು ಅವರನ್ನು ಪ್ರಶ್ನಿಸುತ್ತಾರೆ.

ಯಾಕೆ ದೇವರು ಹೆಣ್ಣಿಗೆ ಗರ್ಭಾಶಯ ಎಂಬ ಒಂದು ಅಂಗವನ್ನು ಕೊಟ್ಟನೋ ಅದೊಂದೇ ಕಾರಣಕ್ಕೆ ಅವಳು ಸತ್ತು ಬದುಕಬೇಕು ಎಂದು ವ್ಯಥೆಪಡುತ್ತಾಳೆ. ಎಷ್ಟೋ ಸಂದರ್ಭಗಳಲ್ಲಿ ಹೆಂಡತಿಯಿಂದ ತೃಪ್ತಿ ಸಿಗದು ಎಂದು ಸೂಳೆ ಮನೆಗೆ ಹೋಗಿ ಬಿದ್ದು ಬರುತ್ತಾನೆ. ಕುಂತಿ ಸಮಾಜಕ್ಕೆ ಹೆದರಿ ತನ್ನ ಕರ್ಣನನ್ನು ನೀರಲ್ಲಿ ಬಿಟ್ಟಳು. ಯಾಕೆಂದರೆ ಅವಳಿಗೆ ಮದುವೆಯಾಗಿಲ್ಲ. ಇದನ್ನು ನೆನೆದು

"ತಂದೆ ಯಾರೋ
ಸೂರ್ಯನೋ ಅವರಪ್ಪನೊ
ಬಿತ್ತಿ ಬೈಗಿನಲ್ಲಿ ಕರಗಿಹೋದ
ಆದರೆ ನಿತ್ಯದ ಬೆಳಕಲ್ಲಿ
ತೇಲಿ ಬಿಡಬೇಕಾದವಳು
ತೇಲಿ ಬಿಟ್ಟವಳು.. ನಾನು."[೪೮]

ಕರ್ಣನನ್ನು ತಪಸ್ಸಿನ ಮೂಲಕ ಪಡೆದು, ಆ ತಪಸ್ಸಿನ ಮುಖಾಂತರ ಹುಟ್ಟಿದ ಮಗುವನ್ನು ನೀರಲ್ಲಿ ಬಿಟ್ಟಳು. ಕಾರಣ ಆ ಮಗು ಮದುವೆಗೆ ಮೊದಲೇ ಹುಟ್ಟಿದ್ದು, ಸಮಾಜಕ್ಕೆ ಹೆದರಿ ಅದರ ತಂದೆ ಯಾರೆಂದು ಕೇಳುವ ಜನರ ಬಾಯಿ ಮುಚ್ಚಲಾಗುವುದಿಲ್ಲ ಆದರೆ ಸಮಾಜಕ್ಕೆ ಹೆಣ್ಣು ಹೆದರ ಬೇಕಿಲ್ಲ ಎನ್ನುವುದು ಕವಯತ್ರಿಯ ಬಂಡಾಯ ನಿಲುವಾಗಿದೆ. ವಿಜಯಾ ದಬ್ಬೆಯವರ 'ಇರುತ್ತವೆ' ಕವನ ಸಂಕಲನದ ಕೆಲವು ಕವಿತೆಗಳು ಮಾದರಿಗಳ ವೈಭವಿಕರಣಗಳನ್ನು ನಿರಾಕರಿಸುತ್ತವೆ. 'ಪಾಪ ನೀವು ಹೊಣೆಯಲ್ಲ' ಕವಿತೆಯಲ್ಲಿ ಸ್ತ್ರೀಯರನ್ನು ದೇವತೆಯರೆಂದು ಫೋಟೊ ಇಟ್ಟು ಪೂಜೆ ಮಾಡುವ ಪದ್ಧತಿಯ ನಿರಾಕರಣೆಯಿದೆ. ಹಾಗೆಯೇ 'ನಾರೀಮಣಿಗಳಿಗೊಂದು ಕಿವಿಮಾತು' ಕವಿತೆಯಲ್ಲಿ ದ್ರೌಪದಿ ವಸ್ತ್ರಾಪಹಾರದ ಕತೆಯ ಪರಿಶೀಲನೆಯಿದೆ. ದ್ರೌಪದಿಯ ಮಾದರಿಯು ವಿಹಿತವಲ್ಲವೆಂದು ಸೂಚನೆಯಿದೆ. ಈ ಕವಿತೆಯು ಹೆಣ್ಣನ್ನು ಎಚ್ಚರಿಸುವ ಕವಿತೆಯೂ ಹೌದು."[೪೯]

---

[೪೮] ಇತಿ ಗೀತಿಕೆ-ವಿಜಯಾದಬ್ಬೆ-ಪುಟ-೧೩

[೪೯] ಸ್ತ್ರೀವಾದಿ ಚಿಂತನೆಗಳು-ಸಂ.ಡಾ.ಹಾ.ಮ. ನಾಗಾರ್ಜುನ-ಪುಟ-೨೭

"ನಿರ್ಭಯವಾಗಿರಿ
ನಿಶ್ಚಂತೆಯಿಂದಿರಿ
ನೀವು ಕತ್ತೆತ್ತಿ ನೋಡದಿರುವವರೆಗೆ
ನಿಮ್ಮ ಕಣ್ಣಾಗಿ ಕಾಯುವ ಗಂಡುಗಳು
ನಿಮ್ಮ ಸುತ್ತ ಇರುತ್ತಾರೆ
ಒಂದು ವೇಳೆ
ರಾವಣ ದುಶ್ಯಾಸನರು ಹುಟ್ಟಿ
ನಿಮ್ಮ ಹೊತ್ತು, ಸೀರೆ ಎಳೆದರೂ
ರಾಮ ಕೃಷ್ಣರಿದ್ದಾರೆ !...
ಮೀಸೆ ತಿರುವಿಕೊಳ್ಳುವ ಭೂಪರು."[೫೦]

ದ್ರೌಪದಿ ಸೀರೆಯನ್ನು ಸೆಳೆದವನು ಗಂಡು. ಈ ಸಂದರ್ಭದಲ್ಲಿ ವಸ್ತ್ರವನ್ನು ಅಕ್ಷಯ ಮಾಡಿದವನೂ ಗಂಡು. ಹೀಗಾಗಿ ಇಲ್ಲಿ ಪುರುಷರ ವಿಭಿನ್ನ ವ್ಯಕ್ತಿತ್ವವನ್ನು ಕಾಣುತ್ತೇವೆ. ದಲಿತ–ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ದಲಿತರು ಹೆದರದೆ ಮುನ್ನುಗಿದ್ದರು. ಮಹಿಳೆ ಮಾತ್ರ ಶೋಷಣೆಗೆ ಒಳಗಾಗುತ್ತಲೇ ಇದ್ದಳು. ಅಲ್ಲದೆ ಇಪ್ಪತ್ತನೆಯ ಶತಮಾನದಲ್ಲಿಯೂ ಹೆಣ್ಣು ಪುರುಷನ ಕೈಗೊಂಬೆಯಾಗಿಯೇ ಇದ್ದಾಳೆ. ಅದಕ್ಕಾಗಿ ಮಹಿಳೆಯೇ ಬಂಡಾಯ ಸಾಹಿತ್ಯದ ಕಾಲಘಟ್ಟದಲ್ಲಿ ಸ್ವತಃ ತಾನೇ ಪ್ರತಿಭಟನೆಯ ಧ್ವನಿಯಾಗಿ ಕಾವ್ಯ ರಚನೆಗೆ ತೊಡಗಿದ್ದನ್ನು ಕಾಣುತ್ತೇವೆ.

## ೫.೩ ಬಂಡಾಯ ಕವಿತೆಗಳಲ್ಲಿ ಅವ್ವ :

"ಆಧುನಿಕ ಸಾಹಿತ್ಯ ಪಡೆದುಕೊಂಡಿರುವ ವಸಾಹತುಶಾಹಿ ಅನುಭವದ ಬಗ್ಗೆ ಮಾತನಾಡುತ್ತ, ಆಶೀಶ್ ನಂದಿಯವರು ಬಹಳ ಮುಖ್ಯವಾದ ಒಂದು ಮಾತನ್ನು ಹೇಳಿದ್ದಾರೆ. "ವಸಾಹತಶಾಹಿ ಅನುಭವವೆಂದರೆ ವಿಶಿಷ್ಟವಾದದ್ದು, ಈ ಅನುಭವದಲ್ಲಿ ಆಳಿಸಿಕೊಳ್ಳುವವರು ಸ್ತ್ರೀತತ್ವವನ್ನು ಸೂಚಿಸುತ್ತಾರೆ. ಆಳುವವರು ಗಂಡಸುತನದ ಪ್ರತೀಕವಾಗುತ್ತಾರೆ. ಇಲ್ಲಿ ಸ್ತ್ರೀ ತತ್ವದ ಬಗೆಗೆ ಪರಿಭಾವಿಸಲಾಗಿರುವ ಅಂಶಗಳನ್ನು ಗಮನಿಸಬೇಕಿದೆ. ಇಲ್ಲಿ ಸ್ತ್ರೀ ತತ್ವವು, ಸ್ವೀಕೃತಿ ದುರ್ಬಲ ಮತ್ತು ತ್ಯಾಗದ ಅರ್ಥವಂತಿಕೆಯನ್ನು ಸೂಚಿಸಲ್ಪಡುವ ವಾದವಾಗಿದೆ."[೫೧]

"ಹೆಣ್ಣು ತಾನು ತಾಯಿಯಾಗುವ ಸರದಿ ಬಂದಾಗ ಹೆಣ್ಣು ತನ್ನ ತಾಯಿಯ ಪಾತ್ರವನ್ನು ಅಭಿನಯಿಸತೊಡಗುತ್ತಾಳೆ. ಒಂದರ್ಥದಲ್ಲಿ ಚಕ್ರ ಒಂದು ಸುತ್ತು ಸುತ್ತಿದಂತೆ. ಅವಳಿಗೆ ನಿಜವಾಗಿ

---

೫೦ ಇತಿಗೀತಿಕೆ–ವಿಜಯಾದಬ್ಬೆ–ಪುಟ–೧೬೧
೫೧ ಸ್ತ್ರೀವಾದಿ ಚಿಂತನೆಗಳು–ಸಂ.ಡಾ.ಹಾ.ಮ. ನಾಗಾರ್ಜುನ–ಪುಟ–೬

ಬಯಕೆ ಇದ್ದಲ್ಲಿ ಬಸಿರಾದಾಗ ತಾನೇ ಎಲ್ಲ ಹಂತಗಳನ್ನೂ ನಿಭಾಯಿಸುವ ಧೈರ್ಯ ತೋರುತ್ತಾಳೆ. ಇನ್ನೂ ತಾಯಿಯ ನೆರಳಲ್ಲಿ ಇರುವವಳಾದರೆ ಆಕೆ ತನ್ನ ತಾಯಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಹುಟ್ಟಿದ ಮಗು ಅವಳದೆಂದು ಅನ್ನಿಸುವ ಬದಲಿಗೆ ಅವಳಿಗೆ ತಮ್ಮನೋ, ತಂಗಿಯೋ ಹುಟ್ಟಿದಂತಿರುತ್ತದೆ. ಇಚ್ಛೆ ಪಟ್ಟರೂ ಒಬ್ಬಂಟಿಯಾಗಿ ಎದುರಿಸಲು ಧೈರ್ಯವಿಲ್ಲದಿದ್ದರೆ, ಆಕೆ ಮಗು ತನ್ನನ್ನೂ ರಕ್ಷಿಸುವ ಬದಲು ಅದು ತನ್ನನ್ನು ಮತ್ತೆ ಕಟ್ಟಿ ಹಾಕುವುದೆಂದು ಕಳವಳ ವ್ಯಕ್ತಪಡಿಸುತ್ತಾಳೆ. ಇದರಿಂದ ಮೈಮರೆಯಲುಬಹುದು ಎಳೆತನದ ಕಠಿನೆನಪುಗಳು ಕೂಡಾ ಬಸಿರು ಕಳೆದು ಹೋಗಲು ಕಾರಣವಾಗುತ್ತದೆ."[೫೨] ಪ್ರಕೃತಿ ಮಾತೆಯನ್ನು ತಾಯಿ ಎನ್ನುತ್ತಾ ಜಿ. ಎಸ್. ಶಿವರುದ್ರಪ್ಪನವರು.

"ಆಕಾಶದ ನೀಲಿಯಲಿ
ಚಂದ್ರ-ತಾರೆ ತೊಟ್ಟಿಲಲ್ಲಿ
ಬೆಳಕನಿಟ್ಟು ತೂಗಿದಾಕೆ
ನಿನಗೆ ಬೇರೆ ಹೆಸರು ಬೇಕೆ
ಸ್ತ್ರೀ ಎಂದರೆ ಅಷ್ಟೆ ಸಾಕೆ ? "[೫೩]

ಕವಿಗೆ ಸ್ತ್ರೀ ಪ್ರಕೃತಿ ಎಲ್ಲೆಡೆ ಬೇರೆ ಬೇರೆಯಾಗಿ ಕಾಣಿಸಿಕೊಂಡಿದ್ದಾಳೆ. ತಾಯಿ, ಹೆಂಡತಿ, ಮಗಳು, ಅಕ್ಕ, ತಂಗಿ, ದೇವತೆ ಹೀಗೆ ಬೇರೆ ಬೇರೆಯ ರೂಪಗಳಲ್ಲಿ ದರ್ಶನಗೊಂಡಿದ್ದಾಳೆ.

ಕವಯತ್ರಿ ಡಾ. ಕೆ. ಶರೀಫಾ ರವರು ತಾಯಿಯ ವಾತ್ಸಲ್ಯಮಯಿ ವ್ಯಕ್ತಿತ್ವ, ತ್ಯಾಗ ಗುಣವನ್ನು ಒಂದು ಕವಿತೆಯಲ್ಲಿ ಹೀಗೆ ಚಿತ್ರಿಸಿದ್ದಾರೆ.

---

[೫೨] ಸಿಮೋನ್ ದ ಬೊವಾ ದ ಸೆಕೆಂಡ್ ಸೆಕ್ಸ್-ಡಾ.ಎಚ್.ಎಸ್.ಶ್ರೀಮತಿ-ಪುಟ-೩೦೨

[೫೩] ಆಧುನಿಕ ಕವಿತೆಗಳ ಸಂಗ್ರಹ-ಸಂ.ಡಾ.ವಿಜಯಶ್ರೀ ಸಬರದ-ಪುಟ-೭೬

"ನಾಲ್ಕು ಗುಲಾಬಿಗಳ ಮೊಗ್ಗುಗಳನ್ನು
ಜೋಪಾನವಾಗಿ ಅರಳಿಸುವುದರಲ್ಲಿ
ಅಪ್ಪನ ಕಾವ್ಯದ ಚೇತನವಾಗಿ ದುಡಿದೆ
ಇನಿತೂ ಬೇಸರಿಸದೆ, ಗೊಣಗದೆ
ನೀನು ಸ್ವಚ್ಛ ಆಷಾಡದ ಗಾಳಿಯಂತೆ
ಸಮುದ್ರದ ಭೋರ್ಗರೆತದಂತೆ, ನಕ್ಷತ್ರ
ಗಳಡಿಯ ತಂಪಿನಂತೆ, ಅವರಿವ
ಜಗಳ ಬಿಡಿಸುತ್ತ, ಕೂಡಿಸುತ್ತ ಹೇಡಿ
ಗಳ ಛೇಡಿಸಿ ಧೈರ್ಯ ತುಂಬುತ್ತ
ಅನ್ಯಾಯಗಳ ವಿರುದ್ಧ ಕೂಗಾಡುತ್ತ
ಅಕ್ಕಿ, ಬೆಳೆ, ಹಾಲು, ಹೈನು ಸಾವು
ನೋವು, ರೋಗರುಜಿನ, ಮದುವೆ
ಮುಂಜಿಗಳಲ್ಲಿ ಮುಳಗಿ ಮನೆಯಲ್ಲಿ
ಹೊರಗೂ ದಣಿವಾದರೂ ತೋರದಂತೆ
ದುಡಿದಿ, ಅಪ್ಪಟ ಈ ಹಸಿರು ಭೂಮಿಯಂತೆ."[೫೪]

"ತಾಯಿಯ ಮನೆಯ ಕೆಲಸದಲ್ಲಿ ತೊಡಗಿದಾಗಲೂ ಜೀವ ಕೂಸಿನಲ್ಲಿರುತ್ತದೆ. ಒಡಲೆರಡು ಜೀವವೊಂದು ಎಂಬ ಈ ಕರುಣ ಮಧುರಾನುಭವವನ್ನು ತಾಯಿಯಂತೆ ಕಂಡವರಾರು? ಎಂಬ ಭಾವ ಸಂದರ್ಭವನ್ನು ಹೊಂದಿದ ತಾಯಿ-ಕೂಸು ಕವನದ ತಾಯಿಗೆ ಸದಾ ಕೂಸಿನದೆ ಚಿಂತೆ ಹೀಗಾಗಲು ತಾಯಿ ಮಗುವಿನ ಸ್ಥೂಲ ಹಾಗೂ ಸ್ಪರ್ಶವೇದ್ಯ ಸಂಬಂಧವಿರುತ್ತದೆ."[೫೫] ತನ್ನ ಮಕ್ಕಳನ್ನು ಪ್ರೀತಿಯಿಂದ ಸಾಕಿ ಸಲಹುತ ಅಪ್ಪನನ್ನು ನೋಡಿಕೊಳ್ಳುತ್ತಾ ಅಕ್ಕಿ, ಬೆಳೆ, ಹಾಲು, ಹೈನು ಇಂತಹ ಕೆಲಸಗಳಲ್ಲಿ ದಣಿವಾದರೂ ತೋರದೆ ಮುನ್ನಡೆದ ತ್ಯಾಗಮಯಿ ನೀನು ಎಂದು ಎಚ್.ಎಸ್. ಮುಕ್ತಾಯಕ್ಕ ಅವರು ಹೆಣ್ಣಿನ ತಾಯ್ತನದ ಹಾಗೂ ಗಂಡಿನ ಸಂಬಂಧವನ್ನು 'ಅಮ್ಮಾ' ಎಂಬ ಕವಿತೆಯ ಮೂಲಕ ವ್ಯಕ್ತಪಡಿಸುತ್ತಾರೆ. ಬಂಡಾಯದ ಮತ್ತೊಬ್ಬ ಕವಿ ಸರಜೂ ಕಾಟ್ಕರ್ 'ಅವ್ವ' ನಿನ್ನದೆ ಪ್ರತಿಬಿಂಬ ಎಂಬಲ್ಲಿ ಹೀಗೆ ಹೇಳುತ್ತಾರೆ.

---

[೫೪] ಹೊಸ ಶತಮಾನದ ಕಾವ್ಯ-ಸಂ.ಡಾ.ಕೆ.ಷರೀಫಾ-ಪುಟ-೧೬೨
[೫೫] ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ-ಡಾ.ಜಿ.ಕೃಷ್ಣಪ್ಪ-ಪುಟ-೮೫

"ನಿನ್ನ ಹಣೆಯ ಮೇಲೆ ಇದ್ದಷ್ಟೇ
ದೊಡ್ಡ ಕುಂಕುಮ
ನೀನು ಹಾಕಿಕೊಂಡಂತಹದ್ದೇ ಸೀದಾ ಸಾದಾ ಸೀರೆ
ತುಟಿಯಲ್ಲಿ ನಿನ್ನಂತೆಯ ಸ್ಮಿತಹಾಸ್ಯದ ಹೂವು
ದುಃಖದಲ್ಲೂ ಅಭಿಮಾನದಲ್ಲಿ ನಗುವ ನೋವು
ಕೈಗೆ ಕಾಜಿನ ಬಳೆಗಳು
ಅದಕ್ಕೆ ಹತ್ತಿದ ಅದೀಗ ಬಡೆದ ರೊಟ್ಟಿಯ ಹಿಟ್ಟು."[೫೬]

ತಾಯಿಯನ್ನು ಎಷ್ಟು ಹೊಗಳಿದರೂ ಸಾಲದು. ಅಲ್ಲದೆ 'ತಾಯಿ ಜನನಿ ಜನ್ಮಭೂಮಿಶ್ಚ' ಎಂಬುದು ಆಧುನಿಕ ಯುಗದಲ್ಲಿ ನೋಡಿದಾಗ ಯಾರು ದೊಡ್ಡ ಕುಂಕುಮ, ಕೈ ತುಂಬಾ ಗಾಜಿನ ಬಳೆಯನ್ನು ಹಾಕಿ ಕೊಳ್ಳುವುದಿಲ್ಲ. ಆದರೆ ದಾರಿಯಲ್ಲಿ ಕವಿ ಅಂತಹ ಹೆಣ್ಣನ್ನು ಕಂಡದ್ದು ನೋಡಿ ನೀನೇ ಅಂದುಕೊಂಡೆ. ಅವಳು ಇರಲಿಲ್ಲ ಎನ್ನುವದರ ಜೊತೆಗೆ ಹೆಣ್ಣಿಗೆ ಬೇಕಾದ ಶೃಂಗಾರವನ್ನು ಆಧುನಿಕ ಯುಗದಲ್ಲಿ ಕಾಣಸಿಗುವುದಿಲ್ಲ ಎಂದು ತಾಯಿಯ ಪ್ರತಿ ಬಿಂಬವನ್ನು ನೆನಸಿಕೊಳ್ಳುತ್ತಾರೆ. ಈ ಮಾತುಗಳು ಸಂಸ್ಕೃತಿಯ ಪ್ರತೀಕವೆನಿಸುತ್ತವೆ.

ನಮ್ಮ ನಿಮ್ಮನ್ನೆಲ್ಲ ಹಡೆದವಳು ಅಥವಾ ಪಡೆದವಳು ಹೆಣ್ಣೇ ಅಂದಾಗ ಆ ಹೆಣ್ಣನ್ನು ಯಾಕೆ ದ್ವೇಷಿಸಬೇಕು? ಅವಳನ್ನು ಶೋಷಣೆಗೆ ಒಳಪಡಿಸಿ ಕೀಳಾಗಿ ಏಕೆ ಕಾಣಬೇಕು? ಎನ್ನುವುದೇ ಈ ಕವಿತೆಯ ತಾತ್ಪರ್ಯವಾಗಿದೆ.

'ಮನೆಯೇ ಮೊದಲ ಪಾಠ ಶಾಲೆ ತಾಯಿಯೇ ಮೊದಲ ಗುರು' ಎನ್ನುವಂತೆ ಮಾಲತಿ ಪಟ್ಟಣ ಶೆಟ್ಟಿ ಅವರು 'ತಾಯಿ ಪಾಠ' ಕವಿತೆಯಲ್ಲಿ ಒಂದು ಮಗುವಿನ ಒಳ್ಳೆಯದು-ಕೆಟ್ಟದ್ದು ಎಲ್ಲವೂ ತಾಯಿ ಕಲಿಸಿದ ಪಾಠದ ಮೇಲಿರುತ್ತದೆ. ಅದಕ್ಕೆ ಅವರು ಮಗುವನ್ನು ತಾಯಿಯ ಮೂಲಕ ಪ್ರಶ್ನಿಸುತ್ತಾರೆ.

---

೫೬ ಆಯ್ದ ಹೊಸಗನ್ನಡ ಕವಿತೆಗಳು-ಸಂ.ಡಾ.ಡಿ.ಬಿ.ನಾಯಕ-ಪುಟ-೮೨ (ಅವ್ವ : ನಿನ್ನದೇ ಪ್ರತಿಬಿಂಬ-ಸರಜೂ ಕಾಟ್ಕರ್)

"ಮಗುವೆ
ಹೇಗೆ ಕಲಿಸಲಿ ನಿನಗೆ
ಸತ್ಯವನೆ ನುಡಿ ಎಂದು ?
ಸುಳ್ಳಿನಾಶ್ರಯ ಎಂದೂ ಸಲ್ಲದೆಂದು ?
ಸತ್ಯದ ಕೊಲೆ ಇಲ್ಲಿ ನಿತ್ಯದ ಸುದ್ದಿ
ನೀ ಎದೆಗುಂದದಂತೆ
ಹೂಮನ ಮುದುಡದಂತೆ
ಈ ಜಗದ ಸತ್ಯದ ಪರಿಯ
ಯಾವ ಗುರಿಯ
ತೋರಿ ಮುನ್ನಡೆಸಲಿ
ಹೇಳು ಕಂದಾ
ಹೇಗೆ ನಡೆಸಲಿ ಹೇಳು ?"[೨೪೭]

ಪ್ರಪಂಚವೇ ಸುಳ್ಳಿನ ಸಂತೆಯಾಗಿರುವಾಗ "ಸಾಮಾಜಿಕ ಕಟ್ಟಳೆಗಳಿಂದ ತತ್ತರಿಸುವ ಮಹಿಳೆ ಆರ್ಥಿಕ ಮುಗ್ಗಟ್ಟಿನ ಭಯದಿಂದ ವಿದ್ಯಾವಂತ ಅವಿದ್ಯಾವಂತರೆನ್ನದೆ ಬಹುಪಾಲು ಮಹಿಳೆಯರು ಕೌಟುಂಬಿಕ ದೌರ್ಜನ್ಯದ ವಿರುದ್ಧ ಬಹಿರಂಗವಾಗಿ ತಮ್ಮ ವಿರೋಧವನ್ನು ವ್ಯಕ್ತಪಡಿಸಲು ಹಿಂಜರಿಯುತ್ತಾರೆ. ನಮ್ಮ ಸಾಮಾಜಿಕ ಆಚರಣೆ ನಂಬಿಕೆಗಳಿಂದಾಗಿ ಮಹಿಳೆಯರು ಇಂದು ದೌರ್ಜನ್ಯಕ್ಕೆ ತುತ್ತಾಗುತ್ತಿದ್ದಾರೆ."[೨೪೮] ಇಂಥ ವ್ಯವಸ್ಥೆಯಲ್ಲಿ ಸತ್ಯ ಯಾವುದು ಸುಳ್ಳು ಯಾವುದೆಂದು ಗುರುತಿಸುವುದೇ ಕಷ್ಟವಾದಾಗ, ಇಡೀ ಸಮಾಜವೇ ಈ ಸುಳ್ಳಿನಲ್ಲಿ ನರಳುತ್ತಿರುವಾಗ ತಾಯಿ ಮಗುವಿಗೆ ಇದು ಸುಳ್ಳು ,ಇದು ಸತ್ಯ ಎಂದು ಹೇಗೆ ಹೇಳಲಿ? ಇಡೀ ಸಮಾಜವೇ ಅತ್ಯಾಚಾರ, ಶೋಷಣೆ, ಕೊಲೆ ಇವುಗಳಲ್ಲಿ ಮುಳುಗಿ ಹೋಗಿದೆ. ಹೀಗಿರುವಾಗ ಇದು ಹಾಲು, ಇದು ನೀರು, ಇದು ಸುಣ್ಣದ ನೀರು ಎಂದು ಹೇಳಲು ಸಾಧ್ಯವಾಗುತ್ತಿಲ್ಲ. ಇಂದಿನ ಪ್ರಸ್ತುತ ಜೀವನ ಹೇಗಿದೆ ಎಂದರೆ, ಸುಣ್ಣದ ನೀರನ್ನು ಹಾಲು ಎನ್ನಬೇಕು. ಇಲ್ಲವಾದಲ್ಲಿ ಸುಣ್ಣದ ನೀರು ಎಂದರೆ ನಾನು ನೀನು ಬದುಕಲು ಸಾಧ್ಯವಿಲ್ಲ. ಆದ್ದರಿಂದ ನಿನಗೆ ಸತ್ಯ ಹೇಳಿ ಮುನ್ನಡೆಸಲು ನನಗೆ ಆಗುತ್ತಿಲ್ಲ ಎನ್ನುತ್ತಾರೆ.

೨೪೭ ಎಷ್ಟೊಂದು ನಾವೆಗಳು–ಮಾಲತಿ ಪಟ್ಟಣಶೆಟ್ಟಿ–ಪುಟ–೫೬
೨೪೮ ಮಹಿಳಾ ಬದುಕು ಹೈದ್ರಾಬಾದ ಕರ್ನಾಟಕ ಕಥನ ಸಾಹಿತ್ಯದಲ್ಲಿ–ಡಾ.ಬಿ.ಬಿ.ಚಂದ್ರಕಲಾ–ಪುಟ–೬೯.೭೦

"ಬೇಡಮ್ಮ ಬೇಡ
ಆಕಾಶದಗಲಕ್ಕೂ ನಿನ್ನ ಸೆರಗೂ ನರಿ ಹರಡಿ
ಬಿಸಿಲ ಮರೆಸಿ ಬದುಕಿನ ಹಸಿರ ಬಿಳಿಚಿಸಬೇಡ
ವರುಷ ಹದಿನೇಳಾಯ್ತು ಸೆರಗು ಹಾರಿಸಿ ಅಲೆದು
ಕಂಡ ಕಂಡವರಿಗೆಲ್ಲ ಕಣ್ಣ ಹೊಡೆಯ ಬೇಡ
ಗಾಳಿಗುದುರಿ ಹತ್ತಿ ಗಂಡು ಬೀರಿಯಾಗ ಬೇಡವೆಂದು
ನಿನ್ನಮ್ಮ, ಅವಳಮ್ಮ, ಅವಳಮ್ಮ
ಲಾಗಾಯ್ತಿನಿಂದ ನನ್ನಂಥ ಪಡ್ಡೆಗಳ
ಕಿವಿಯಲ್ಲಿ ಊದಿದ ಪುಂಗಿ ನೀನೂ
ಊದ ಬೇಡ
ಈಗ ತಾನೆ ಹೆಡೆಯಾಡಿಸುತ್ತಿದ್ದೇನೆ
ಯಾರನ್ನಾದರೂ ಕಚ್ಚಿ ವಿಷವಿಳಿಸಿಕೊಳ್ಳುತ್ತೇನೆ
ನನಗೆ ದಾರಿ ಬಿಡು"[೫೯]

"ಸ್ವಂತಿಕೆಯನ್ನು ಪೋಷಿಸಿಕೊಳ್ಳದ ಭಾರತೀಯ ಸುಶಿಕ್ಷಿತ ಮಹಿಳೆಯರು ಪಿತೃಪ್ರಧಾನ ವ್ಯವಸ್ಥೆಯ ಅಡಿಗಲ್ಲುಗಳಾದ ವಿವಾಹ ಮತ್ತು ಕುಟುಂಬದಂಥ ಪರಿಕಲ್ಪನೆಗಳನ್ನು ಪ್ರಶ್ನೆ ಮಾಡದೇ ಹೋದರು, ಸ್ತ್ರೀಯರ ಸ್ಥಾನಮಾನಗಳ ಚಿಂತನೆ ನಡೆಸದೇ ಹೋದರು. ಇದರ ಪರಿಣಾಮವಾಗಿ ವರದಕ್ಷಿಣೆ, ಕೌಟುಂಬಿಕ ಹಿಂಸೆ ಹಾಗೂ ವಧು ದಹನದಂತಹ ಸಮಸ್ಯೆಗಳು ಬಗೆ ಹರಿಯದ ಸ್ವರೂಪ ತಳೆದುಬಿಟ್ಟಿವೆ ಎಂದರೆ ಅತಿಶಯವಾಗಲಾರದು. ಶಿಕ್ಷಿತ ಸ್ತ್ರೀಯರ ಬೌದ್ಧಿಕ ಶಕ್ತಿ ಪುರುಷ ಸಂತಾನದ ಅಕ್ಷರಾಭ್ಯಾಸ ಮಾಡಿಸವಲ್ಲಿ ಹಾಗೂ ಮನೆಯ ವ್ಯವಹಾರಗಳನ್ನು ನಿರ್ವಹಿಸುವಲ್ಲಿ ಕಮರಿ ಹೋಗುತ್ತಿದೆ ಎಂದು ಹೇಳಬಹುದಾಗಿದೆ. ವರದಕ್ಷಿಣೆ, ಕೌಟುಂಬಿಕ ಹಿಂಸೆ, ವಧು ದಹನ ಮತ್ತಿತರ ಸಮಸ್ಯೆಗಳು ಪರಿಹಾರ ಕಾಣದೆ, ಜ್ವಲಂತವಾಗಿ ಸ್ತ್ರೀಯರನ್ನು ನಿತ್ಯವೂ ಕಾಣುತ್ತೇವೆ ಎಂದರೆ ತಪ್ಪಾಗಲಾರದು."[೬೦]

ಅದಕ್ಕೆ ಕವಯತ್ರಿ ನೀನು ನಿನ್ನ ಅಮ್ಮ ಅವಳಮ್ಮ ಇದ್ದ ಹಾಗೆ ನಾನು ಇರಲೂ ಆಗುವುದಿಲ್ಲ. ನಾನು ಬದಲಾಗಬೇಕು, ಗಂಡು ಬೀರಿಯಾಗಬೇಕು ಎಂದಿದ್ದಾರೆ. "ಇಂಥ ಒಂದು ಸೆರಗು ಇಂದು ನಿನ್ನೆಯದ್ದು. ಅದು ಆಕಾಶದಂತೆ ಅನಂತವಾಗಿ, ಆದಿ ಅಂತ್ಯವಿಲ್ಲದೆ ಸ್ತ್ರೀಯರು ಮೇಲೆ ಕವಿದಿದೆ. ಸೆರಗು ಸರಿಸಿ ಹೊರಬಂದು ಜೀವ ಚೈತನ್ಯವಾದ ಬಿಸಿಲು–ಬೆಳಕು ಬಯಲು–ಗಾಳಿಯನ್ನು ಸೇವಿಸಬೇಕೆಂಬುದು ಪ್ರತಿ ಹೆಣ್ಣಿನ ಕನಸು. ಸೆರಗು ಹಾರಿಸಿ, ಗಾಳಿ ಗುದುರಿ ಹತ್ತಿ, ಗಂಡು ಬೀರಿಯಾಗುವ ಆಸೆ. ಅಮ್ಮ ಯಾವುದನ್ನು ಬೇಡ ಅನ್ನುತ್ತಿದ್ದಾಳೋ ಅದನ್ನು

---

೫೯ ತೊಗಲು ಗೊಂಬೆಯ ಆತ್ಮಕತೆ–ಸ.ಉಷಾ.ಪುಟ–೧೫

೬೦ ಮಹಿಳಾ ಶೋಷಣೆಯ ನೆಲೆಗಳು–ಡಾ.ಅನುಸುಯಾ ಕದಂ–ಪುಟ–೩೬೪

ಮಾಡುವ, ಅಮ್ಮನು ವಿಧಿಸಿದ ಪರಿಪಳ, ಮೀರುವ ತುಡಿತ ಈ ಪದ್ಯದಲ್ಲಿದೆ, ಧಿಕ್ಕಾರದ ಜೊತೆ, ಈ ನಿರ್ಧಾರಕ್ಕೆ ತನ್ನನ್ನು ದೂಡದ ವ್ಯವಸ್ಥೆಯ ಬಗೆಗೂ ಆಕ್ರೋಶವಿದೆ."[೬೧]

ನಮ್ಮ ತಾಯಿ ಭಾರತಮಾತೆ, ಭೂಮಿತಾಯಿ ಕೂಡ ಹೆಣ್ಣು. ಇಷ್ಟೆಲ್ಲ ಸಹನೆ, ತಾಳ್ಮೆ, ತ್ಯಾಗ ಎಲ್ಲವೂ ಹೆಣ್ಣಿನಲ್ಲಿ ಇರುವಾಗ ಅವಳನ್ನು ಕೀಳಾಗಿ ಕಾಣವದು ಯಾಕೆ? ಎನ್ನುವ ಪ್ರಶ್ನೆ ಉದ್ಭವವಾಗುತ್ತದೆ. ಅದಕ್ಕೆ ಅಲ್ಲಮ ಪ್ರಭುಬೆಟ್ಟದೂರ ಅವರ ಕವನವಾದ 'ಮಾತಾಡು ಭಾರತಿ' ಕವನ ಸಂಕಲದಲ್ಲಿ ಭಾರತ ಮಾತೆ ಹೇಗೆ ಪರಿವರ್ತನೆಯಾದಳು ಎಂಬುದನ್ನು ಹೇಳುತ್ತಾರೆ.

"ಹೊಕ್ಕಳ ಬುಡ್ಡಿ ಕೆಳಗೆ ಸೀರೆ ಉಟಗಂಡ
ಛಂದಾಗಿ ಜಡೆ ಹೆಣಗಂಡ
ಹೂ ಮುಡಕೊಂಡ
ಬಳೆ ಝುಣ ಝುಣನಿಸಿಗ್ಯಾಂತ ನಡಿ ಹೆಣ್ಣೇ ಅಂದರ
ಇಲ್ಲ ನನಗೆ ಸ್ಕರ್ಟಬೇಕ, ಜೀನ್ಸ್‌ಬೇಕ, ಮ್ಯಾಕ್ಸಿಬೇಕ,
ಹಾಪ ಪ್ಯಾಂಟ ಬೇಕಂತಿ
ಭಾರತಿ ಅಂಬೋ ಹೆಸರೇ ಇರಲಿ ಅಂದರ,
ಇಂಡಿಯಾ ಅಂತ ಬದ್ಲಾಯಿಸಿಗೆಂತಿ."[೬೨]

ಲೋಹಿಯಾವಾದದ ಹಿನ್ನೆಲೆಯಲ್ಲಿ ನೋಡಿದಾಗ ಭಾರತ ಎನ್ನುವುದು ಬದಲಾಗುತ್ತಿದೆ. ಇದು ಜನ ಸಾಮಾನ್ಯರ ಸ್ವತ್ತಾಗದೇ ವಿದೇಶಿಯರ ಸ್ವತ್ತಾಗುತ್ತಿದೆ. ಭಾರತೀಯ ಸಂಸ್ಕೃತಿಯು ಬದಲಾಗುತ್ತಿದೆ. ಹೀಗೆ ಬದಲಾದಾಗ ಸಾಮಾನ್ಯ ಜನರ ಗತಿಯೇ ಅಧೋ ಗತಿಯಾಗುತ್ತದೆ ಎಂದು ಇದರ ನಿಲುವು. ಹೆತ್ತವಳು ಮಾತ್ರ ತಾಯಿಯಲ್ಲ ಭೂಮಿ, ಭಾರತಾಂಬೆ, ಗಂಗೆ, ಅನ್ನ ನೀಡುವವರು ಎಲ್ಲರೂ ತಾಯಿಯೇ. ಅನ್ನ ನೀಡುತ್ತಾಳೆ ಭೂಮಿ ತಾಯಿ, ಮಾತು ಕಲಿಸುತ್ತಾಳೆ. ಕನ್ನಡ ತಾಯಿ, ಪಾಪ ತೊಳೆಯುತ್ತಾಳೆ. ಕಾವೇರಿಯ ತಾಯಿ ಅನ್ನುವ ಮಾರ್ಕ್ಸ್‌ವಾದಿ ನಿಲುವು ಇವರೆಲ್ಲರು ತಮ್ಮ ಕಷ್ಟ ನೋವು ನಲಿವುಗಳನ್ನು ಬಚ್ಚಿಟ್ಟುಕೊಂಡು ಇನ್ನೊಬ್ಬರಿಗೆ ಸುಖ ಕೊಡುತ್ತಾರೆ. ಅದಕ್ಕೆ ಮಲ್ಲಿಕಾ ಘಂಟಿಯವರು ಆ ಮಹಾತಾಯಿಯರನ್ನು ಹರಸುತ್ತಾರೆ.

"ಹುಟ್ಟು ಸಾವುಗಳ ದಂಡೆಯ ನಡುವೆ
ಹರಿಯುತ್ತಾಳೆ
ಜೀವ ಜಂಜಡಗಳ ಹೊತ್ತು
ತಾಯಿ ಮಹಾದಾಯಿ."[೬೩]

---

೬೧ ದಲಿತ-ಬಂಡಾಯ ಕಾವ್ಯ ಮತ್ತು ವಿಚಾರವಾದಗಳು-ಡಾ.ಪ್ರಹ್ಲಾದ ಅಗಸನ ಕಟ್ಟೆ-ಪುಟ-೪೦೮

೬೨ ಇದು ನನ್ನ ಭಾರತ-ಅಲ್ಲಮಪ್ರಭು ಬೆಟ್ಟದೂರ-ಪುಟ-೧೪

೬೩ ಜೆಲ್ಲಿದಚ್ಚು ಮತ್ತು ಇರುವೆ ದಂಡು-ಡಾ.ಮಲ್ಲಿಕಾ ಘಂಟಿ-ಪುಟ-೪೦

ಸದಾ ಸಮಾಜದ ಸ್ವಾಸ್ಥ್ಯಕ್ಕಾಗಿ ಮಹಿಳೆಯರ ಕಣ್ಣೀರಿಗಾಗಿ ಕರಗುವ ಮಲ್ಲಿಕಾ ಘಂಟಿಯವರು ಹೆಣ್ಣು ಯಾವಾಗಲೂ ಬದುಕು ಮತ್ತು ಸಾವಿನ ಮಧ್ಯೆ ಹೋರಾಟ ನಡೆಸುವಳು ಏಳು ಜೀಳೆನ್ನದೇ ಸಾವಿಗೂ ಹೆದರದೇ ತನ್ನ ಕಾರ್ಯದಲ್ಲಿ ನಿರತಳಾಗಿರುವವಳು ಎಂದು ಹೇಳುತ್ತ' ಅವಳನ್ನು ಮಹಾದಾಯಿ ಎಂದು ಬಣ್ಣಿಸುತ್ತಾರೆ.

"ಗೌರಿ ಬಣ್ಣದ ಅವ್ವನ ತೋಳು ತೊಡೆಯ
ಮೇಲೆ ಬಾಳೆ ಬನ ಅಲ್ಲಿ ಗಿಳಿ ಕೋಗಿಲೆ
ಗೊರವಂಕಗಳ ಸಾಲು ಹಸಿರು ಒಣಗದಂತೆ
ಹಕ್ಕಿಕೊರಳು ಸ್ವರಗದಂತೆ ನೀರುಣಿಸುತ್ತಾಳೆ
ನೆಲದ ಪದರು ಪದರಿಗು ಹಗಲು ರಾತ್ರಿಗಳ ಹೊಸೆದು."[೬೪]

ಗಂಗೆ, ಕಾವೇರಿಯ ಹರಿಯುತ್ತಾರೆ. ಎಲ್ಲರನ್ನು ನೋಡುತ್ತಾ ನೀರುಣಿಸುತ್ತಾ ಪಕ್ಷಿ, ಪ್ರಾಣಿಗಳಿಗೆ ನೀರು ಕೊಡುತ್ತಾ ತಾನು ಸವೆದು ಇನ್ನೊಬ್ಬರಿಗೆ ನೀರು ಕೊಟ್ಟು ಜೀವಿಸು ಎನ್ನುತ್ತಾ ಭೂಮಿಯ ಪದರು ಪದರಿಗೂ ನೀರು ಕೊಡುತ್ತಾಳೆ. ಆ ಮಹಾದಾಯಿ ಗಂಗೆಯ ಪ್ರತಿಬಿಂಬವು ಇಲ್ಲಿದೆ.

"ಹೆಣ್ಣಿನ ಸ್ವಾತಂತ್ರ್ಯ ನಿಷಿದ್ಧ
ಎಂಬುದು ನಮ್ಮ ನಾಡಿನ ನೆಲಗುಣ ಜಲಗುಣ
ಮಾಡೀ ಕಾಪಾಡಿದೀ ಭಾರತೀ ಪುತ್ರರು
ಇಂದು ಸಾವಿರ ಜಾತಿ – ಭಾಷೆಗಳಲ್ಲಿ
ಹರಿದು ಹಂಚಿದ್ದಾರೆ ದೇಶವನ್ನು
ಸಂಸ್ಕೃತಿಯ ಕೋಶವನ್ನು, ಹೆತ್ತ ತಾಯಿಯನ್ನು."[೬೫]

'ವಿರಹೋತ್ಸವ', 'ಹೊಸಹಾಡು', 'ಕಣ್ಣುಗಳಲಿ ಕನಸು ತುಂಬಿ' ಮೊದಲಾದ ಸಂಕಲನಗಳನ್ನು ಪ್ರಕಟಿಸಿರುವ ಹೇಮಾ ಪಟ್ಟಣ ಶೆಟ್ಟಿಯವರ ಕಾವ್ಯ ಜಗತ್ತು–ಮುಖ್ಯವಾಗಿ ಕುಟುಂಬದೊಳಗಿನ ಆಪ್ತ ಸಂಬಂಧಗಳ ಮೂಲಕ ಅನಾವರಣಗೊಳ್ಳುತ್ತ ಸ್ತ್ರೀಯ ಜಗತ್ತನ್ನು ಅನ್ವೇಷಿಸಲು ಹೊರಡುತ್ತದೆ. ಅದು ತನ್ನ ಮಗ, ಮಗಳು, ತನ್ನ ಗಂಡ, ಒಂದು ಹೂ, ಒಂದು ರದ್ದಿ ಕಾಗದ ಇರಬಹುದು. ಅದರ ಮೂಲ ಕೇಂದ್ರ ಮಾತ್ರ ಸ್ತ್ರೀ ಪರ ದನಿಯೇ ಆಗಿದೆ.

---

೬೪ ಬೆಲ್ಲದಚ್ಚು ಮತ್ತು ಇರುವೆ ದಂಡು–ಡಾ.ಮಲ್ಲಿಕಾ ಘಂಟಿ–ಪುಟ–೪೦

೬೫ ಕಣ್ಣುಗಳು ಕನಸು ತುಂಬಿ – ಹೇಮಾ ಪಟ್ಟಣಶೆಟ್ಟಿ–ಪುಟ–೩೧

"ಕದವ ತಟ್ಟದಿರು ಮಗಳೆ
ತೆರೆಯಲಾರೆ ನಿನ್ನ ಕರೆಯಲಾರೆ
ನಿನಗೆ ಗೊತ್ತೆ ಮಗಳೆ
ಇದೆಂಥ ಪಾಷಾಣ ಪಾಪ ಕೂಪವೆಂದು
ಧರೆಯಾಳುವವರೆಲ್ಲಾ ದೈತ್ಯರೆಂದು
ನಿನಗೆ ಗೊತ್ತೆ ಮಗಳೇ."[೬೬]

ಭೂಮಿಯ ಮೇಲೆ ಇರುವ ಪುರುಷ ಸಮಾಜವನ್ನು ದೈತ್ಯರೆಂದು, ಅಲ್ಲಿಗೆ ಮಗಳು ಬರುವುದು ಬೇಡ ತಾನು ಅನುಭವಿಸಿದ ನೋವನ್ನು ತನ್ನ ಮಗಳು ಅನುಭವಿಸಬಾರದು. ಅದಕ್ಕೋಸ್ಕರ ಮಗಳಿಗೆ ನೀನು ಕದ ತಟ್ಟಿ ಧರೆಗೆ ಬರಬೇಕೆಂದರು ನಾನು ಮಾತ್ರ ಆ ಕದವನ್ನು ತೆರೆಯುವುದಿಲ್ಲ. ನೀನು ಮಗಳಾಗಿ ಧರೆಗೆ ಬರುವುದಕ್ಕಿಂತಲೂ ಹಾಗೆಯೇ ಹುಟ್ಟದೇ ಇರುವುದೇ ಒಳ್ಳೆಯದು ಎಂದು ಮಗಳು ಈ ಧರೆಗೆ ಬಂದು ಕಷ್ಟ ಅನುಭವಿಸುವುದು ಕವಯತ್ರಿಗೆ ಸಹಿಸಲಾಗುವುದಿಲ್ಲ. ಅದಕ್ಕೆ ಭೂಮಿಗೆ ಬರದೇ ಇರುವುದೇ ಒಳ್ಳೆಯದು ಎನ್ನುತ್ತಾರೆ.

ಮಗಳು ತಾಯಿ ಸಂಬಂಧಗಳು ಜೊತೆಗೆ ತಾಯಿಯ ಪ್ರತಿಬಿಂಬ ಇವೆಲ್ಲವೂ ಅಂತರ್ ಸಂಬಂಧ. ತಾಯಿಯಾದವಳು ಹೇಗೆ ತನ್ನ ಮಮತೆ, ತ್ಯಾಗದ ಪ್ರತೀಕವಾಗಿದ್ದಾಳೆ.

"ನನ್ನೆದೆಯ ಮೊಲೆಯಿಂದ ಹರಿದು ಬಂದಿಹ ಹಾಲು
ಹಾಲಲ್ಲ ಮಗುವೇ ಅದು ನನ್ನೆದಯ ನಂಜು
ಅದನುಂಡು ಬೆಳೆಯಬೇಕಿಂದು ನೀ ನಂಜುಂಡನಾಗಿ
ನನ್ನೆದೆಯ ಬೆಂಕಿಗೆ ತಂಪೆರೆಯಲು."[೬೭]

ಮಲ್ಲಿಕಾ ಘಂಟಿಯವರ ಈ ಕವನದಲ್ಲಿ ರೊಚ್ಚು, ದ್ವೇಷಗಳು ತುಂಬಿ ಕೊಂಡಿದೆ. ಅದಕ್ಕೆ ಮುಂದಿನ ಪೀಳಿಗೆಗೆ ಆ ಆವೇಷ ಭಾವನೆ ತುಂಬತ್ತ ಸ್ತ್ರೀ ವಿರೋಧಿ ಸಮಾಜವನ್ನು ಬದಲಾಯಿಸಲು ತನ್ನ ನಂಜುಂಡು ನಂಜುಂಡನಾಗಬೇಕು. ಸ್ತ್ರೀವಾದ ಸಮಾಜದ ಉದ್ಧಾರವಾಗಬೇಕು ಹೆಣ್ಣಿನ ಬದುಕು ಹೊತ್ತಿ ಉರಿಯುತ್ತಿದೆ. ಉರಿಯುತ್ತಿರುವ ಬೆಂಕಿ ಆರಿಸಿ ತಂಪೆಯೆರೆಯಲು ತನ್ನ ಮಗುವಿಗೆ ಸಂದೇಶ ಕೊಡುತ್ತಾರೆ.

"ನಿನ್ನ ನೀ ಉಳಿಸಿಕೊಳ್ಳಲು
ಮೈತುಂಬ ಮುಳ್ಳು ಬೆಳೆಸಿಕೋ"

---

೬೬ ಜಾಣೆ ಮತ್ತು ಕವಿಗಳು-ಎಂ.ಆರ್.ಕಮಲ-ಪುಟ-೪೩

೬೭ ಕನ್ನಡ ಬಂಡಾಯ ಸಾಹಿತ್ಯ-ಸಂ.ಸರಜೂ ಕಾಟ್ಕರ-೧೪೨(ನಮ್ಮದಲ್ಲ ಧ್ವಜವಿಂದು : ಮಲ್ಲಿಕಾ ಘಂಟಿ)

ಎನ್ನುತ್ತಾರೆ. ಮಗಳನ್ನು ಹೋರಾಟಕ್ಕೆ ಸಿದ್ಧಗೊಳಿಸುತ್ತಾರೆ. ನಿನ್ನ ಇತಿಹಾಸವನ್ನು ನೀನು ಮರೆತು ಬಿಟ್ಟರೇ ಮುಂದಿನ ಇತಿಹಾಸ ಸೃಷ್ಟಿಸಲು ಸಾಧ್ಯವಿಲ್ಲ. ಅದಕ್ಕೆ ನೀನು ಮುಂದಿನ ಇತಿಹಾಸ ನಿರ್ಮಾಣಕ್ಕೆ ಗಟ್ಟಿಗೊಳ್ಳಬೇಕೆಂದು ಮಲ್ಲಿಕಾ ಘಂಟಿ ಮಗಳಿಗೆ ಸಂದೇಶ ಕೊಡುತ್ತಾರೆ.

**೫.೪ ಬಂಡಾಯ ಕವಿತೆಗಳಲ್ಲಿ ಮಹಿಳೆ ಮತ್ತು ಪರಂಪರೆ :**

ಪಾಶ್ಚಾತ್ಯದ ಹೊಸ ಓದು ವಸಾಹತುಶಾಹಿಯ ಪ್ರಭಾವ ಮಹಿಳೆಗೆ ತನ್ನತನದ ಅರಿವು ಮೂಡಿಸಲು ಸಹಾಯಕವಾಗಿದೆ. ಮಹಿಳೆಯರ ಅತೀವ ಕಾಳಜಿಯ ನಿಲುವಿನಿಂದಲೇ ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಂಡ ಬರಹಗಾರ್ತಿ ಸಿಮೊನ್ ದ ಬೊವಾ ಮತ್ತು ಕೆಟ್ ಮಿಲ್‌ಟ ಸ್ತ್ರೀ ವಾದಿ ಧ್ಯೇಯದ ಈ ಲೇಖಕಿಯರು ಹೆಣ್ಣಿನ ಸ್ವಾತಂತ್ರ್ಯದ ಬಗ್ಗೆ ದನಿ ಎತ್ತಿದ್ದಾರೆ. ಸಿಮೊನ್ ದ ಬೊವಾ ಅವರ 'ಸೆಕೆಂಡ್ ಸೆಕ್ಸ್' ಮತ್ತು 'ಕೆಟ್ ಮಿಲ್‌ಟಳ 'ಸೆಕ್ಸುಯಲ್ ಪಾಲಿಟಕ್ಸ್' ಕೃತಿಗಳು ಮಹಿಳಾ ಚಳುವಳಿಗೆ ಮೂಲ ಪ್ರೇರಣೆ ಒದಗಿಸಿದಂತಹವು. ಹಾಗೆಯೇ ಹ್ಯಾರಿಯೆಟ್ ಟೆಲರ್ ಮಿಲ್ಲಳ 'ದಿ ಎನ್ ಪ್ರಾಜೈಸ್ ಮೆಂಟ್ ಆಪ್ ವುಮೆನ್' ಮಿಶಲ್ ಪುಪುಕೋ ಅವರ 'ಹಿಸ್ಟರಿ ಆಪ್ ವುಮೆನ್' ಗಳಂತ ಕೃತಿಗಳು ಮಹಿಳೆಗೆ ಹೊಸ ಪ್ರಪಂಚದ ಅನುಭವ ಒದಗಿಸಿವೆ. ಹೀಗೆ ಪಾಶ್ಚಾತ್ಯ ವಿಚಾರ ಶ್ರೇಣಿಗಳಿಂದಲೇ ಪ್ರಭಾವಿತಗೊಂಡ ಕನ್ನಡದ ಹಲವು ಮಹಿಳಾ ಚಿಂತಕಿಯರು ಸ್ತ್ರೀ ವಿಮೋಚನೆಗಾಗಿ ಪ್ರಯತ್ನಿಸಿದ್ದಾರೆ.

ತನ್ನತನದ ಹುಡುಕಾಟಕ್ಕೆ ತೊಡಗಿರುವ ಮಹಿಳೆಯ ಮನಸ್ಥಿತಿ ಬಹುತೇಕ ಕವನಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಶ್ರೀಮಂತವೆನಿಸಿಕೊಳ್ಳುವ ನಮ್ಮ ಸಂಸ್ಕೃತಿ ಸ್ತ್ರೀಯನ್ನು ಗುಲಾಮಳನ್ನಾಗಿ ದುಡಿಸಿಕೊಂಡಿದೆ. ಹೆಣ್ಣಿಗೆ ಅವಳದೇ ಆದ ಭಾವಜಗತ್ತಿದೆ ಗಂಡಿನಂತೆ ತಾನುಕೂಡ ಸ್ವತಂತ್ರವಾಗಿ ಬದುಕಬೇಕೆಂಬ ಆಸೆ ಇದೆ. ಆದರೆ ಅಪ್ಪ ನೆಟ್ಟಿದ ಆಲದ ಮರಕ್ಕೆ ಜೋತು ಬೀಳುವ ನಮ್ಮ ವ್ಯವಸ್ಥೆಯಿದೆಯಲ್ಲಾ ಅದು ಅವಳ ಭಾವನಾಲೋಕಕ್ಕೆ ಕೊಳ್ಳಿ ಇಟ್ಟಿದೆ. ಈ ಪಾರಂಪರಿಕ ಒತ್ತಡಗಳ ಮಧ್ಯೆಯು ಸಿಡಿದು ನಿಲ್ಲುವ ಮನಸ್ಥಿತಿ ಇಂದು ಮೈ ಪಡೆಯುತ್ತಿದೆ.

ಸ್ತ್ರೀವಾದಿ ಧ್ವನಿಯ ಮೊಟ್ಟ ಮೊದಲ ಅಧಿಕೃತ ದನಿ ಶೈಲಜಾ ಉಡಚಣ ಎಂದು ಹೇಮಾ, ಅವರು ಗುರುತಿಸುತ್ತಾರೆ. ಇವರ 'ಒಂದು ಗಳಿಗೆ' ಸಂಕಲನ ೧೯೭೭ ರಲ್ಲಿ ಪ್ರಕಟವಾಗಿ ಮಹಿಳೆಯರ ಅಧಿಕೃತ, ಸ್ವತಂತ್ರ ದನಿಯ ಅವಶ್ಯಕತೆಗೆ ಒತ್ತು ಕೊಟ್ಟಿತು.

“ಅಂದು ಇತ್ತು । ಹಲವರ ತುತ್ತನುಂಡು । ತೃಪ್ತಿಗೊಳ್ಳುವ ಮನಸು
ಇಂದು ಬೆಳೆದು । ನನಗೆ ನಾನೆ ನಿರ್ಮಿಸಬೇಕು
ನನ್ನಲೋಕದ ಕನಸು
(ಚುಟುಕು)–ಶೈಲಜಾ ಉಡಚಣ

ಕನ್ನಡ ಸಾಹಿತ್ಯದಲ್ಲಿ ಮಹಿಳೆಯರು ತಮ್ಮದೇ ಆದ ದನಿಯನ್ನು ರೂಪಿಸಿಕೊಳ್ಳುವ ಆರಂಭದ ಕುರುಹುಗಳನ್ನು ಇಲ್ಲಿವೆ.” [೬೮]ಕಾಣುತೇವೆ.

“ರಕ್ತ ಮಾಂಸದ ಪಿಂಡವಾಗಿ ಹುಟ್ಟಿ ಬೆಳೆದು
ಅದಕ್ಕೆ ಬೆಲೆ ಕೊಡ ಬೇಡ ಎನ್ನುವ ಇವರಾರೂ
ನನಗೆ ಬೇಡವೇ ಬೇಡವಯ್ಯಾ
ಅಯ್ಯಾ ನನಗೆ ಬೇಕು
ಕ್ಷಣ ತಿಕ್ಕಾಟದಲ್ಲಿ ಹೇಸಿಗೆ ನಡುವೆ
ಹುಟ್ಟಿ ಅಲ್ಲಿಯೇ ಇನ್ನೂ ಗಿರಗಿಟ್ಲೆ
ಆಡುತ್ತಿರುವ ನನ್ನ ನಾನೇ ಅರಿವುದಯ್ಯ.”[೬೯]

ಇಂಥ ತನ್ನತನವೊಂದು ಕಂಡುಕೊಂಡು ಹೆಣಗುತ್ತಿರುವ ಕವಯತ್ರಿ ತುಡಿತ ಗಂಭೀರ ಸ್ವರೂಪದ ಪರಂಪರೆಯಿಂದ ಕಳಚಿಕೊಳ್ಳುವ ಬಲವಾದ ಆಶಯ ವ್ಯಕ್ತವಾಗುವ ಸರ್ವಮಂಗಳಾ ಅವರ ‘ನಾನು ನಾನೇ’ ಕವಿತೆಯಲ್ಲಿ ನಡೆದು ಬಂದ ದಾರಿಗೆ ಬೆನ್ನು ತೋರಿಸುವುದೇ ಆಗಿದೆ. ಅಜ್ಜಿ, ಅಮ್ಮ, ತಾಯಿ, ಅವ್ವ ಎಂದು ಸಂಬೋಧಿಸುವ ಕವನಗಳು ಪರಂಪರೆಯನ್ನು ಮುಂದುವರೆಸುವ ರೂಪಕಗಳಾಗಿ ಒತ್ತಾಯಿಸುತ್ತವೆ. ಅದಕ್ಕೆ

“ಅಮ್ಮಾ
ಸಾಕು ಮಾಡೆ ನಿನ್ನ ಪುರಾಣ
ಮಾಸಿದ ಗೋಡೆಗಳ ನಡುವೆ
ಬಿಚ್ಚಿಡಬೇಕೇನಮ್ಮ ನನ್ನೆದೆಯಾ ಗೂಡ?”[೭೦]

ಎಂಬ ಪರಂಪರೆಯ ನೆರಳು ಮತ್ತು ಸಂಪ್ರದಾಯಿಕ ಅನುಕರಣೆಗಳಿಂದ ಬಿಡುಗಡೆ ಹೊಂದಿ ಸ್ವಂತಿಕೆಯನ್ನು ಕಟ್ಟಿಕೊಳ್ಳಲು ಎಚ್ಚೆತ್ತ ಪ್ರಜ್ಞೆ ಇಲ್ಲಿ ಕಾಣಬಹುದು. ಹೀಗೆ ಶಶಿಕಲಾ ವೀರಯ್ಯ ಸ್ವಾಮಿಯವರ ಕವಿತೆ ಮತ್ತು ನಾವು’, ‘ಸ. ಉಷಾ’ ಅವರ ‘ಅಮ್ಮನಿಗೆ’ ಇಂಥ ಅನೇಕ ಕವನಗಳಲ್ಲಿ ತನ್ನತನದ ಶೋಧನ ನೆಲೆಗಳು ಮೈವೆತ್ತಿವೆ.

---

[೬೮] ದಲಿತ–ಬಂಡಾಯ ಕಾವ್ಯ ಮತ್ತು ವಿಚಾರವಾದಗಳು–ಡಾ.ಪ್ರಹ್ಲಾದ ಅಗಸನಕಟ್ಟೆ–ಪುಟ–೧೦೬

[೬೯] ಅಮ್ಮನ ಗುಡ್ಡ–ಜ.ಸರ್ವಮಂಗಳ–ಪುಟ–೭

[೭೦] ಅಮ್ಮನ ಗುಡ್ಡ–ಜ.ಸರ್ವಮಂಗಳ–ಪುಟ–೧೩

ಪರಿವರ್ತನೆ ಜೀವಂತಿಕೆಯ ಲಕ್ಷಣ ಮತ್ತು ಸೃಷ್ಟಿಯ ಸಹಜ ಕ್ರಿಯೆ. ಇಪ್ಪತ್ತೊಂದನೆಯ ಶತಮಾನದಲ್ಲಿ ನಿಂತು ಬಂದ ದಾರಿಯತ್ತ ದೃಷ್ಟಿ ಹಾಯಿಸಿದರೆ ಮೂಲ ಗುರುತು ಸಿಗದಷ್ಟು ಪರಿವರ್ತನೆ ಕಂಡಿದೆ. ದಿನವೊಂದು ಹೊಸ ಬೆಳವಣಿಗೆ ಸಂಘಟಿಸುತ್ತಿರುವ ಯುಗದಲ್ಲಿ ಮಹಿಳೆಯ ನೋವು ಹೊಸ ರೂಪ ಪಡೆಯುತ್ತಿದೆಯೆ, ವಿನಹ ಕೊನೆ ಸಮೀಪಿಸುತ್ತಿಲ್ಲ. ಇದು ನಮ್ಮ ಭಾರತೀಯ ವ್ಯವಸ್ಥೆಯ ದುರಂತ. ನಮ್ಮ ಸಂಸ್ಕೃತಿಗೆ ವಿಶಿಷ್ಟ ಪರಂಪರೆ ಇದೆ. ಆದರೆ ಈ ವಿಶಿಷ್ಟತೆಯ ಹೆಸರಿನಲ್ಲಿ ಶೋಷಣೆ ಸಲ್ಲದು. ಹೀಗಾಗಿ ಈ ನಮ್ಮ ವಿಶಿಷ್ಟ ಸಂಸ್ಕೃತಿಯ ಅಸ್ತಿತ್ವವನ್ನು ಉಳಿಸಿಕೊಳ್ಳುವುದರೊಂದಿಗೆ ಮಹಿಳೆಯ ಬದುಕನ್ನು ಹಸನುಗೊಳಿಸುವ ಸಾಮಾಜಿಕ ಮನಸ್ಥಿತಿಯನ್ನು ತಿದ್ದಬೇಕಾಗಿದೆ. ಅಂದಾಗ ಮಾತ್ರ ಸಂಸ್ಕೃತಿಯೂ ಉಳಿಯುತ್ತದೆ. ಮಹಿಳೆಯೂ ಉಳಿಯುತ್ತಾಳೆ.

ಇಡೀ ಪ್ರಪಂಚ ವೇಗವಾಗಿ ಸಾಗುತ್ತಿದ್ದರೆ, ಭಾರತೀಯ ಮನಸ್ಥಿತಿ ಮಾತ್ರ ಹಳೆಯ ಪದ್ಧತಿ ಪರಂಪರೆಗಳಿಗೆಜೋತು ಬಿದ್ದಿದೆ. ಇದರಿಂದ ಪಾರಾಗುವ ಯತ್ನ ಮಹಿಳೆಯ ಒಟ್ಟಾರೆ ನಿಲುವಾಗಿದೆ.

"ಈ ಬದುಕು ನನಗೆ ಕಲಿಸಿದ ಪಾಠ
ನಿನ್ನಂತೆ ಆಗದಿರುವುದು
ಮತ್ತೆ ತಿಳಿಯುವುದು ನನ್ನೊಳಗಿನೊಳಗನ್ನು"[೨೧]

ಕೇವಲ ಮನೆಯ ನಾಲ್ಕು ಗೋಡೆಗಳ ಮಧ್ಯೆ ಸಿಲುಕಿರುವ ಮಹಿಳೆಯ ಭಾವನೆಗಳು ಹೊರ ಪ್ರಪಂಚಕ್ಕೆ ಬರದೆ ಧಫನಗೊಳ್ಳುತ್ತಿವೆ. ಅವಳಲ್ಲಿ ಏನೆಲ್ಲ ಪ್ರತಿಭೆ, ಸೃಜನಶೀಲತೆಯಿದ್ದರೂ ಅದು ಅಭಿವ್ಯಕ್ತಿ ಕಾಣದೆ, ಅಡುಗೆ ಮನೆಯಲ್ಲಿ ನಶಿಸುತ್ತದೆ. ಪುರುಷನಗಿಂತ ಮಿಗಿಲಾದ ಪಾಂಡಿತ್ಯವಿದ್ದರೂ ಸೀಮಿತ ವರ್ತುಲದಲ್ಲಿಯೇ ವ್ಯವಹರಿಸಬೇಕಾಗಿರುವುದು ಪರಿಸ್ಥಿತಿಯ ಅನಿವಾರ್ಯವಾಗಿದೆ. ಈ ತನ್ನೆಲ್ಲಾ ಭಾವನೆಗಳಿಗೆ ಕೊಳ್ಳಿಯಿಟ್ಟಿರುವ ಸಮಾಜದ ಬಗ್ಗೆ ತೀವ್ರ ಕೋಪ ವ್ಯಕ್ತಪಡಿಸುವ ಸ್ತ್ರೀವಾದಿ ನೆಲೆಯ ಕವಿತೆಗಳ ಮೂಲ ಭಿತ್ತಿ ಬಂಡಾಯವೇ ಆಗಿದೆ. ಮಹಿಳೆ ತನ್ನತನದ ಹುಡುಕಾಟವೇ ಪಾರಂಪರಿಕ ಸಂಪ್ರದಾಯಿಕತೆಗೆ ತೋರುವ ಬಹುದೊಡ್ಡ ಪ್ರತಿರೋಧ ಎನ್ನಬಹುದು. ಮಹಿಳೆಯಲ್ಲಿಯೂ ಅದ್ಭುತ ಶಕ್ತಿಗಳ ಖಜಾನೆಯಿದೆ. ಬೌದ್ಧಿಕ ಪ್ರೌಢಿಮೆಯಿದೆ. ಆದರೆ ಅದನ್ನು ಗುರುತಿಸುವಷ್ಟು ಸೌಜನ್ಯ ಗುರುತಿಸುವ ಹೃದಯವಂತಿಕೆ ಸಮಾಜಕ್ಕಿಲ್ಲ. ಈ

೨೧ ಕಣ್ಣುಗಳಲಿ ಕನಸು ತುಂಬಿ-ಹೇಮಾ ಪಟ್ಟಣಶೆಟ್ಟಿ-ಪುಟ-೫೬

ಒಂದು ಓನ್ನೆಲೆಯಿಂದಲೇ ತನ್ನಲ್ಲಿರುವ ಸ್ವಂತಿಕೆಯ ಅದಮ್ಯ ಶಕ್ತಿ ಪುನಃ ಪುನಃ ಎಚ್ಚರಿಸುತ್ತಿದೆ. ಇಂಥ ಹೆಣ್ಣಿನ ಬಹುದೊಡ್ಡ ಕೊರಗು ಸ್ತ್ರೀ ವಾದಿ ಕವಿತೆಗಳ ಒಟ್ಟು ಆಶಯವಾಗಿದೆ.

ಮಹಿಳೆಯ ಬಿಡುಗಡೆಗಾಗಿಯೇ ಪ್ರತ್ಯೇಕ ಚಳವಳಿಗಳು ಹುಟ್ಟಿಕೊಂಡಿರುವುದು ಚರಿತ್ರೆಯಲ್ಲಿ ಕಾಣಸುವುದಿಲ್ಲ. ಧಾರ್ಮಿಕ, ಸಾಮಾಜಿಕ ಚಳವಳಿಗಳು ಮಹಿಳೆಯ ಬಗ್ಗೆ ಉದಾರ ಮನಸ್ಸು ಹೊಂದಿರುವುದರಿಂದ ಆಕೆಯ ಹಕ್ಕಿನ ಬಗ್ಗೆ ನಿಲುವು ತಾಳಿದ್ದವು. ಆದರೆ ಬಿಡುಗಡೆಯ ಕಲ್ಪನೆಗೆ ಖಚಿತ ರೂಪ ನೀಡಿ ತಮ್ಮ ಹಕ್ಕಿನ ಬಗ್ಗೆ ಅರಿವು ಮೂಡಿಸಿದ್ದು, ಬಂಡಾಯದ ಸ್ತ್ರೀವಾದಿ ಕಾವ್ಯ. ಇಂಥ ಒಂದು ಮಾನಸಿಕ ಬಲದಿಂದಲೇ ಸಾಮಾಜಿಕ ಪೈಪೋಟಿ ನಡೆಸಲು ಸಾಧ್ಯವಾಗಿರುವುದು. ಹಿಂದಿನಿಂದ ಎಲ್ಲ ನೋವುಗಳನ್ನು ಸಹಿಸುತ್ತ ಬಂದ ಮಹಿಳೆ ಇಂದು ತಿರುಗಿ ನಿಲ್ಲುವ ಧೈರ್ಯ ತೋರುತ್ತಿದ್ದಾಳೆ. ತನ್ನ ಮೇಲೆ ಎಸಗುತ್ತಿರುವ ದೌರ್ಜನ್ಯಗಳನ್ನು ಪ್ರತಿಭಟಿಸುತ್ತಿದ್ದಾಳೆ. ಮತ್ತು ಬರವಣಿಗೆಯ ಮೊನಚಿನಿಂದ ಮಹಿಳೆಯ ಬಂಡಾಯ ಮತ್ತಷ್ಟು ತೀಕ್ಷ್ಣತೆ ಪಡೆಯುತ್ತಿದೆ.

"ಇರಬೇಕು ನಾನೀಗ
ನನ್ನ ಕನಸು ಕಲ್ಪನೆಗಾಗಿ
ಬುದ್ಧಿ ಭಾವನೆಗಾಗಿ
ಆತ್ಮ ಗೌರವಕ್ಕಾಗಿ
ನನಗಾಗಿ ನಾನಾಗಿ
ಇರಲೇ ಬೇಕು
ದೋಚಿ ಕೊಂಡವರನ್ನು
ಪಕ್ಕಕ್ಕೆ ಸರಸರಿಸಿ
ನನ್ನ ದಾರಿಯ ನಾ
ಕಂಡು ಕೊಳ್ಳಬೇಕು
ನನ್ನ ದಾರಿಯ ನಾ
ಕಂಡು ಕೊಳ್ಳಬೇಕು."[೭]

ಎಂಬ ಸಂಕಲ್ಪದೊಂದಿಗೆ ಮುನ್ನುಗ್ಗುತ್ತಿರುವ ಮನೋಧರ್ಮ ನಿಜಕ್ಕೂ ಒಳ್ಳೆಯ ಬೆಳವಣಿಗೆ. ಹೆಣ್ಣಿನ ಬಿಡುಗಡೆಯ ಆಶಯವನ್ನು ವ್ಯಕ್ತ ಪಡಿಸುವ ಮಾಲತಿ ಪಟ್ಟಣಶೆಟ್ಟಿಯವರು ನನ್ನ ದಾರಿ ನಾ ಕಂಡು ಕೊಳ್ಳಬೇಕು ಎಂದು ಪರಾವಲಂಬಿ ಬದುಕಿಗೆ ವಿದಾಯ ಹೇಳುತ್ತಾರೆ. ಮೂಲತಃ ಮಹಿಳೆಯ ಸಂಘರ್ಷವಿರುವುದು ಸಾಮಾಜಿಕತೆಯೊಂದಿಗೆ. ಸಮಾಜ ಹೇರಿದ ಕಟ್ಟಳೆಗಳೇ ಆಕೆ ಏನಾಗಬೇಕು? ಹೇಗೆ ಇರಬೇಕು? ಹೇಗೆ ನಡೆಯಬೇಕು? ಎಂದೆಲ್ಲ

---

[೭] ತಂದೆ ಬದುಕು ಗುಲಾಬಿ-ಮಾಲತಿ ಪಟ್ಟಣಶೆಟ್ಟಿ-ಪುಟ-೧೮

ಬದ್ಧತೆಗಳನ್ನು ನಿರ್ಮಿಸಿರುವುದು. ಹೀಗಾಗಿ ಮಹಿಳೆಯ ಪ್ರತಿರೋಧವಿರುವುದು ಸಾಮಾಜಿಕ ನಡಾವಳಿಗಳ ಕುರಿತು. ಇವೆಲ್ಲವುಗಳನ್ನು ಮೀರಿ ತನ್ನ ಕಲ್ಪನೆ, ಕನಸು, ಭಾವನೆಗಳಿಗಾಗಿ ದಾರಿ ಕಂಡುಕೊಳ್ಳುವ ಬಗೆ ನಿಜಕ್ಕೂ ಬಿಡುಗಡೆಯ ಹಂಬಲ ಸೂಚಿಸುವಂತದ್ದು.

ಸಮಾಜದ ವರ್ತನೆಯನ್ನು ನೋಡಿದಾಗ ಗಂಡನ ಸಾಕ್ಷಿಯಲ್ಲಿ ಅವನ ಬೇಕು ಬೇಡಗಳೆಲ್ಲ ಅವನ ಮೂಗಿನ ನೇರಕ್ಕೆ ಇರುತ್ತವೆ. ಹೆಂಡತಿ ಚೆಲುವೆಯಾದರೆ ಅವನಿಗ ಅಸೂಯೆ. ಆದರೆ ಎಲ್ಲ ಗಂಡಂದಿರೂ ರಾಜ ಕ್ಯಾಂಡೊಲಸ್ ಥರದವರೆ. "ಪ್ರಾಚೀನ ಲಿಡಿಯಾ ದೇಶದ ರಾಜನಿಗೆ ತನ್ನ ರಾಣಿ ಚೆಲುವೆ ಎಂಬ ಬಗ್ಗೆ ಎಷ್ಟು ಹೆಮ್ಮೆ ಇತ್ತೆಂದರೆ ಅವಳನ್ನು ತನ್ನ ಮಂತ್ರಿ ಎದುರು ನಗ್ನಳನ್ನಾಗಿ ಓಡಾಡಿಸಿದನಂತೆ. ಗಂಡಂದಿರು ಹೆಂಡತಿ ತಮ್ಮ ಮಾನ ಉಳಿಸಬೇಕೆಂದು ಬಯಸುತ್ತಾರೆ. ನೋಡಿದವರು ಪರವಾಗಿಲ್ಲ ಎನ್ನುವಂತಿರಬೇಕು ಅಷ್ಟೇ ಹಾಗಿಲ್ಲವೋ ಮುಖ ಗಂಟಿಕ್ಕಿ ಕಟಕಿಯಾಡುತ್ತಾರೆ ಮದುವೆಯಿಂದಾಗಿ, ಲೈಂಗಿಕ ಮತ್ತು ಸಾಮಾಜಿಕ ಮೌಲ್ಯಗಳು ವಿಘಟಿತಗೊಳ್ಳುತ್ತವೆ ಎನ್ನುವುದಕ್ಕೆ ಇದು ಸಾಕ್ಷಿ. ಹೆಚ್ಚು ಮೆರೆಯುವ ಹೆಣ್ಣು ಗಂಡನ ಕಣ್ಣಲ್ಲಿ ಕೀಳು ಅಭಿರುಚಿಯವಳಾಗುತ್ತಾಳೆ. ಅವಳು ಲಾವಣ್ಯವತಿಯಾಗಿ ಚಿತ್ತಾಕರ್ಷಕಳಾದರೆ ಅದೂ ಸಹ್ಯವಲ್ಲ. ಬೇರೆ ಹೆಣ್ಣಿನಲ್ಲಿ ಇವನು ಮೆಚ್ಚುವ ಈ ಗುಣ ತನ್ನ ಹೆಂಡತಿಯಲ್ಲಿ ದೋಷವಾಗಿ ಬಿಡುತ್ತದೆ. ಗಂಡ ಹೀಗೆ ಇಚ್ಛೆ ಪಡದೆ ಹೋದಾಗ ಅವನಿಗೆ ಬೇಸರವಾಗಬಹುದೆಂಬ ಭಾವನೆ ಇವಳಲ್ಲಿ ಮೂಡುತ್ತದೆ. ಹೆಂಡತಿ ಮಿತಿಯಲ್ಲಿ ಅಲಂಕರಿಸಿಕೊಂಡರೆ ಅದನ್ನು ಒಪ್ಪುತ್ತಾನೆ. ಆದರೆ ಉತ್ಸಾಹ ತೋರುವುದಿಲ್ಲ."[೨೯] ಅದಕ್ಕೆ ಕವಯತ್ರಿ ನಾನು ನನ್ನ ದಾರಿಯನ್ನು ಕಂಡುಕೊಳ್ಳಬೇಕು ಸ್ವತಂತ್ರವಾಗ ಬೇಕೆನ್ನುವ ಆಶಯ ಇಲ್ಲಿರುವುದು.

ತನ್ನನ್ನು ತಾನು ಸಮರ್ಥಿಸಿಕೊಳ್ಳುವ ಸ್ತ್ರೀಗೆ ಸಂಸ್ಕೃತಿಯ ಅನನ್ಯತೆಯನ್ನು ಒಳಗೊಂಡಂತೆ ಪರಂಪರೆಯ ಬಗ್ಗೆ ಕೋಪವಿದೆ. ನಿರಂತರವಾಗಿ ಎರಗುತ್ತಿರುವ ಆಕ್ರಮಣಗಳು ಬದುಕು ಅಸಹ್ಯಪಡುವಷ್ಟು ಬೇಸರವಾಗಿಸಿವೆ. ಇದರಿಂದ ಮುಕ್ತಿ ಪಡೆಯಲು ಗತದ ಬದುಕನ್ನು ನೆನಪಿಸುತ್ತ ಹೆಣ್ಣಿನ ಮೇಲಿನ ಎಲ್ಲ ಆಕ್ರಮಣಗಳ ಕುರಿತು ಚಿಂತಿಸುವ ಮಹಿಳಾ ಸಂವೇದನೆ ಕ್ರೌರ್ಯಯುತ ಬದುಕಿನಿಂದ ಬಿಡುಗಡೆಗೊಳ್ಳುವ ತುಡಿತ ಅಪಾರವಾದುದು. ಹೊಸ್ತಿಲು ದಾಟುವುದೇ ಕಷ್ಟವಾಗಿರುವಾಗ ಹೊರಗಿನ ಪ್ರಪಂಚದ ಜೊತೆ ವ್ಯವಹರಿಸುವದಂತೂ ದೂರದ ಮಾತು ಇಂಥವೇ ಹೊರ ಬಂದ ಸ್ಥಿತಿಯನ್ನು ಕೆ. ಆರ್. ಸಂಧ್ಯಾ ರೆಡ್ಡಿ.

---

೨೯ ಸಿಮೊನ್ ದ ಬೊವಾ ದ ಸೆಕೆಂಡ್ ಸೆಕ್ಸ್–ಡಾ.ಎಚ್.ಎಸ್. ಶ್ರೀಮತಿ–ಪುಟ–೩೩೩

"ಹಾಲು ವರಾಂಡ ಹೊಸ್ತಿಲದಾಟಿ ಬರುವುದೆಂದರೆ
ಏಳು ಕಡಲ ಏಳು ಬೆಟ್ಟ ಏಳು ಕೋಟೆ
ಭೇದಿಸಿದ ಹಾಗೆ."[೭೪]

ಎಂದು ವಾಸ್ತವತೆಯನ್ನು 'ಓ ನನ್ನ ಚೇತನ' ಕವಿತೆಯಲ್ಲಿ ದಾಖಲಿಸಿದ್ದಾರೆ.ಕವಯತ್ರಿ ಇಲ್ಲಿ ಹಾಲು, ವರಾಂಡ, ಹೊಸ್ತಿಲು ದಾಟಿ ಬರುವುದೆಂದರೆ ಏಳು ಕಡಲ, ಬೆಟ್ಟ, ಕೋಟೆ ಭೇದಿಸಿದ ಹಾಗೆ ಎಂದು ಹೇಳುವ ಮಾತಿನ ಹಿಂದೆ ಮನೆಯ ಒಳಗಿನ ವಾತಾವರಣ ಅವೆಲ್ಲವುಗಳಿಗಿಂತ ಸಂಕೀರ್ಣವಾದುದೆಂಬ ಇಂಗಿತವಿದೆ. ಎಲ್ಲಿಯವರೆಗೆ ಮುಕ್ತವಾಗಿ ವ್ಯವಹರಿಸಲು ಸಾಧ್ಯವಿಲ್ಲವೊ, ಅಲ್ಲಿಯವರೆಗೆ ಸ್ವಾತಂತ್ರ್ಯ ಎಂಬುದು ಮರಿಚಿಕೆಯಾಗಿ ಕಾಡುತ್ತಲೇ ಇರುತ್ತದೆ. ಹೀಗಾಗಿ ಸ್ತ್ರೀವಾದಿ ಕಾವ್ಯದ ಮೂಲ ಪ್ರತಿರೋಧವಿರುವುದು ಬಂಧನದಿಂದ ಬಿಡುಗಡೆಯತ್ತ. ಈ ಹಿನ್ನೆಲೆಯಿಂದಲೇ ಅಸಂಖ್ಯಾತ ಲೇಖಕಿಯರ ಹೋರಾಟ ಸೃಜನಶೀಲ ಅಭಿವ್ಯಕ್ತಿಯಾಗಿ ಪ್ರಕಟಗೊಂಡಿದೆ.

ಸ್ತ್ರೀ ಶೀಲದ ಬಗ್ಗೆ ಕಟ್ಟು ನಿಟ್ಟಿನ ನಿರ್ಬಂಧ ಹೇರಿರುವ ನಮ್ಮ ಸಮಾಜ ಹೆಣ್ಣಿನ ಹದಿಬದೆಯತನವನ್ನು ಒಂದು ಉನ್ನತ ಮೌಲ್ಯವನ್ನಾಗಿಸಿದೆ. ಪುರುಷ ಎಷ್ಟೋ ಜನ ಸ್ತ್ರೀಯರ ಸಂಗಡ ಸಂಬಂಧವನಿಟ್ಟುಕೊಂಡರೂ ಆತನ ಶೀಲದ ಬಗ್ಗೆ ಶಂಕೆಯಿಲ್ಲ. ಆದರೆ ಹೆಣ್ಣು ಪರಪುರುಷನ ಸಂಬಂಧವಿಟ್ಟುಕೊಂಡರೇ ಚಲಾವಣೆಗೆ ಬಾರದ ನಾಣ್ಯವಾಗುತ್ತಾಳೆ. ಇದು ನಮ್ಮ ಸಾಮಾಜಿಕ ವ್ಯವಸ್ಥೆ ಅನೂಚಾನವಾಗಿ ಅನುಸರಿಸಿಕೊಂಡು ಬಂದಿರುವಂಥ ಪದ್ಧತಿಯಾಗಿದೆ. ಮಹಿಳೆ ತಾನು ಎಷ್ಟೇ ಪರಿಶುದ್ಧಳಾಗಿದ್ದರೂ ಕ್ಷಣ ಕ್ಷಣಕ್ಕೂ ಆಕೆಯ ಶೀಲವನ್ನು ಕುರಿತು ಸಂಶಯ ಪಡುವ ಪುರುಷ ವರ್ಗ ಕಾಡುತ್ತಲೇ ಇದೆ.

"ನಾವು ಪತಿವ್ರತೆಯರಲ್ಲ
ನಿಮ್ಮ ಕಾಮಾಗ್ನಿ ಕುಂಡಕ್ಕೆ
ನಮ್ಮ ಶೀಲವನೂ ಬಲಿಗೊಟ್ಟು
ನಿಮ್ಮಿಂದಲೇ ಪತಿವ್ರತೆಯರ ಪಟ್ಟವೇರಿ
ಪ್ರಾತಃ ಕಾಲದ ಸ್ಮರಣೆಯಲ್ಲಿ ಉಳಿದು."[೭೫]

ನಮ್ಮ ಸಂಸ್ಕೃತಿಯಲ್ಲಿಯ ಏಕ ಮುಖ ಮೌಲ್ಯಗಳು ಸ್ತ್ರೀ ಶೋಷಣೆಗೆ ಮೂಲ ಕಾರಣ. ತನ್ನ ಸರ್ವಸ್ವವೇ ಪತಿಗೆ ಧಾರೆಯೆರೆದ ಹೆಣ್ಣು ತನ್ನ ಪತಿಯಿಂದಲೇ

---

೭೪ ಕವಿತೆ–ಮೃತ್ಯುಂಜಯ ಹೊರಕೇರಿ–ಪುಟ–೧೪೩
೭೫ ನಾನು ಮತ್ತು ಅವನು–ಎಚ್.ಎಸ್.ಮುಕ್ತಾಯಕ್ಕ–ಪುಟ–೫೫

ನೋವನ್ನನುಭವಿಸುತ್ತಿರುವುದು. ಇಲ್ಲಿ ಎಸ್.ಎಸ್ ಮುಕ್ತಾಯಕ್ಕನ ಪ್ರತಿಭಟನೆಯಿರುವುದು ನಮ್ಮ ಸಾಂಸ್ಕೃತಿಕ ನಂಬಿಕೆಗಳಲ್ಲಿ ಬೆರೆತು ಹೋದ ಹೆಣ್ಣಿನ ಬಗ್ಗೆ ಹೊಂದಿರುವ ಕಟ್ಟಳೆಗಳ ಕುರಿತು. ಹೀಗಾಗಿ ಮುಕ್ತಾಯಕ್ಕ ಮೌಲ್ಯಗಳನ್ನು ಖಾರವಾಗಿ ವಿಡಂಬಿಸುವುದರ ಮೂಲಕ ಲೇಖಕಿಯರಲ್ಲಿ ಗಮನ ಸೆಳೆಯುತ್ತಾರೆ.

ಇಂದಿನ ಸಾಮಾಜಿಕ ಪರಿಸರದಲ್ಲಿ ಮಹಿಳೆ ಎದುರಿಸುತ್ತಿರುವ ಸಮಸ್ಯೆಗಳನ್ನು ನೋಡಿದರೆ ದೇಶ ಎಲ್ಲ ಕ್ಷೇತ್ರಗಳಲ್ಲಿ ಪ್ರಗತಿ ಹೊಂದುತ್ತಿರುವಾಗ ಮಹಿಳೆ ಮಾತ್ರ ವಿಮೋಚನೆಯ ಪೂರ್ಣ ಅನುಭವ ಪಡದಿಲ್ಲ. ಮಹಿಳೆಯ ಕುರಿತು ಹಲವು ಯೋಜನೆಯನ್ನು ಸರಕಾರ ರೂಪಿಸಿದೆ. ಹಲವು ಸಂಘಟನೆಗಳು ಸ್ತ್ರೀ ಪರ ಕೆಲಸ ಮಾಡುತ್ತಿವೆ. ಸಮಾಜ ಕೂಡ ತನ್ನ ನಿಲುವಿನಲ್ಲಿ ಬದಲಾವಣೆ ತಂದುಕೊಂಡಿದೆ. ಆದರೆ ಇಪ್ಪತ್ತೊಂದನೆಯ ಶತಮಾನದ ಹೊತ್ತಿನಲ್ಲಿ ಜಾಗತಿಕ ಮಟ್ಟದ ಮಹಿಳೆಯರು ಪಡೆದಿರುವಷ್ಟು ಮುಕ್ತತೆಯ ಅನುಭವ ಭಾರತೀಯ ಮಹಿಳೆಯರು ಪಡೆದಿದ್ದಾರೆ ಎಂದು ಅನಿಸುವುದಿಲ್ಲ. ಈ ಯಥಾ ಸ್ಥಿತಿಯ ಮುಂದುವರಿಕೆಯನ್ನು ಅನುಸೂಯಾ ಅವರ ಕವಿತೆಯಲ್ಲಿ ಕಾಣುತ್ತೇವೆ.

> "ಅದೇ ವೀರ್ಯ ಅದೇ ಗರ್ಭಕ್ಕೆ ಹುಟ್ಟಿ
> ಅದೇ ಮೊಲೆಯ ಚೀಪಿ
> ಬೆಳೆದಿದ್ದೇವೆ ಸ್ವಾಮಿ ನಾವೂ."[೭೬]

ಇದು ಹೆಣ್ಣಿನ ಅಸಹಾಯಕತೆಯ ನೋವು ಮಹಿಳೆಯ ಬದುಕಿನಲ್ಲಿ ಸ್ಥಾಯಿಯಾಗಿದೆ. ಪುರುಷ ನಿರ್ಮಿತ ವ್ಯವಸ್ಥೆಯ ಕಿರುಕುಳ ದಿನನಿತ್ಯ ಎದುರಿಸಬೇಕಾಗಿರುವುದರಿಂದ ನೋವು ಸಹಜ ಎನ್ನುವ ಮಟ್ಟಿಗೆ ಹಾಸುಗಟ್ಟಿದೆ. ಸ್ತ್ರೀಯನ್ನು ಕೇವಲ ಕಾಮದ ಸರಕನ್ನಾಗಿ ಸ್ವಿಕರಿಸಿರುವ ಪುರುಷ ಸಮಾಜ ಲೈಂಗಿಕವಾಗಿ ಹಿಂಸಿಸುತ್ತಲೇ ಬಂದಿದೆ ದೇಶಾದಾದ್ಯಂತ ಹಲವು ಕೊಲೆ, ಆತ್ಮಹತ್ಯೆ, ಅತ್ಯಾಚಾರಗಳು ಗಣನೀಯ ಪ್ರಮಾಣದಲ್ಲಿ ನಡೆಯುತ್ತಿರುವಾಗ ತಾಯಿ, ದೇವಿ, ಮಾತೆ ಎಂದೆಲ್ಲ ಹೆಣ್ಣಿನ ಕುರಿತು ಸಮಾಜ ಹೊಂದಿರುವ ಪೂಜ್ಯನೀಯ ಭಾವನೆ ಕೇವಲ ತೋರಿಕೆ ಎಂದೆನಿಸುತ್ತದೆ. ಒಟ್ಟಾರೆ ಸಮಾಜದ ಬಿಡುಗಡೆಯೊಂದಿಗೆ ಮಾನಸಿಕ ಬಿಡುಗಡೆಗೊಳ್ಳುವ ಪರಿಕಲ್ಪನೆ ಮಹಿಳಾವಾದಿ ಕಾವ್ಯದ ಮಹತ್ವದ ಚಿಂತನೆಯಾಗಿದೆ.

---

[೭೬] ಪ್ರಕೃತಿ ಪುರುಷ – ಅನುಸೂಯಾ ದೇವಿ – ಪುಟ – ೬೨

ಸಾಂಪ್ರದಾಯಿಕ ವಿಧಿ-ವಿಧಾನಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಅನಿವಾರ್ಯತೆಯಲ್ಲಿರುವ ಮಹಿಳೆ, ಅದರೊಂದಿಗೆ ಬೆರೆಯದೆ, ಮತ್ತು ಇಡಿಯಾಗಿ ಸಂಬಂಧವನ್ನು ಕಡೆದುಕೊಳ್ಳದೆ ಒಂದು ರೀತಿಯ ಸಮಸ್ಯಾತ್ಮಕ ವಾತಾವರಣದಲ್ಲಿ ಬದುಕುತ್ತಿದ್ದಾಳೆ. ಸಂಪ್ರದಾಯದ ನಿಯಮಗಳನ್ನು ಪಾಲಿಸಿಕೊಂಡು ಬಂದಿರುವ ತಾಯಿ ಕೂಡ ತನ್ನ ಮಗಳಿಗೆ ವ್ಯವಸ್ಥೆಗೆ ಬದ್ಧವಾಗಿಯೇ ನಡೆಯುವಂತೆ ಹೇಳಿಕೊಡುತ್ತಾಳೆ. ಗಂಡನ ಮನೆಯ ಪ್ರೀತಿಗೆ ಪಾತ್ರಳಾಗಿ ಎಲ್ಲಾರೆದುರು ತಗ್ಗಿ ಬಗ್ಗಿ ನಡೆದು ಹೆತ್ತವರಿಗೆ ಕೀರ್ತಿ ತರಬೇಕೆಂಬ ಬುದ್ಧಿ ಮಾತುಗಳು ಕೇವಲ ಹೆಣ್ಣಿನ ಬದುಕಿನಲ್ಲಿ ಮಾತ್ರ ಕಂಡು ಬರುವಂಥವು. ಮತ್ತು ನಮ್ಮ ಧಾರ್ಮಿಕ ನಂಬಿಕೆಗಳು ಕೂಡ ಇಡೀ ಮಹಿಳಾ ಸಮುದಾಯವನ್ನು ನಿಯಂತ್ರಿಸುವಷ್ಟು ಬಲ ಪಡೆದಿವೆ. ಅದಕ್ಕಾಗಿಯೇ ಆಧುನಿಕ ಮಹಿಳೆ ಪರಂಪರೆಯ ಈ ಅನಾಗರಿಕ ನಿಲುವನ್ನು ಪ್ರತಿಭಟಿಸುತ್ತಿದ್ದಾಳೆ.

> "ನೀ ಹಾಕಿರುವ ಆಣೆ ಕಟ್ಟೆ
> ಒಡೆದು ಬಿರುಗಾಳಿಗೆ ಸಿಕ್ಕಿ
> ಬೋರ್ಗರೆದು ನುಗ್ಗಿ
> ನಿನ್ನಂತಾಗದೆ ಬದುಕುತ್ತೇನೆ
> ನನಗೆ ದಾರಿ ಬಿಡು."[೭೭]

ತಾಯಿ ತನ್ನ ಮಗಳಿಗೆ ಪರಂಪರೆಯ ಬದುಕನ್ನೆ ಬೋಧಿಸುವ 'ಅಮ್ಮನಿಗೆ' ಕವನ ಸಂಸ್ಕೃತಿಯ ಒತ್ತಡವನ್ನು ಸಾರುತ್ತದೆ. ಈ ಒತ್ತಡದಿಂದ ಬಿಡಿಸಿಕೊಳ್ಳುವ ಮಗಳ ಮನೋಧರ್ಮ 'ನಿನ್ನಂತಾಗದೆ ಬದುಕುತ್ತೇನೆ ನನಗೆ ದಾರಿ ಬಿಡು' ಎಂದು ಪರಂಪರಾಗತ ಸ್ಥಿತಿಯಿಂದ ಕಳಚಿಕೊಳ್ಳುವ ಹಂಬಲ, ಸ್ವತಂತ್ರ ಬದುಕುತ್ತೇನೆ ಎಂಬ ಅಚಲ ನಂಬಿಕೆಯನ್ನು ಗಟ್ಟಿಯಾಗಿ ಸಾರುತ್ತದೆ. ಯಾವಾಗಲೂ ಹೆಣ್ಣಿನಪರ ತುಡಿಯುವ ಮಹಿಳೆಯ ಮಾನವಿಯಸ. ಉಷಾರವರ ಕಾವ್ಯ ವ್ಯವಸ್ಥೆಯ ಪರಿವರ್ತನೆಗಾಗಿ ತುಡಿಯುತ್ತದೆ.

ಹೀಗೆ ಸಂಪ್ರದಾಯ ತನ್ನೆಲ್ಲ ಅವೈಚಾರಿಕ ನಂಬಿಕೆಗಳನ್ನು ಮಹಿಳೆಯ ಮೇಲೆ ಪ್ರಯೋಗಿಸಿರುವುದು ಮತ್ತು ಪುರುಷರನ್ನು ಅಷ್ಟೇ ಉನ್ನತೀಕರಿಸುವುದು ಗತಕಾಲದಿಂದಲ್ಲೂ ನಡೆದುಕೊಂಡು ಬಂದ ಅನ್ಯಾಯಿಕ ಪದ್ಧತಿಯಾಗಿದೆ. ಭಾರತೀಯ ಸಂಸ್ಕೃತಿ ತನ್ನದೇ ಆದ ಗುಣ ಮೌಲ್ಯಗಳನ್ನು ಹೊಂದಿರುವಂತ ವೈವಿಧ್ಯಮಯ ನೆಲೆಯಾಗಿದೆ. ಆದರೆ ಪುರೋಹಿತಶಾಹಿಯಿಂದ ರೂಪಿತಗೊಂಡ ಜಡಾವಸ್ಥೆ ವಿಕೃತವನ್ನಾಗಿ ಮಾಡಿರುವುದು ಸಂಸ್ಕೃತಿಯ ಏಕಮುಖಿ

---

[೭೭] ತೊಗಲು ಬೊಂಬೆಯ ಆತ್ಮಕತೆ-ಸ.ಉಷಾ-ಪುಟ-೧೫

ಧೋರಣೆಗಳಿಗೆ ಕಾರಣವಾಗಿದೆ. ಇಂಥ ಮೌಲಿಕ ಸಂಪ್ರದಾಯವನ್ನು ನಿಷ್ಠುರವಾಗಿ ನಿರಾಕರಿಸಿರುವ ಮಹಿಳಾ ಸಂವೇದನೆ ಬಂಡಾಯ ಕಾವ್ಯದೂದ್ದಕ್ಕೂ ಹರಡಿರುವ ವೈಚಾರಿಕ ಚಿಂತನೆಯಾಗಿದೆ. ಮಹಿಳೆಯ ನೋವಿಗೆ ಒಂದು ವಿಶಿಷ್ಟ ಪರಂಪರೆ ಇದೆ. ಭಾರತೀಯ ಸಾಮಾಜಿಕ ವ್ಯವಸ್ಥೆಯೂ ಹಲವು ಧರ್ಮಗಳ ಸೈದ್ಧಾಂತಿಕ ನೆಲೆಗಳ ಮೇಲೆ ಮತ್ತು ರೂಢಿಗತವಾಗಿ ಪಾಲಿಸಿಕೊಂಡು ಬಂದ ಸಾಂಪ್ರದಾಯಿಕ ಮೌಲ್ಯಗಳ ಮೇಲೆ ಸ್ಥಾಪಿಸಲ್ಪಟ್ಟಿದೆ. ಇಂದಿಗೂ ಗೌರವಿಸಲ್ಪಡುತ್ತಿರುವ ಸಾಂಪ್ರದಾಯಿಕ ಮೌಲ್ಯಗಳು, ಬದುಕಿನ ಆದರ್ಶ ಗುಣಗಳಾಗಿ ಪರಿಣಮಿಸಿವೆ. ಆದರೆ ಮೌಲ್ಯಗಳೆನಿಸಿಕೊಂಡ ಸಿದ್ಧಾಂತಗಳು ಎಷ್ಟರಮಟ್ಟಿಗೆ ಜನ ಜೀವನವನ್ನು ಸುಧಾರಿಸಿವೆ ಎಂಬುದಕ್ಕೆ ಉತ್ತರವಿಲ್ಲ. ಮಹಿಳೆ ಮಾತ್ರ ಗಾಣದೆತ್ತಿನಂತೆ ಎಲ್ಲವನ್ನು ಸಹಿಸಿಕೊಂಡು ಪರಂಪರೆಯೂದ್ದಕ್ಕೂ ನಡೆದು ಬಂದಿದ್ದಾಳೆ. ಈಗ ಕುಟುಂಬ ಮತ್ತು ಸಮಾಜದ ಜೊತೆಗೆ ಮುಖಾ ಮುಖಿಯಾಗಿ ಸಂಘರ್ಷಕ್ಕೆ ನಿಲ್ಲಬೇಕಾಗಿರುವುದು ಮಹಿಳೆಯ ಮುಂದಿನ ಪ್ರಮುಖ ಸವಾಲಾಗಿದೆ. ಇದು ಆಕೆಯ ಬಿಡುಗಡೆಯ ಪ್ರಶ್ನೆಯಾಗಿದೆ. ತನ್ನತನವನ್ನು ಉಳಿಸಿಕೊಂಡು ಸಮಾಜದ ಮುಖ್ಯವಾಹಿನಿಗೆ ಬರುವ ಅಗತ್ಯವಿದೆ.

"ಸೊತ್ತಾಗಿಸಿದ ತೊತ್ತಾಗಿಸಿದೆ
ಹೊತ್ತೊತ್ತಿಗೆ ನಂಜ ತುತ್ತನಿಕ್ಕಿದೆ
ಸ್ಮೃತಿ ವೇದ ಶಾಸ್ತ್ರ ಇತಿಹಾಸ ಪುರಾಣಗಳ
ನಿರಂತರ ಸಂಚಿನಲಿ ವಂಚಿತ ಹರಣಿ
ಎಷ್ಟು ಭಾಷೆಗಳಲ್ಲಿ ಬರೆಯಲಿ ನನ್ನ ನೋವಿಗರ್ಥ
ಇನ್ನೆಷ್ಟು ಬಂಡೆಗಳಲ್ಲಿ ಕೊರೆಯಲಿ ನಿನ್ನ
ಪುರುಷಾರ್ಥ."[೭೮]

ಕಾಲಗಳುದ್ದಕ್ಕೂ ಸ್ತ್ರೀಯನ್ನು ನಡೆಯಿಸಿಕೊಂಡ ರೀತಿಯ ಕುರಿತು ಆಕ್ರೋಶ ಪಡುವ ಈ ಮೇಲಿನ ಸಾಲುಗಳು ಸಾಂಸ್ಕೃತಿಕ, ಸಾಮಾಜಿಕ, ಸಮಾನತೆ ಮತ್ತು ಏಕತೆಯನ್ನು ತರುವ ತವಕ ಹೊಂದಿವೆ. ಹೆಣ್ಣಿನ ಬದುಕಿನಲ್ಲಿ ಮುಗಿಯದ ಕತೆಯಾಗಿರುವ ನೋವು ಕ್ರೌರ್ಯದ ನಿರಂತರತೆಯನ್ನು ಹೇಳುತ್ತದೆ. ಹಾಗಾಗಿ ಪರಂಪರೆಯ ಬಗ್ಗೆ ಪಟ್ಟಣಶೆಟ್ಟಿಯವರಿಗೆ ವಿರೋಧವಿರುವುದು ಈ ಕವಿತೆಯಿಂದ ತಿಳಿದುಬರುತ್ತದೆ.

---

[೭೮] ಮೌನ ಕರಗುವ ಹೊತ್ತು – ಮಾಲತಿ ಪಟ್ಟಣಶೆಟ್ಟಿ–ಪುಟ–೧೨

**೫.೫ ಬಂಡಾಯ ಕವಿತೆಗಳಲ್ಲಿ ಮಹಿಳಾ ಶೋಷಣೆ :**

ಅಕ್ಷರ ಕಲಿತು ಪ್ರಬುದ್ಧಳಾದರೂ ಕೂಡಾ ಮಹಿಳೆ ತನ್ನ ಶತಮಾನಗಳ ಪಿಂಜರಿತದಿಂದ ಹೊರಬರಲು ಸಾಧ್ಯವಾಗಿಲ್ಲ. ಇಂದಿಗೂ ಏನೆಲ್ಲ ಪದವಿ, ಪ್ರಶಸ್ತಿ, ಪುರಸ್ಕಾರ ಸಾಮರ್ಥ್ಯ ಪಡೆದುಕೊಂಡಿರೂ ಅವಳು ಪುರುಷನ ಅಸ್ತಿತ್ವದೊಳಗೆ ತನ್ನನ್ನು ಮಾತ್ರವಲ್ಲ ಒಂದರ್ಥದಲ್ಲಿ ಕಳೆದು ಹೋಗುತ್ತಿದ್ದಾಳೆ. ಅಲ್ಲದೇ ಮಹಿಳೆಯನ್ನು ಕಡ್ಡಾಯವಾಗಿ ವಿವಾಹವೆಂಬ ಬಂಧದೊಂದಿಗೆ ಜೋಡಿಸಿ, ಅವಳು ಪುರುಷನಿಗಾಗಿ ಮಾತ್ರ ಬದುಕುವ ಬಾಬತ್ತು ಎಂದು ಬಿಂಬಿಸಲಾಗುತ್ತಿದೆ. ಒಡೆಯನಿಗೆ ವಿಧೇಯಳಾದ ದಾಸಿಯಂತೆ ಎಂದು ಒಂದು ಜೀಸು ವ್ಯಾಖ್ಯೆ ಕೊಡಬಹುದು. ದಾಸಿಗಿರುವ ಸಾಮಾನ್ಯ ಹಕ್ಕು ಭಾದ್ಯತೆಗಳು ಇಲ್ಲದಂತಹ ಸತಿಯ ಸ್ಥಾನವು ಅವಳದಾಗಿದೆ. ಈ ಲೋಕಬಿಂಬತ 'ಸತಿತ್ವ' ಪತಿಯ ಮರಣದ ತರುವಾಯ ಮಾನಸಿಕವಾಗಿ, ದೈಹಿಕವಾಗಿ ಅವಳು ಇಲ್ಲದಂತಾಗುವ ಅಂದರೆ ಇದ್ದೂ ಸತ್ತಂತಾಗಿರುವ ಸ್ಥಿತಿ ಅವಳದಾಗಿದೆ.

"ಸೂರ್ಯ ಚಂದ್ರರಿರುವತನಕ
ಜೊತೆ ಇರುತ್ತೇನೆಂದು
ಮಾತು ಕೊಟ್ಟನಲ್ಲ
ಮುತ್ತು ಕೊಟ್ಟನಲ್ಲ
ಪುಟಿದೆದ್ದು ಕುಣಿವ
ಕಾರಂಜಿ ನಿಂತು ಬಿಟ್ಟಿತಲ್ಲ
ಬದುಕ ಬರಡಾಯಿತಲ್ಲ."[೭೮]

ಈ ಕವಿತೆ ಪುರಾಣ ಕಾವ್ಯದಲ್ಲಿ ಬರುವ ಶಕುಂತಲೆ ದುಷ್ಯಂತರ ಕಥೆಯನ್ನು ನೆನಪಿಸುವುದರ ಜೊತೆಗೆ ಈಗೂ ಕೂಡಾ ಪುರುಷನು ಹೆಣ್ಣಿಗೆ ಬಣ್ಣದ ಮಾತುಗಳನ್ನು ಹೇಳುತ್ತಾ, ನಂಬಿಸಿ, ಮೋಸ ಮಾಡುವ ಅನೇಕ ಸನ್ನಿವೇಶಗಳಿವೆ. ನಿನ್ನನ್ನೆ ಮದುವೆಯಾಗುತ್ತೇನೆಂದು ಹೇಳಿ, ಅವಳನ್ನು ತನ್ನ ಲೈಂಗಿಕ ಚಪಲತೆಯ ತೀರಿಸಿಕೊಂಡು ಅವರನ್ನು ಬೀದಿಪಾಲು ಮಾಡುವ ಪ್ರಸಂಗಗಳು ಇಂದು ಹೆಚ್ಚಾಗಿವೆ. ಅಲ್ಲದೇ ಕಾಮುಕ ಮೃಗಗಳು ಎಪ್ಪತ್ತು ವರ್ಷದ ಮುದುಕಿಯಿಂದ ಹಿಡಿದು ೫ ವರ್ಷದ ಅಮಾಯಕ ಹೆಣ್ಣು ಮಗುವಿನ ಮೇಲ ದೌರ್ಜನ್ಯ ಎಸಗುತ್ತಿರುವದು ಇದಕ್ಕೆ ಸಾಕ್ಷಿಯಾಗಿದೆ. ಹಳ್ಳಿಯಿಂದ ದಿಲ್ಲಿಯ ವರೆಗೂ ಇಂತಹ ಘಟನೆಗಳು ನಡೆಯುತ್ತಲೆ ಇವೆ. ಹೀಗಿದ್ದಾಗ ಆ ಮುದುಕಿ ಮಗು ಏನು ಮಾಡಲು ಸಾಧ್ಯ? ಶಾಲೆಯಲ್ಲಿ ವಿದ್ಯೆ ಕಲಿಸುವ ಗುರು ಮಗುವಿನ ಮೇಲೆ ಬಲತ್ಕಾರವೆಸಗಿದಾಗ ಆ ಮಗು ಹೇಗೆ ವಿದ್ಯೆ

---

[೭೮] ಕವಿತೆ-ಸಂ.ಮೃತ್ಯುಂಜಯ ಹೊರಕೇರಿ-ಪುಟ-೨೦೩

ಕಲಿಯಲು ಸಾಧ್ಯ ಉದಾ : ಗುಲಬರ್ಗಾ ಮಹಾಗಾಂವ ಸರಕಾರಿ ಶಾಲೆಯಲ್ಲಿ ಶಿಕ್ಷಕ ೫ನೇ ತರಗತಿಯ ವಿದ್ಯಾರ್ಥಿನಿ ಅತ್ಯಾಚಾರವೆಸಗಿರುವುದು. ನಮ್ಮ ಕಣ್ಣಮುಂದೆ ನಡೆದಿರುವ ಕರಾಳ ಸತ್ಯವಾಗಿದೆ.

ಎಲ್ಲ ವರ್ಗದ ಹೆಣ್ಣು ಮಗುವು ಕುಟುಂಬದ ಒಳಗಡೆ ತೀರ ಹತ್ತಿರದ ಸಂಬಂಧಿಗಳಿಂದ ಲೈಂಗಿಕ ಹಿಂಸೆಗೆ ಬಲಿಯಾಗುವಂತಹ ಪ್ರಕರಣಗಳು ಇಂದು ಹೆಚ್ಚು ಹೆಚ್ಚಾಗಿ ಕಂಡು ಬರುತ್ತೇವೆ. ಹೆಣ್ಣು ಶಿಶುಗಳ ಮೇಲೆ ಲೈಂಗಿಕ ವಿಕೃತಿಗಳಂತೂ ಎದೆ ನಡುಗಿಸುವಷ್ಟು ದಾರುಣವಾಗಿವೆ ಮತ್ತು ಹತ್ತಿರದ ಸಂಬಂಧಿಗಳಿಂದ ಹೆಣ್ಣು ಮಗು ಲೈಂಗಿಕ ಹಿಂಸೆ ಅನುಭವಿಸುತ್ತದೆ. ಇದು ದುರಂತವೆ ಆಗಿದೆ.

ವಿಜಯಶ್ರೀ ಸಬರದ ಹೇಳುವುದು ಹಿಂದಿನ ಶಕುಂತಲೆ ದುಷ್ಯಂತನ ಬಗ್ಗೆ ಅಲ್ಲ. ಇಂದಿನ ಶಕುಂತಲೇ ದುಷ್ಯಂತರದೇ ಆಗಿದೆ. ಎಲ್ಲಾ ಕಾಲಘಟ್ಟಗಳಲ್ಲಿಯೂ ಇಂತಹ ಘಟನೆಗಳು ನಡೆಯುತ್ತಲೇ ಇವೆ. ಆದರೆ ಕಾಲ ಪ್ರದೇಶ ವ್ಯಕ್ತಿಗಳು ಬೇರೆ ಬೇರೆ ಅಷ್ಟೆ.

“ಕಂಬನಿಗಳಿಂದ ತೊಯ್ದ
ಈ ಬಾಳ ಕವಿತೆಯ
ಸಾಲುಗಳ ಮಧ್ಯೆ
ಶಬ್ದಗಳ ಮಧ್ಯೆ
ಕಳೆದು ಹೋದ ನನ್ನನ್ನು
ಹುಡುಕುತ್ತಿದ್ದೇನೆ.”[೮೦]

ಹೆಣ್ಣಿನ ಈ ಬದುಕೇ ಒಂದು ಕಾಗದ ಮೇಲಿನ ಬರಹದಂತೆ. ಆ ಬರಹದಲ್ಲಿ ಕವಯತ್ರಿ ಕಳೆದ್ಹೋದ ತನ್ನನ್ನು ತಾನು ಹುಡುಕುವಿಕೆಯಿದೆ. ಇಲ್ಲಿ ಮಹಿಳಾ ಸಮುದಾಯ ಹಿಂಸೆ,ಶೋಷಣೆಯಿಂದ ಧೃತಿಗೆಟ್ಟು ತನ್ನನ್ನೇ ತಾನು ಕಳೆದು ಕೊಂಡ ದುರಂತತೆಯನ್ನು ಹಾಗೂ ಅದಕ್ಕೆ ಪ್ರತಿಯಾಗಿ ಹುಡುಕುವ ಆಶಯವನ್ನು ವ್ಯಕ್ತ ಪಡಿಸುವುದನ್ನು ಕಾಣುತೇವೆ.

---

[೮೦] ಗುಬ್ಬಿಮನಿ-ಶಶಿಕಲಾ ವಸ್ತ್ರದ-ಪುಟ-೧೪

"ಹಸಿಯಾರದ ಈ
ಮಸಿಯ ಅಕ್ಷರಗಳ
ನಡುವೆ ಚಿತ್ತಲಾಗುತ್ತ
ಉಟ್ಟ ಸೀರೆಯ ಸೆರಗು
ಜಾರದಂತೆ
ಕಳಸ ತುಂಬಿ ಗುಡಿಗೆ
ಹೊರಟಿದ್ದೇನೆ"[೮೧]

ಇಲ್ಲಿ ಕವಯತ್ರಿ ತಾನು ಎಷ್ಟೇ ಅಕ್ಷರಸ್ಥ, ಸುಶಿಕ್ಷಿತಳಾದರೂ ಸಮಾಜ ತನ್ನನ್ನು ಅನುಮಾನ ದೃಷ್ಟಿಯಿಂದ ನೋಡುತ್ತಲೇ ಇರುತ್ತದೆ. ಜೊತೆಗೆ ಸಮಾಜದಲ್ಲಿ ತುಂಬಾ ಶೀಲ, ಚಾರಿತ್ರ್ಯ ಗೌರವದಿಂದ ತಾನು ನಡೆದುಕೊಳ್ಳುವುದು ಅಗತ್ಯವಾಗಿದೆ ಎಂದು ಹೇಳುವುದರ ಜೊತೆಗೆ ಸೂಕ್ಷ್ಮವಾಗಿ ಕಾರಣವನ್ನು ಕೂಡ ಕೊಡುತ್ತಾಳೆ. ಅದೇನೆಂದರೆ ಸಮಾಜದಲ್ಲಿ ಕಾಮುಕರು ತುಂಬಿಕೊಂಡಿದ್ದಾರೆ. ಅವರ ತಾಮಸ ದೃಷ್ಟಿ ನಮ್ಮ ಮೇಲೆ ಬೀಳದಿರಲಿ ಎಂಬ ಭಾವ ಇಲ್ಲಿದೆ. ಜೊತೆಗೆ ಇಂದು ದೇವಸ್ಥಾನಗಳಲ್ಲಿ ಹೆಣ್ಣುಮಕ್ಕಳಿಗೆ ಸುರಕ್ಷಿತ ಸ್ಥಳಗಳಿಲ್ಲವೆಂದು ಚಿತ್ರಿಸುತ್ತಾರೆ.

"ಹೆಣ್ಣು ಚಪ್ಪಲಿ
ಎಂದರು
ಬೇಕೆಂದಾಗ
ತಲೆಯ ಮೇಲಿಟ್ಟುಕೊಂಡು
ಮೆರವಣಿಗೆ ಗೈದರು
ಬೇಡವೆಂದಾಗ
ಬಾಗಿಲ ಹೊರಗಿಟ್ಟು
ಅನಿಷ್ಠವೆಂದು
ಅಸಹ್ಯ ಪಟ್ಟರು."[೮೨]

ಪುರುಷ ಸಮಾಜ ಒಮ್ಮೆ ಹೆಣ್ಣನ್ನು ದುರ್ಗಿ, ಕಾಳಿ, ಆದಿಶಕ್ತಿ ದೇವತೆಗಳೆಂದು ಪವಿತ್ರಭಾವ ತಾಳಿ, ಪೂಜಿಸಿದರು. ತಲೆಯ ಮೇಲೆ ಹೊತ್ತು ಕುಣಿದರೆ ಮತ್ತೊಮ್ಮೆ ಅವಳನ್ನು ದೂಷಿಸಿ ಅನಿಷ್ಟವೆಂದು, ಮೂದಲಿಸಿ ಅವಳನ್ನು ಬಹಿಷ್ಕರಿಸಿದ್ದನ್ನು ಕವಯತ್ರಿ ವ್ಯಥೆಯಿಂದ ಹೇಳುವುದನ್ನು ಇಲ್ಲಿ ಕಾಣುತ್ತೇವೆ.

---

೮೧ ಗುಬ್ಬಿಮನಿ–ಶಶಿಕಲಾವಸ್ತ್ರದ–ಪುಟ–೧೪
೮೨ ರೊಟ್ಟಿ ಮತ್ತು ಹುಡುಗಿ–ಮಲ್ಲಿಕಾ ಘಂಟಿ–ಪುಟ–೪೨

"ಅವ್ವ ನಿನ್ನ ಗರ್ಭ ಅರಳಿ
ಅಲ್ಲೊಂದು ಜೀವ ಕುಸುರೊಡೆದಾಗ
ನಿನ್ನ ಮೈಮನ ಪುಳಕಗೊಂಡು
ಬಯಕೆ ಊಟ ಉಂಡು ನಕ್ಕು ನಲಿದೆಯಲ್ಲ
ಇದ್ದಕ್ಕಿದ್ದಂಗ ಅವ್ವ ದೊಡ್ಡ ಡಾಕ್ಟರ್ ಕಡೆ ಹ್ವಾದಳು
ಅದೇನೋ ಸ್ಕ್ಯಾನಿಂಗ್ ಅಂತ, ಫಿಮೇಲ ಅಂತ
ಗುಸು ಗುಸು ಮಾತಾಡಿದ್ರು
ಅಜ್ಜಿ 'ಹೆಣ್ಣ ? ಹೆಣ್ಣ ಇದ್ದರ ಇಂದೇ ತೆಗದ ಬಿಡ್ರಿ' ಅಂದಾಗ
ನನ್ನ ಎದಿ ಒಡದು ಅವ್ವಾ
ಅಂತ ಚೀರಿ ಅತ್ತು ಬಿಟ್ಟೆ."[೮೩]

ಇಂದು ಸಮಾಜದಲ್ಲಿ ಭ್ರೂಣಹತ್ಯೆ ಒಂದು ಬಗೆಯ ಪಿಡುಗಾಗಿದೆ. ಹೆಣ್ಣೆಂದರೇ ಒಂದು ರೀತಿ ಶಾಪವೆಂದು ಪರಿಣಮಿಸಿದೆ. ಇದರಿಂದ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ. ಇದಕ್ಕೆ ವರದಕ್ಷಿಣೆಯಂತಹ ಮಹಾಮಾರಿ ಪಿಡುಗುಗಳು ಕಾರಣವಾಗಿವೆ. ಹಾಗಾಗಿ ಆ ವರದಕ್ಷಿಣೆಯನ್ನು ಬಡವರಿಗೆ ಕೊಡಲಾಗದು. ಜೊತೆಗೆ ಭಾರತೀಯ ಸಂಸ್ಕೃತಿಯಲ್ಲಿ ಗಂಡೆಂದರೆ ಶ್ರೇಷ್ಠ, ವಂಶೋದ್ಧಾರಕ ಎಂಬ ಭಾವನೆ ಇರುವದು. ಹೆಣ್ಣು ಇನ್ನೂ ಮಾಂಸದ ಮುದ್ದೆ ಇರುವಾಗಲೇ ಅದು ಬೇಡವೆನ್ನುವುದು. ಲಿಂಗ ಪರೀಕ್ಷೆ ಮಾಡಿಸಿ ಅಜ್ಜಿಯಾದವಳು ಹೆಣ್ಣಾದರು, ಹೆಣ್ಣನ್ನು ವಿರೋಧಿಸುತ್ತಾಳೆ. ಅದನ್ನು ತೆಗೆದು ಬಿಡ್ರಿ ಅಂತ ಎಂದು ಮನುಷ್ಯತ್ವ ಮರೆತು ಹೇಳುತ್ತಾರೆ. ಅದಕ್ಕೆ ತಾಯಿಯನ್ನು ಆ ಹೆಣ್ಣು ಕುಡಿ ಹೀಗೆ ವಿನಂತಿಸಿಕೊಳ್ಳುತ್ತದೆ.

"ಅವ್ವ ! ತಾಯಿ ದೇವರು ಅಂತಾರ
ನೀ ಕರುಣಾಮಯಿ ಅಂತ ಜಗತ್ತ ಹೇಳತೈತಿ
ನನ್ನ ಮ್ಯಾಲ ಅಂತಃಕರಣ ತೋರಿಸವ್ವ
ನನ್ನ ಕತ್ತ ಹಿಸುಕಿ ಕಸದ ಬುಟ್ಟ್ಯಾಗ ಎಸಿಬ್ಯಾಡವ್ವ."[೮೪]

'ಭ್ರೂಣ' 'ಅವ್ವಾ' ತಾಯಿ ನಿನ್ನನ್ನು ದೇವರು ಅಂತಾರ, ನನ್ನ ಮ್ಯಾಲ ಅಂತಃಕರಣ ತೋರಸವ್ವ, ನನ್ನ ಕತ್ತ ಹಿಸುಕಿ ಕಸದ ಬುಟ್ಟ್ಯಾಗ ಎಸಿಬ್ಯಾಡವ್ವ ಎಂದು ಅಂಗಲಾಚುವಲ್ಲಿ ಹೆಣ್ಣಿನ ಅಸಾಯಕತೆ ವ್ಯಕ್ತವಾಗಿದೆ. ಭ್ರೂಣದ ಮಾತಿನ ಚಾಟಿ ಅನನ್ಯವಾಗಿದೆ 'ಬಾಳು ಕೊಡವ್ವ' ಎಂದು ಭ್ರೂಣದ ಮೂಲಕ ಹೇಳಿಸುವ ಕವಯತ್ರಿ ಸಮಸ್ಯೆಯ ಗಂಭೀರತೆಯನ್ನು ಮನಮುಟ್ಟುವಂತೆ ಸರಳವಾದ ಪದಗಳಲ್ಲಿ ಕಟ್ಟಿ ಕೊಟ್ಟಿದ್ದಾರೆ. ಸರಸ್ವತಿ ಚಿಮ್ಮಲಗಿಯವರು 'ಬಾಳು ಕೊಡವ್ವ' ಎಂಬ ಕವನದ ಮೂಲಕ ಹೆಣ್ಣು ಭ್ರೂಣ ಹತ್ಯೆಯನ್ನು ನಿಷೇಧಿಸುತ್ತಾರೆ. ಮಾಲತಿ ಪಟ್ಟಣಶೆಟ್ಟಿ 'ನಾ ಬರಿ

---

೮೩ ಮಹಿಳಾ ಕಾವ್ಯ ಸಂಗ್ರಹ–ಸಂ.ಕು.ಕೆ.ಜಿ ಸಣಕಳ್ಳಿ–ಪುಟ–೩೯
೮೪ ಮಹಿಳಾ ಕಾವ್ಯ ಸಂಗ್ರಹ–ಸಂ.ಕು.ಕೆ.ಜಿ ಸಣಕಳ್ಳಿ–ಪುಟ–೪೦

ಭ್ರೂಣವಲ್ಲ' ಎಂಬ ಕವಿತೆಯಲ್ಲಿ ಹೆಣ್ಣು ಮಗು ಎನ್ನುವುದು ಯಾರಿಗೂ ಬೇಡವಾಗಿ ಅದು ಒಂದು ಜೀವ ಎನ್ನುವುದು ಇಲ್ಲಿ ಹೇಳ ಬಯಸಿರುವರು.

"ಕೇಳವ್ವಾ
ಕಂಡಿಲ್ಲಾ ನಾನಿನ್ನೂ
ಬದುಕಿನಾಗಸದ ನೀಲ
ಪಚ್ಚೆಯಂಥ ನೆಲ
ಗಾಳಿಯೂ ಮೃದು ಸ್ಪರ್ಶ
ನಾ ಬರಿ ಭ್ರೂಣವಲ್ಲ
ನನ್ನ ಮುದ್ದಿನ ಅವ್ವ
ವರವ ಕೊಡು ತಾಯಿ
ನನ್ನ ಉಸಿರಿಗೆ
ನಿನ್ನ ಬಾಳಿನ ಹೆಸರಿಗೆ
ಹೂ ತರುವೆನೆ ನಿನ್ನ ಹೆಸರಿಗೆ
ನಾ ಬರಿ ಭ್ರೂಣವಲ್ಲ."[೮೫]

ನಮ್ಮ ಜೀವ ಜಗತ್ತಿನಲ್ಲಿ ಹೆಣ್ಣು ಇಲ್ಲದೆ ಮುಂದಿನ ಸೃಜನ ಕ್ರಿಯೆ ನಡೆಸಲು ಸಾಧ್ಯವಿಲ್ಲ. ಭ್ರೂಣ ಹತ್ಯೆಯಿಂದ ಹೆಣ್ಣು ಮಕ್ಕಳ ಸಂಖ್ಯೆ ಕ್ಷೀಣಿಸಿ, ಕನ್ಯೆಯರು ಸಿಗದೆ, ಮದುವೆಗಳಾಗದೆ, ಮಕ್ಕಳಾಗದೆ, ಜೀವ ಪರಂಪರೆ ನಿಲುಗಡೆ ಬರುತ್ತದೆ. ವೇಶ್ಯೆಯರ ಸಂಖ್ಯೆ ಹೆಚ್ಚಾಗುತ್ತದೆ. ಏಡ್ಸನಂಥ ರೋಗಗಳು ಹೆಚ್ಚುತ್ತವೆ. ತಾಯಿ, ಅಕ್ಕ, ತಂಗಿ, ಹೆಂಡತಿ, ಗೆಳತಿಯರಿಲ್ಲದ ಪುರುಷ ಭ್ರಷ್ಟನಾಗುತ್ತಾನೆ. ಈ ಎಲ್ಲ ಸತ್ಯಗಳನ್ನು ಅರಿಯಬೇಕಿದೆ. ವರದಕ್ಷಿಣೆಯ ದೌರ್ಜನ್ಯ ಹೆಣ್ಣಿನ ಮೇಲಿನ ಅತ್ಯಾಚಾರ ಹೆಣ್ಣು ಮಕ್ಕಳ ಮಾರಾಟ ಇತ್ಯಾದಿ ಸಮಸ್ಯೆಗಳಿಗೆ ತುರ್ತು ಪರಿಹಾರಗಳ ಕಾಣಬೇಕಿದೆ. ಭ್ರೂಣವಸ್ಥೆಯಲ್ಲಿದ್ದ ಹೆಣ್ಣು ಮಗು ತಾಯಿಯನ್ನು ಪ್ರಾರ್ಥಿಸಿ ತನ್ನನ್ನು ಯಾವ ಕಾರಣಕ್ಕೂ ಕೊಲ್ಲಬಾರದೆಂದು ಹೇಳುವ ಮೂಲಕ ಇಡೀ ಸ್ತ್ರೀ ಕುಲದಲ್ಲಿ ಮಗಳ ಅಂತಃ ಕರಣದ ಲೋಕದ ಅರಿವನ್ನು ಮೂಡಿಸುತ್ತದೆ.

ಕೆ. ನೀಲಾ ರವರ 'ಗುಲಾಮಗೋಳು' ಕವನದಲ್ಲಿ ಹೆಣ್ಣಿನ ಗೋಳಿನ ಕಥೆ ವಿಭಿನ್ನವಾಗಿದ್ದು, ಅದು ಹೀಗಿದೆ.

---

[೮೫] ಆಧುನಿಕ ಕವಿತೆಗಳ ಸಂಗ್ರಹ-ಸಂ.ಡಾ.ವಿಜಯಶ್ರೀ ಸಬರದ-ಪುಟ-೫೬

"ಹೇಗೆ ಹೇಳಿ ನಾನು
ಇವಳ ಗಿಡಕ್ಕೆ ಹೂವಾಗಿಸಿ
ಮರಕ್ಕೆ ಬಳ್ಳಿ ಯಾಗಿಸಿದಿರಿ
ಬೇಕು ಬೇಕೆಂದಾಗ
ಸುಗಂಧ ಸೂಸುವ ಮಾಲೆಯಾಗಿಸಿ
ಬಾಡಿದಾಗ ಬೇಡೆಂದು
ಕಸದೊಟ್ಟಿಗೆ ಕಸವಾಗಿಸಿದಿರಿ."[೮೬]

ಬೇಕೆನಿಸಿದಾಗ ಹೆಣ್ಣನ್ನು 'ದೇವಿ' ಎಂದು ಪೂಜಿಸಿದರು. ಬೇಡವೆನಿಸಿದಾಗ 'ರಾಕ್ಷಸಿ' ಎಂದರು. ಹಾಗೆಯೇ ಪುರುಷ ತನಗೆ ಬೇಕು ಎಂದಾಗ ಗಿಡದಲ್ಲಿನ ಹೂವಿಗೆ ಈ ಹೆಣ್ಣನ್ನು ಹೋಲಿಸಿದ. ತಾನು ಮರವಾಗಿ ಅವಳನ್ನು ಬಳ್ಳಿಯಾಗಿಸಿದ ಸುಗಂಧದ ಹೂವಿನ ಮಾಲೆಯನ್ನಾಗಿ ಮಾಡಿ ಹಾಕಿಕೊಂಡು. ಅದೇ ಪರಿಮಳವು ಇಲ್ಲವಾದಾಗ ಅದನ್ನು ಹಿಚುಕಿ ಉಪಯೋಗವಿಲ್ಲದ ವಸ್ತು ಎಂದು ಬಗೆದು ಕಸದ ಬುಟ್ಟಿಯಲ್ಲಿ ಹಾಕಿದರು. ಕೆ. ನೀಲಾ ರವರು ಈ ಕವನದ ಮೂಲಕ ಯಾವಾಗ ಹೆಣ್ಣು ಬೇಕು, ಯಾವಾಗ ಬೇಡ ಎನ್ನುವುದು ಈ ಸಮಾಜವೇ ನಿರ್ಧರಿಸಿ ತೀರ್ಮಾನ ತೆಗೆದುಕೊಳ್ಳುತ್ತದೆ. ಹೆಣ್ಣಿಗೆ ಯಾವುದೇ ಆಯ್ಕೆಯಾಗಲಿ, ಅಧಿಕಾರವಾಗಲಿ ಇಲ್ಲ ಎಂದು ಈ ಕವಿತೆಯಲ್ಲಿ ಸೂಚಿಸಿದ್ದಾರೆ.

"ಘಮಟುಗಟ್ಟಿದ ಅಡುಗೆ ಕೋಣೆಗಳಿವೆ
ಜಿಡ್ಡುಗಟ್ಟಿದ ಬಾಣಂತಿ ಖೋಲಿಗಳಿವೆ
ಕೋಪಾಗ್ರಹಗಳಾವವೂ ನಮಗಿಲ್ಲ ಪ್ರಭುವೇ!
ಸೂರ್ಯ ಕಿರಣಗಳೇ ಕಾಣದ ನಮ್ಮ
ಕತ್ತಲು ಕೋಣೆ ಗವಿಗೊಮ್ಮೆ
ನೀನು ದಯಮಾಡಿಸಬಾರದೇ ?."[೮೭]

ಹೆಣ್ಣು ಕುಟುಂಬದ ಅಡುಗೆ ಮನೆಯಲ್ಲಿ ಶೋಷಣೆ ಅನುಭವಿಸುತ್ತಾ ಹೊರಗೆ ಸಮಾಜದಲ್ಲಿಯು ಶೋಷಿತಳಾಗುತ್ತಿದ್ದಾಳೆ. ಕೋಮು ಗಲಭೆ, ಅತ್ಯಾಚಾರ, ಯುದ್ಧಗಳು, ಹೋರಾಟಗಳು ಇವೆಲ್ಲ ಪುರುಷ ಸಮಾಜ ಸೃಷ್ಟಿಸಿದವುಗಳಾಗಿವೆ. ಆದರೆ ಇವೆಲ್ಲವಕ್ಕೂ ಬಲಿ ಪಶುವಾಗುತ್ತಾಳೆ ಹೆಣ್ಣು. ಅದಕ್ಕೆ ಕವಿ ಆ ಪ್ರಭುವನ್ನೆ, ನೀನು ಒಮ್ಮೆಯಾದರೂ ಹೆಣ್ಣಾಗಿ ಹುಟ್ಟಿ ಬಾ ಈ ನನ್ನ ಅಡುಗೆ ಮನೆ ಕಷ್ಟ, ಸಮಾಜದ ಕಷ್ಟ ಎಲ್ಲವನ್ನೂ ನೀನು ಒಮ್ಮೆ ಅನುಭವಿಸು.

---

[೮೬] ಹೊಸ ಶತಮಾನದ ಕಾವ್ಯ-ಸಂ.ಡಾ.ಕೆ.ಷರೀಫಾ-ಪುಟ-೨೯೩ (ಗುಲಾಮ ಗೋಳು : ಕೆ.ನೀಲಾ)

[೮೭] ಮಹಿಳಾ ಕಾವ್ಯ ಸಂಗ್ರಹ-ಸಂ.ಕು.ಕೆ.ಜಿ.ಸಣಕಳ್ಳಿ-ಪುಟ-೬೯

ಅಂದಾಗ ಹೆಣ್ಣಿನ ಕಷ್ಟ ಏನೆಂಬುದು ನಿನಗೂ ಅರ್ಥವಾಗುತ್ತದೆ. 'ಪ್ರಭುವೇ! ನೀನೊಮ್ಮೆ ಹೆಣ್ಣಾಗು' ಎಂದು ಪ್ರಶ್ನಿಸುತ್ತಾರೆ.

ಕೆ. ಷರೀಫಾ ರವರ 'ಗುಡಿಯಾ' ಕವನವು ಹೆಣ್ಣಿಗೆ ತನ್ನ ಬದುಕಿನ ಬಗ್ಗೆ ತಾನು ತೀರ್ಮಾನ ತೆಗೆದುಕೊಳ್ಳಲು ಅವಕಾಶಗಳಿಲ್ಲ. ಆ ಹಕ್ಕುಗಳು ದೊರೆಯಬೇಕು. ಎಷ್ಟೋ ಧರ್ಮಗಳಲ್ಲಿ ಅದರಲ್ಲೂ ಮುಸ್ಲಿಂ ಧರ್ಮದಲ್ಲಿ ಹೆಣ್ಣಿಗೆ ತನ್ನ ಆಯ್ಕೆಗೆ ಅವಕಾಶಗಳೇ ಇಲ್ಲ. ಹೀಗಾಗಿ ಹೆಣ್ಣಿನ ಎಷ್ಟೋ ಸಮಸ್ಯೆಗಳು ಮಾಧ್ಯಮಗಳಿಗೆ ಆಹಾರವಾಗುತ್ತಿವೆ. ಹೊರತು ಪರಿಹಾರ ಸಿಗುತ್ತಿಲ್ಲ ಎಂದು ತಮ್ಮ ಮನದ ನೋವನ್ನು ತೋಡಿ ಕೊಳ್ಳುತ್ತಾರೆ.

ದುರ್ಬಲರು, ಹೆಣ್ಣುಗಳು ಎಂದರೆ ಮೋಜಿನ ಸರಕುಗಳೆಂದೇ ಮತಾಂಧರು ತಿಳಿದಿದ್ದಾರೆ. ಅವರು ಇನ್ನಾದರೂ ಹೆಣ್ಣಿನ ಮೈಯಲ್ಲಿ ಜ್ವಾಲೆಯ ಕಣ್ಣುಗಳು ಹುಟ್ಟಿ, ಧಗಧಗಿಸ ಹತ್ತಿವೆ ಎಂಬುದನ್ನು ಅರಿಯಬೇಕೆಂದು ಎಚ್ಚರಿಸಿದ ಕವಯತ್ರಿ, ನರಸತ್ತ ಪರಿಸರಕ್ಕೆ ಚಾಟಿಯ ಏಟು ಕೊಟ್ಟು, ಹೊಸ ಬದುಕಿಗೆ ಭದ್ರ ಬುನಾದಿ ಹಾಕಿಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದಿರುವುದು ಔಚಿತ್ಯಪೂರ್ಣವಾಗಿದೆ. ಇಲ್ಲಿಯ ಬಹುತೇಕ ಕವನಗಳಲ್ಲಿ ಈ ಮೂಲ ಆಶಯವೇ ವ್ಯಕ್ತವಾಗಿದ್ದು, ಸಂಪ್ರದಾಯಕ್ಕೆ ಸಿಡಿದೇಳುವ ಪ್ರವೃತ್ತಿಯೇ ಅವುಗಳ ಪ್ರಧಾನ ಆಶಯವಾಗಿದೆ.

ಚಂದ್ರಶೇಖರ ಪಾಟೀಲ್‌ರವರು ೧೯೭೯ ರಲ್ಲಿ 'ಜ್ವಲಂತ' ಕವನ ಸಂಕಲನ ಹೊರತಂದರೆ, ಡಾ. ವಿಜಯಶ್ರೀ ಸಬರದ ಅವರು ಜ್ವಲಂತವಾಗಿಯೇ ಬೆಳೆಯುತ್ತ ಒಂದು ದಶಕದ ನಂತರ 'ಲಕ್ಷ್ಮಣರೇಖೆ ದಾಟಿದವರು' ಸಂಕಲನ ಹೊರತಂದರು. ವಾಸ್ತವದ ಕ್ರೌರ್ಯವನ್ನು ಬಿಡುಗಣ್ಣಿನಿಂದ ದಾಖಲಿಸುತ್ತಲೇ ಅದರ ವಿರುದ್ಧ ಬಂಡೇಳುವ ಈ ಎರಡೂ ಕಾವ್ಯ ಕೃತಿಗಳು ಕೇವಲ ಬಹಿರಂಗದ ಸಾಮಾಜಿಕ ನೆಲೆಯಲ್ಲಿ ಕೆಲಸಮಾಡದೇ ತೀರ ಆತ್ಮೀಯವಾದ ವೈಯಕ್ತಿಕ ಸಂಬಂಧಗಳಲ್ಲಿಯೂ ಸೂಕ್ಷ್ಮವಾದ, ದಟ್ಟವಾದ ವಿಚಾರದ ಎಳೆಗಳನ್ನು ಚಿತ್ರಿಸುತ್ತವೆ. ಇಂದು ಮನುಷ್ಯ ಅಧಿಕಾರ ಮತ್ತು ಹಣದ ಅಮಲಿನಲ್ಲಿ ದರ್ಪದ ವೇಷವನ್ನು ತೊಟ್ಟು ತನ್ನಲ್ಲಿರುವ ಮಾನವೀಯತೆಯನ್ನು ಮರೆತು ವರ್ತಿಸುತ್ತಿದ್ದಾನೆ. ಈ ರೀತಿಯ ವ್ಯವಸ್ಥೆ ಇಂದು ಎಲ್ಲೆಡೆ ಇದ್ದಿರುವುದು, ವರದಕ್ಷಿಣೆ, ಸತಿ ಸಹಗಮನ ಪದ್ಧತಿ, ಬಾಲ್ಯ ವಿವಾಹ ಇಂತಹ ಅನೇಕ ಸಾಮಾಜಿಕ ಸಮಸ್ಯೆಗಳು ಮುಗ್ಧ ಮಹಿಳೆಯನ್ನು ಬಲಿತೆಗೆದುಕೊಳ್ಳುತ್ತಿವೆ. ಈ ರೀತಿಯ ಅನಿಷ್ಟ ಪದ್ಧತಿಗಳ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಮೇಲೆ ಎಸಗುತ್ತಿರುವ ಕ್ರೂರ ಅಸ್ತ್ರಗಳಾಗಿವೆ. ಪೌರಾಣಿಕ ಸಂದರ್ಭದಲ್ಲಿ ರಾಮನು ಕೇವಲ ಒಂದೇ ಒಂದು ಸಲ ಸೀತೆಯನ್ನು ಪರೀಕ್ಷೆಗೆ

ಒಡ್ಡಿವ. ಆದರೆ ಇಂದು ಅನೇಕ ಸ್ತ್ರೀಯರು ರಾವಣರ ಕೈಯಲ್ಲಿ ಸೀತೆಗಿಂತ ಹೆಚ್ಚಿನ ಪರೀಕ್ಷೆಗೆ ನಿತ್ಯ ಒಳಗಾಗುತ್ತಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಅಸಹಾಯಕಳಾಗಿ ಅವಳ ಕನಸಿನ ಗೋಡೆಗಳು ಉರುಳಿ ಬಿದ್ದಿವೆ.

ಬಂಡಾಯದ ಕವಿಗಳು ಮೌಢ್ಯತೆ, ಅಂಧ ಸಂಪ್ರದಾಯಗಳ ಜೊತೆಗೆ ಅಹಂಭಾವ, ಸ್ವಾರ್ಥ ಸಣ್ಣತನದ ಗುಣಗಳನ್ನು, ಸಮಾಜದ ಆಗು-ಹೋಗುಗಳನ್ನು, ಅಲ್ಲಿಯ ಆಚಾರ-ವಿಚಾರಗಳನ್ನು ಕುರಿತು ಬೆರೆಗುಗೊಳಿಸುವಂತಹ ಕವನಗಳನ್ನು ರಚಿಸಿದ್ದಾರೆ. ತನ್ನ ಸ್ವಾರ್ಥ, ಸಣ್ಣತನ, ಅಪ್ರಮಾಣಿಕತೆಯಿಂದ ಪಶು, ಪಕ್ಷಿ ಪ್ರಾಣಿಗಳಿಗಿಂತ ತೀರ ಸಣ್ಣವನಾಗಿ ಬದುಕುವ ಮನುಷ್ಯರನ್ನು ಎಚ್ಚರಿಸುತ್ತಲೇ ಸಮಾಜದಲ್ಲಿ ಬದಲಾವಣೆಯನ್ನು ಬಯಸುತ್ತಾರೆ.

ಬಂಡಾಯ ಕಾವ್ಯದ ರಚನೆಗೆ ತೊಡಗಿದ್ದ ಎಚ್.ಎಸ್.ಮುಕ್ತಾಯಕ್ಕ, ವಿಜಯಶ್ರೀ ಸಬರದ, ಮಲ್ಲಿಕಾ ಘಂಟಿ ಮುಂತಾದ ಕವಯತ್ರಿಯರ ಕವನಗಳಲ್ಲಿ ಕಾವ್ಯಾಂಶಕ್ಕಿಂತ ಹೆಚ್ಚು ಪ್ರತಿಭಟನೆ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ. ಹೆಜ್ಜೆ ಹೆಜ್ಜೆಗೆ ಗಂಡಿನ ವಂಚನೆ, ಕ್ರೌರ್ಯಕ್ಕೆ ಸಿಲುಕಿ ನಲುಗಿದ ಕೆಳ ವರ್ಗದ ಹೆಣ್ಣಿನ ಒಳತುಡಿತವನ್ನು ಕವಿ ಮಾರ್ಮಿಕವಾಗಿ ಸಂವೇದನೆಗೊಳಿಸುತ್ತಾರೆ.

"ಎಳೆ ವಯಸ್ಸಿನಾಗ
ಗಂಡನ್ನ ಕಳಕೊಂಡು ರಂಡ್ಯಾದ
ನಮ್ಮ ಮನಿ ಮುಂದ್ಲಹಾರರ ಶಾರಕ್ಕ
ತಲಿ ಬೋಳಿಸಿ ಕೆಂಪು ಸೀರಿ ಉಟ್ಗೊಂಡು
ಬತ್ತಿ ಹೊಸ್ಯಾದು ನೋಡಿದ್ರ
ಅವರ ಮನೆನ್ನ ಮಡಿವಂತರು
ಮೂಗು ಮುರಿತಾರ
ಆಕಿ ಮುಡಚಟ್ಟಾಗ್ಯಾಂಳತ
ಹೊರಗಿಟ್ಟಾರ
ಅಪಶಕುನ ಅಂತ ದೂರ ಹೊಕ್ಕಾರ
ಆದರ ನನಗ ಆಕಿ
ಭಾರತ ಮಾತಾ ಆಗಿ ಕಾಣತಾಳ
ಆ ಕೆಂಪು ಸೀರಿಯೊಳಗ
ತಿರಂಗಿ ಜಂಡಾ ಹಾರಿದಾಂಗ ಆಗತ್ತ."[೮೮]

[೮೮] ನನ್ನವರ ಹಾಡು-ಡಾ.ಬಸವರಾಜ ಸಬರದ-ಪುಟ-೨೪

ಹಿಂದೂ ಸಂಪ್ರದಾಯ, ಪುರೋಹಿತಶಾಹಿ ವ್ಯವಸ್ಥೆಯಲ್ಲಿ ಗಂಡ ಸತ್ತನೆಂದರೇ ಮುಗಿಯಿತು. ತನ್ನ ಕುಂಕುಮ, ಬಳೆ, ತೆಗೆಯಬೇಕು. ಹೂ ಮುಡಿವ ಹಾಗಿಲ್ಲ. ಒಳ್ಳೆಯ ಸೀರೆ ಉಡುವ ಹಾಗಿಲ್ಲ. ಅವಳು ಎಷ್ಟೇ ಚಿಕ್ಕವಳಾಗಿದ್ದರೂ ಇದನ್ನೆಲ್ಲ ಪಾಲಿಸಲೇಬೇಕು. ಏಕೆಂದರೆ ಅವಳು ಇನ್ನೊಂದು ಮದುವೆಯಾಗುವ ಹಾಗಿಲ್ಲ. ಇನ್ನೊಬ್ಬ ಪುರುಷ ಆಕೆಯನ್ನು ನೋಡಬಾರದು.

ಉದಾ : ಮರಾಠಿಯ 'ಕಾಕಸ್ಪರ್ಶ' ಎಂಬ ಚಲನಚಿತ್ರದಲ್ಲಿ ಆಕೆ ತುಂಬಾ ರೂಪವತಿ ಮತ್ತು ಸುಂದರಿಯಾಗಿರುತ್ತಾಳೆ. ಆದರೆ ಅವಳ ಗಂಡ ಮದುವೆಯಾದ ಕೆಲವು ದಿನಗಳಲ್ಲಿಯೇ ತೀರಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ಅವಳು ೧೪ ವರ್ಷದ ಹುಡುಗಿ. ಗಂಡ ಸತ್ತಾಗ ಪಿಂಡಕ್ಕೆ ಕಾಗೆಗಳು ಬಂದು ಮುಟ್ಟುವುದಿಲ್ಲ. ಆಗ ಗಂಡನ ಅಣ್ಣ ನಿನ್ನ ಹೆಂಡತಿಯನ್ನು ಯಾರಿಗೂ ಕೊಟ್ಟು ಮದುವೆ ಮಾಡುವುದಿಲ್ಲ ಎಂದು ಮನಸ್ಸಿನಲ್ಲಿ ಅಂದು ಕೊಂಡಾಗ ಆ ಕಾಗೆಯು ಬಂದು ಮುಟ್ಟುತ್ತದೆ. ಆ ಹುಡುಗಿಯ ಭಾವ ಅವಳಿಗೆ ಇನ್ನೊಂದು ಮದುವೆ ಮಾಡದೇ ಬಿಳಿ ಸೀರೆ ಉಡಿಸಿ ಒಂದು ಮೂಲೇಯಲ್ಲಿ ಕೂಡಿಸುತ್ತಾರೆ. ಇಂಥ ಸಂಪ್ರದಾಯಗಳು ನಮ್ಮಲ್ಲಿ ಇರುವುದು ಕಾಗೆ ಮುಟ್ಟದಿರುವುದಕ್ಕೂ ಆಯ್ಕೆಯನ್ನು ಮನೆ ಬಿಟ್ಟು ಕಳುಹಿಸುವುದಿಲ್ಲ ಎನ್ನುವುದಕ್ಕೆ ಯಾವ ಸಂಬಂಧಗಳಿವೆ. ಒಂದು ಹೆಣ್ಣಿನ ಜೀವನ ಹಾಳು ಮಾಡುವುದೇ ಈ ಸಂಪ್ರದಾಯಗಳ ರೀತಿಯಾಗಿದೆ. ಇಲ್ಲಿ ಭಾವನ ಹೆಂಡತಿಯ ಇರಲಿಲ್ಲ. ಅವನಾದರೂ ಬಾಳು ಕೊಡ ಬೇಕಿತ್ತಲ್ಲವೆ. ಕೊನೆಗೆ ತನ್ನ ಆಸೆಗಳು ಇಡೇರದೆ, ಕೊರಗಿ ಹುಚ್ಚಳಾಗಿ ಸಾಯುತ್ತಾಳೆ. ತನ್ನ ಅನುಕೂಲಕ್ಕಾಗಿ ಪುರುಷ ಸ್ತ್ರೀಗೆ ಸೃಷ್ಟಿ ಕೊಟ್ಟಿರುವ ಮೌಲ್ಯಗಳಲ್ಲಿ ದ್ವಂದ್ವ ಅಸಂಗತತೆಯನ್ನು ಮೌಲ್ಯಗಳ ಹೆಸರಿನಲ್ಲಿ ನಡೆಯುವ ಕ್ರೌರ್ಯವನ್ನು ಬಂಡಾಯ ಕವಿಗಳು ತಮ್ಮ ಕವಿತೆಗಳಲ್ಲಿ ತಂದರು. ಸ್ತ್ರೀಯರ ಕುರಿತು ವ್ಯಾಪಕ ವಸ್ತು ವಿಸ್ತಾರ ಇರದಿದ್ರೂ ಸಬರದ ಅವರು ಕೆಲವು ಸ್ತ್ರೀ ಸಂವೇದನೆಗಳನ್ನು ತುಂಬ ಆತ್ಮೀಯವಾಗಿ ಚಿತ್ರಿಸುತ್ತಾರೆಂಬುದು ವಿಶೇಷ. ಅವುಗಳಲ್ಲಿ ತಾಯ್ತನದ ಬಯಕೆ, ಶೀಲ, ಅವಿವಾಹಿತ ಮಹಿಳೆಯ ಮಾನಸಿಕ ತೊಳಲಾಟ, ಉದ್ಯೋಗಸ್ಥ ಗೃಹಿಣಿಯರ ಪರದಾಟ, ಮೂಢನಂಬಿಕೆ, ಅಂಥ ಸಂಪ್ರದಾಯಗಳ ಸುಳಿಗೆ ಸಿಲುಕಿ ನಲುಗುವ ಗ್ರಾಮೀಣ ಕೆಳವರ್ಗದ ದಲಿತ ಮಹಿಳೆಯರ ದಾರುಣ ಚಿತ್ರಗಳನ್ನು ಬಿಡಿಸುತ್ತಾರೆ. 'ಅರುಣಾ' ಕವಿತೆಯಲ್ಲಿನ ಅರುಣಾಳ ನೋವು ಶಬ್ದಗಳಿಗೂ ಅತೀತವಾದುದು.

"ಲೆಕ್ಕಕ್ಕೆ ಬಂದ ಕನಸುಗಳಲ್ಲಿ
ಮಾತಿಗೆ ಮೀರಿದ ಮೌನಗಳಲ್ಲಿ
ಶಬ್ದಗಳಿಗೆ ಸಿಗದ ಭಾವನೆಗಳಲ್ಲಿ
ನೋವಾಗಿ-ನಲಿವಾಗಿ
ಇರುಳಾಗಿ - ಬೆಳಕಾಗಿ
ಶತಮಾನಗಳ ಬದುಕಿಗೆ
ಆಯಸ್ಕಾಂತವಾಗಿದ್ದಾಳೆ ಅರುಣಾ."[೮೯]

ಬದುಕಿನ ಯಾಂತ್ರಿಕತೆಯಲ್ಲಿಯೂ ಯಂತ್ರದಂತೆ ದುಡಿಯುವ ಮಹಿಳೆ ತನ್ನೊಳಗೆ ಬ್ರಹ್ಮಾಂಡದಷ್ಟು ನೋವು ತುಂಬಿಕೊಂಡರೂ ಪ್ರೀತಿಯ ಮಳೆ ಸಿಂಚನಗೈಯ್ಯುವ ಅವಳ ತಾಳ್ಮೆ ಆಕಾಶದಷ್ಟು ವಿಸ್ತಾರ. ಮಹಿಳೆಯಿಂದ ಮಾತ್ರ ಈ ತ್ಯಾಗ ಸಹನೆ, ಸಮರ್ಪಣೆ ಸಾಧ್ಯ. ಮಹಿಳೆ ತನ್ನನ್ನು ತುಳಿಯುತ್ತಿರುವ ವ್ಯವಸ್ಥೆಯಿಂದ ಮೌಲಿಕತೆಯನ್ನು ಕೊಡವಿಕೊಂಡು ಮೇಲೆಳಲು ಹವಣಿಸುವ ಪ್ರಯತ್ನವನ್ನು ಕವಿ ನವಿರಾದ ಭಾವ-ಭಾಷೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

## ೫.೬ ಬಂಡಾಯ ಕವಿತೆಗಳಲ್ಲಿ ಮಹಿಳಾ ಹೋರಾಟದ ನೆಲೆಗಳು :

ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ತಂದುಕೊಟ್ಟು, ಸ್ತ್ರೀ ಸಂವೇದನೆಗೆ ವೇದಿಕೆ ನಿರ್ಮಿಸಿದ ಪ್ರಥಮ ಪ್ರಯತ್ನ ಹನ್ನೆರಡನೆಯ ಶತಮಾನದ ವಚನ ಯುಗ ಎಂದು ತಿಳಿಯುವುದು ಉಂಟು. 'ಆಧ್ಯಾತ್ಮಿಕ ಸಾಧನೆಯ ವಲಯದಲ್ಲಿ ಗಂಡಿನ ನಡುವೆ ಯಾವ ತಾರತಮ್ಯಗಳು ಇಲ್ಲವೆಂದು ಈ ಚಳವಳಿ ಪ್ರತಿಪಾದಿಸಿತಾದರೂ ಐಹಿಕ ನೆಲೆಯಲ್ಲಿ ಸ್ತ್ರೀ ಪುರುಷರ ನಡುವಿನ ಸಮಾನತೆಯನ್ನು ಒಪ್ಪಿ ಆ ದಿಕ್ಕಿನಲ್ಲಿ ಮೂಲಭೂತ ಬದಲಾವಣೆಗಳನ್ನು ಮಾಡುವುದು ಚಳವಳಿಯ ಉದ್ದೇಶಕ್ಕೆ ಹೊರತಾಗಿತ್ತು' ಎಂಬುದು ಡಾ. ವಿಜಯಾದಬ್ಬೆಯವರ ಅಭಿಮತ. ಆಧ್ಯಾತ್ಮಿಕ ಸಾಧನೆಗೆ ಅವಕಾಶ ಹಾಗೂ ಆ ವಲಯದ ಸಮಾನತೆಯನ್ನು ಒಪ್ಪಿದ ತಾತ್ವಿಕ ಮಹಿಳೆಯರ ಐಹಿಕ ನೆಲೆಯ ಪ್ರತಿಭಟನೆಯನ್ನು ಬೆಂಬಲಿಸಿದ್ದು ಅಕ್ಕನ ಹೋರಾಟದ ಬದುಕು ಮಹಿಳೆಯ ನೋವು, ನಲಿವು ಅವಳ ಒಳತುಡಿತವನ್ನು ಸೂಕ್ಷ್ಮವಾಗಿ ಸೆರೆ ಹಿಡಿದು ಹೊರಗಿನ ಜಗತ್ತಿಗೆ ಪರಿಚಯಿಸಿದ್ದು ಹನ್ನೆರಡನೆಯ ಶತಮಾನ ಇದನ್ನು ಹೊರತು ಪಡಿಸಿದರೆ ಆಧುನಿಕ ಸಾಹಿತ್ಯದಲ್ಲಿ ಬಂಡಾಯ ಚಳವಳಿ ಎಂಬ ಮಾತನ್ನು ಒಪ್ಪಲೇಬೇಕಾಗುತ್ತದೆ. ಎಪ್ಪತ್ತರ ಉತ್ತರಾರ್ಧ ಹಾಗೂ ಎಂಬತ್ತರ ದಶಕಗಳು ಪ್ರತಿಭಟನೆಯ ಮತ್ತೊಂದು ಮಜಲಿಗೆ ತನ್ನನ್ನು ತಾನು ತೆರೆದುಕೊಂಡಿತು ಹೀಗಾಗಿ ಸ್ತ್ರೀ ಸಂವೇದನೆಯನ್ನು ಕೇವಲ ಮಹಿಳಾ ಲೇಖಕಿಯರು ಮಾತ್ರ

[೮೯] ನನ್ನವರ ಹಾಡು-ಡಾ.ಬಸವರಾಜ ಸಬರದ-ಪುಟ-೨೩

ಅಭಿವ್ಯಕ್ತಿಸದೆ, ಸಾಮಾಜಿಕ ನೆಲೆಗಟ್ಟಿನ ಮೇಲೆ ನಂಬಿಕೆ ಹೊಂದಿದ್ದ ಬಂಡಾಯ ಕವಿಗಳೂ ಸ್ತ್ರೀ ಸಂವೇದನೆ ಭಾವಗಳನ್ನು ಕಟ್ಟಿಕೊಟ್ಟರು.

"ಸುಂದರ ಹೆಣ್ಣುಗಳ-ಕಣ್ಣುಗಳ
ವನಪು-ವೈಯ್ಯಾರದ ಮಾಟಕೆ
ಥಕ- ತೈ ತಾಳಕೆ
ಕುಣಿ ಕುಣಿದು ಮಣಿದು
ಅಪ್ಪಳಿಸಿದ್ದು ಸಾಕು ಕವಿತೆ.
ಯೌವ್ವನದ ವಿಕೃತ ಭ್ರಮೆಗಳಿಗೆ
ಹಾಸಿಗೆ ಹಾಸಿ
ರತಿ ಸುಖವ ಸ್ಖಲಿಸುವರು
ಇನ್ನೂ ಬೇಡ
ಹಗಲಿರುಳು ದುಡಿದ
ನೊಂದ ರೈತರ ದನಿಯಾಗಿ
ಕೂಲಿ ಕಾರ್ಮಿಕರ ಬಂಧುವಾಗಿ
ಗುಡಿಸಲು ಒಳಗಿನ ಕುದಿಗೆ
ಹದಗೊಂಡು ಮಿದುಗೊಂಡು
ಬದುಕಿನ ಚೆಂಗುಲಾಬಿಯಾಗಿ
ನೀ ಅರಳುವುದು ನೋಡುವಾಸೆ ನನಗೆ"[೯೦]

ನವೋದಯ ಸಂದರ್ಭದಲ್ಲಿ ಕವಿಗಳು ಹೆಣ್ಣು, ಹೂ, ತಾರೆ ಹೆಣ್ಣಿನ ಒನಪು, ಒಯ್ಯಾರವನ್ನು ಕುರಿತು ಬರೆದಿದ್ದರು. ಅವುಗಳು ಈಗ ನೇಪಥ್ಯಕ್ಕೆ ಸರಿದು ಬಂಡಾಯ ಸಂದರ್ಭದಲ್ಲಿ ಶೋಷಣೆಗೆ ಒಳಗಾದ ಮಹಿಳಾ ಪರ ಸ್ತ್ರೀ ಸಂವೇದನೆಯನ್ನು ಹೇಳುವಂತಹ ಕವಿತೆಗಳಾಗಬೇಕು ಎಂದು ಕವಿಗಳು ಕರೆ ಕೊಡುತ್ತಾರೆ.

ವೈಯಕ್ತಿಕ ಬದುಕಿನಿಂದ ಸಾಮಾಜಿಕ ಬದುಕಿನೆಡೆಗೆ ಸಾಗುವ ಅವರ ಕ್ರಿಯೆ ಸಮಷ್ಟಿ ನೋವನ್ನು ಕನ್ನಡಿಕರಿಸುವಂಥದ್ದು, ಪರಂಪರೆಯಿಂದಾದ ಮನಸ್ಸಿನ ಗಾಯವನ್ನು ಮಾಗಿಸುವ ಶಕ್ತಿ ಅವರ ಕಾವ್ಯದಲ್ಲಿದೆ. ಈ ಗುಣದಿಂದಲೇ ಬಂಡಾಯದ ಪ್ರಮುಖ ಕವಿಗಳೂ ಗಮನ ಸೆಳೆಯುತ್ತಾರೆ.

---

[೯೦] ಮೂಡಲಕ ಕೆಂಪ ಮೂಡ್ಯಾವ-ಡಾ.ಬಸವರಾಜ ಸಬರದ-ಪುಟ-೩

"ಮೊದಲಲ್ಲಿ ತಯಾರಾಗಲಿ
ಆವರಣಗಳಿಲ್ಲದ ಅಂಗಳ
ಕಟ್ಟಲಾರೆ ನಾನಂತೂ ಇಮಾರತ್ತುಗಳು
ಕಟ್ಟ ಬಲ್ಲವರು ಇಂದಲ್ಲ ನಾಳೆ
ಇಲ್ಲಿಂದಲೇ ಬಂದಾರೆಂದು
ಆಸೆ ಹೊತ್ತವಳು ನಾನು
ಆ ಒಂದೇ ಒಂದು ದಿನಕ್ಕಾಗಿ
ತುದಿಗಾಲಲ್ಲಿ ಕಾಯುತ್ತಿರುವವಳು ನಾನು."[೬೧]

ಮಹಿಳೆಯ ಕುರಿತಾದ ಸಾಮಾಜಿಕ ನಿಷೇಧಗಳು ಇಂದಲ್ಲ ನಾಳೆ ಆವರಣಗಳಿಲ್ಲದ ಅಂಗಳವಾಗುತ್ತದೆ ಎಂಬ ಬಲವಾದ ನಂಬಿಕೆ ಇಲ್ಲಿದೆ. ನಮ್ಮ ಪರಿಸರ ನಿರ್ಮಿಸಿದ ನಿಲುವಿನಲ್ಲಿ ಬದಲಾವಣೆಯಾದಾಗ ಸ್ತ್ರೀಗೆ ಮುಕ್ತತೆಯ ಅನುಭವ ದೊರಕುತ್ತದೆ. ಆ ಒಂದು ನಾಳೆಗಾಗಿ ಆಸೆಗಣ್ಣಿನಿಂದ ನೋಡುತ್ತಿರುವ 'ಮಾಧವಿ ಭಂಡಾರಿ' ಸಮಸ್ತ ಮಹಿಳಾ ಸಮಾಜದ ಮೂಲ ಆಶಯವನ್ನು ತೆರೆದಿಟ್ಟಿದ್ದಾರೆ.

ಪ್ರಸ್ತುತ ವ್ಯವಸ್ಥೆಯಲ್ಲಿ ಮಹಿಳೆ ಅನುಭವಿಸುತ್ತಿರುವ ಸಂಕಟಗಳಿಗೆ ಪ್ರತಿಭಟಿಸುವಂತಹ ಶಕ್ತಿಯಿರದೆ ಇರುವುದು ಆಕೆಯ ಮೇಲಿನ ದೌರ್ಜನ್ಯಕ್ಕೆ ಪ್ರಮುಖ ಕಾರಣ. ಈ ಅಳುಮುಂಜಿತನದಿಂದಲೇ ಸಾಮಾಜಿಕ ಹಿನ್ನಡೆ ಅನುಭವಿಸುವ ಪರಿಸ್ಥಿತಿ ನಿರ್ಮಾಣವಾಗಿದೆ. ಇಂಥ ಕೊರತೆಯಿಂದ ಮೇಲೆ ಬರುವ ತವಕ ಡಿ.ಬಿ ರಜಿಯಾ ಅವರದು.

"ಅಕ್ಕ.....
ಅಡವಿಟ್ಟಿದ್ದೇವೆ
ನಮ್ಮ ಉಸಿರು
ಬಸಿರು ನಿಟ್ಟುಸಿರು
ಗೆದ್ದೆವೇ ?
ನವ ನಾಗರಿಕತೆಯಲ್ಲಿ
ನಮ್ಮ ನಾಳೆಗಳು ಸಾಯುತ್ತಿವೆ.
ನಿನ್ನ ಕೆಚ್ಚಿರದೆ."[೬೨]

ಮಾನಸಿಕ ಗುಲಾಮಗಿರಿಯ 'ಸುಳಿ'ಯಲ್ಲಿ ಸಿಲುಕಿರುವ ಮಹಿಳೆಯ ಭಾವನೆಗಳು ಹೊರ ಬರದಾಗಿವೆ. ಅಡವಿಟ್ಟಿದ್ದೇವೆ. ನಮ್ಮ ಉಸಿರು. ಬರೆದು ನಿಟ್ಟುಸಿರು ಎಂದು ಹೇಳುವ ಕವಯತ್ರಿ

---

[೬೧] ಕಟ್ಟುವುದು ಬಲು ಕಷ್ಟ-ಸ್ವಾಗತ ಸಮಿತಿ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು-ಪುಟ-೩೬
[೬೨] ಕವಿತೆ-ಸಂ.ಶಂಕರ ಕಟಗಿ-ಪುಟ-೧೭೧

ತನ್ನತನವೆಲ್ಲಾ ಬೇರೆಯವರ ಅಧೀನದಲ್ಲಿರುವುದರಿಂದ ಸ್ವಂತಿಕೆಯೆನ್ನುವುದು ಇಲ್ಲವಾಗಿದೆ. ಜೀವನದಲ್ಲಿ ಹೊಸ ಕನಸುಗಳು ಚಿತ್ತಬೇಕಾಗಿರುವ ನಾಳೆಗಳು ನವ ನಾಗರಿಕತೆಯಲ್ಲಿ ಸಾಯುತ್ತಿರುವುದು ಮಹಿಳೆಯ ಪರಿವರ್ತನೆಯ ಹಾದಿಯಲ್ಲಿ ದುರಂತವಾಗಿ ಪರಿಣಮಿಸಿವೆ.

ಹೊಸ ಆಶಯದೊಂದಿಗೆ ಮುಂದಿನ ಬದುಕು ಪ್ರವೇಶಿಸುವ ಬಯಕೆ ಮಹಿಳೆಯರದು. ಚರಿತ್ರೆಯುದ್ದಕ್ಕೂ ಅಳುವನ್ನೇ ಕಟ್ಟಿಕೊಂಡು ಬಂದ ಅವಳ ಅತ್ಯಂತ ಆತಂಕದ ಸ್ಥಿತಿಯಲ್ಲಿ ಬದುಕಿದ್ದಾಳೆ. ನಮ್ಮ ಸಂಪ್ರದಾಯಿಕ ಮನಸ್ಸು ಹೆಜ್ಜೆ ಹೆಜ್ಜೆಗೆ ಸಂಶಯ ಪಡುತ್ತ ಬಂದಿದೆ. ಇದಕ್ಕೆ ಮುಖ್ಯ ಕಾರಣ ಅವಳ ಅಧೀನ ಸ್ಥಿತಿ. ಈ ಅಧೀನ ಸ್ಥಿತಿಯಿಂದ ಮೇಲೆ ಬಂದಾಗ ತನ್ನ ಸ್ವತಂತ್ರ ವೈಯಕ್ತಿಕ ಬದುಕನ್ನು ರೂಪಿಸಿಕೊಳ್ಳಲು ಸಾಧ್ಯ. ಈ ಒಂದು ಮಾನಸಿಕ ಬಲದಿಂದಲೇ ಜಾಗತಿಕವಾಗಿ ಹೋರಾಟಕ್ಕೆ ಇಳಿದಿರುವುದು ಬದಲಾವಣೆಯ ಬಹುದೊಡ್ಡ ನಿರೀಕ್ಷೆಯಾಗಿದೆ.

ಈ ದಿಸೆಯಲ್ಲಿಯೇ ಸಂಚರಿಸುತ್ತಿರುವ ಕನ್ನಡದ ಮಹಿಳಾ ಕಾವ್ಯ ಸ್ತ್ರೀ ಜೀವನದಲ್ಲಿ ಹೊಸ ಆಶಾ ಕಿರಣಗಳನ್ನು ಮೂಡಿಸಿದೆ. ಇದರ ಪರಿಣಾಮವಾಗಿ ಅವಳ ಅರಿವಿನ ಲೋಕದಲ್ಲಿ ಕ್ರಾಂತಿಕಾರಕ ಸ್ಥಿತ್ಯಂತರಗಳು ಘಟಿಸಿ, ಬಂಧನ ಮುಕ್ತ ಜೀವನದಿಂದ ಜಾರಿಕೊಳ್ಳುವ ಹಂಬಲ ವ್ಯಕ್ತವಾಗಿದೆ.

> "ನಾವು ಕೈದಿಗಳು
> ನಾವೇ ನಿರ್ಮಿಸಿದ ಎತ್ತರದ ಗೋಡೆಗಳ ಮಧ್ಯೆ
> ತುಂಬಿರುವ ಗಾಢಾಂಧಕಾರದಲಿ
> ವ್ಯರ್ಥ ಶತಪಥ ತಿರುಗಿ
> ಗಗನಕ್ಕೆ ಕೊರೆದ ತೂತಿನಂತಿರುವ
> ಎತ್ತರದ ಚಿಕ್ಕಿಕಿಂಡಿಯಲಿ
> ನೇಸರನ ಕಿರಣಗಳು ತೂರಿ ಬರುವಾಗ
> ಬೆಳಕ ಹಂಬಲಿಸಿ ಹಾತೊರೆದು
> ಕೈ ಚಾಚಿ ಬೆಳಕ ಮೊತ್ತವನೇ
> ತಬ್ಬಿ ನಮ್ಮೊಳಗೆ ಹುದುಗಿಸುವ
> ಆತುರ."[೯೩]

ಹೆಣ್ಣಿಗೆ ತನ್ನ ಸುತ್ತಲಿನ ಪರಿಸರವೇ ಬಂಧನದ ಅನುಭವ ನೀಡಿವೆ. ಕೇವಲ ಮನೆಯ ಆವರಣಕ್ಕೆ ಸೀಮಿತವಾದ ಆಕೆಯ ವ್ಯಕ್ತಿತ್ವ ಜೈಲಿನಲ್ಲಿರುವ ಕೈದಿಯ ಮನಸ್ಥಿತಿ ಎದುರಿಸುತ್ತಿದೆ. ಕುಟುಂಬ ವ್ಯವಸ್ಥೆಯಲ್ಲಿ ಎಲ್ಲದರ ಒಡೆತನ ಹೊಂದಿರುವ ಪುರುಷ. ತನ್ನ ಅಸ್ತಿತ್ವ

---

[೯೩] ಕೈದಿಗಳು-ರಂಜನ ನಾಯಕ-ಪುಟ-೪೧

ಕಂಡುಕೊಳ್ಳದಂತೆ ಮಹಿಳೆಯ ಸುತ್ತ ಬೇಲಿ ಹಾಕಿದ್ದಾನೆ. ಇದನ್ನೇ ರಂಜನ ನಾಯಕರ ಅಭಿಪ್ರಾಯದಲ್ಲಿ ನಾವು ಕೈದಿಗಳು ಎಂಬ ಅರ್ಥ ಸೂಚಿಸುತ್ತದೆ.

ಸ್ತ್ರೀ ವಾದಿ ಹಿನ್ನೆಲೆಯ ಬರಹಗಾರ್ತಿಯರಲ್ಲಿ ಹೆಚ್ಚಾಗಿ ಗಮನ ಸೆಳೆದಿರುವ ಲೇಖಕಿ ಎಸ್. ಮಾಲತಿ ತಮ್ಮ ಬದುಕನ್ನೇ ಕಾವ್ಯವಾಗಿಸಿದ ವಿಶಿಷ್ಟತೆ ಅವರದು. ಬದುಕಿನೊಂದಿಗೆ ಸಂಘರ್ಷಕ್ಕಿಳಿದ ಮಾಲತಿಯವರು ಹೆಣ್ಣು ಮನದ ಆಸೆಗಳು ಮತ್ತು ಪ್ರಸ್ತುತ ವ್ಯವಸ್ಥೆಯಲ್ಲಿ ಹೆಜ್ಜೆ ಹೆಜ್ಜೆಗೂ ಎದುರಿಸುತ್ತಿರುವ ನೋವುಗಳನ್ನು ಬಿಚ್ಚು ಮನಸ್ಸಿನಿಂದ ಹೇಳಿಕೊಂಡಿದ್ದಾರೆ. ಗಂಡಿನ ಆಧಾರವಿಲ್ಲದೆ ಮಹಿಳೆ ಬದುಕಲಾರಳು ಎಂಬ ವಿಚಾರ ಸಾಮಾನ್ಯವಾಗಿರುವಾಗ ಇಡೀ ಪುರುಷ ವರ್ಗಕ್ಕೆ ಎದುರಾಗಿ ತಮ್ಮ ಮನದ ಇಂಗಿತವನ್ನು ಹೊರ ಹಾಕಿದ್ದಾರೆ.

“ಕಟ್ಟುತ್ತ ಹೋಗುತ್ತಿದ್ದೇನೆ ಚಿಕ್ಕ ಚಿಕ್ಕ ಕನಸುಗಳ
ಕಟ್ಟುತ್ತ ಹೋಗುತ್ತಿದ್ದೇನೆ ಬಿರಿದು ಬಾಡುವ ಮನಸುಗಳ
ಕಟ್ಟುತ್ತಿದ್ದೇನೆ ಅರಳಿ ನಗುವ ಕವನಗಳ
ನನ್ನ ಜೀವನಧಾರ ಈ ಕವನಗಳ.”[೬೪]

ಬದುಕಿನ ಅದ್ಭುತ ಹೆಣ್ಣಿಗೆ ಕಾವ್ಯವನ್ನೇ ಜೀವನ ಆಧಾರವಾಗಿಸಿದ ಕವಯತ್ರಿ ತನ್ನ ಭಾವನೆಗಳನ್ನು ಭಾರತೀಯ ಆಧುನಿಕ ಹೆಣ್ಣೊಬ್ಬಳು ಸಂಪ್ರದಾಯಿಕತೆಗೆ ಎದುರಾಗುವ ದಿಟ್ಟ ನಿಲುವನ್ನು ಮಾರ್ಮಿಕವಾಗಿ ವಿಶ್ಲೇಷಿಸಲಾಗಿದೆ.

ಸ್ತ್ರೀವಾದಿ ನೆಲೆಯಲ್ಲಿ ಬೆಳೆದು ಬಂದ ಮಾಲತಿಯವರ ಕಾವ್ಯ ಮಹಿಳೆಯ ನೋವುಗಳಿಗೆ ಸಹಜ ಭಾವನೆಗಳಿಗೆ ಸ್ಪಂದಿಸುವಂತದ್ದು. ಅವರ ಬಹುತೇಕ ಕವನಗಳು ತನ್ನ ಆಶಯಗಳನ್ನು ತೆಗೆದುಕೊಳ್ಳುವುದರೊಂದಿಗೆ ಇಡೀ ಮಹಿಳಾ ಜಗತ್ತಿನ ಒಳತೋಟಗಳನ್ನು ಬಿಚ್ಚಿಡುತ್ತವೆ. ತನ್ನ ಬದುಕನ್ನು ಆಸೆಗಣ್ಣಿನಿಂದ ನೋಡುತ್ತಿರುವ ಮಾಲತಿ ತಾನು ಕಟ್ಟಿಕೊಂಡಿರುವ ಭಾವನೆಗಳು ಬತ್ತಿದಾಗ ಸಹಜವಾಗಿ ವ್ಯವಸ್ಥೆಯ ಮೇಲೆ ಕೋಪಗೊಳ್ಳುವ ಮನಸ್ಥಿತಿಯನ್ನು ‘ಹಾದರಕ್ಕಿಳಿದ ಸದರ’ ದಲ್ಲಿ ವ್ಯಕ್ತಗೊಂಡಿದೆ.

---

೬೪ ಕ್ಷಣಿಕವಲ್ಲದ ಕ್ಷಣಗಳು–ಎಸ್.ಮಾಲತಿ–ಪುಟ–೧೫

“ಬೆಲ್ಲದ ಸಿಹಿ ಬದುಕಿನುದ್ದಕ್ಕೂ ಚೆಲ್ಲುತ್ತದೆಂದು ಕೊಂಡ
ನಾನೆಂದೂ ಸಿಡಿಯಲಿಲ್ಲ
ಮರಗಟ್ಟಿದ ಮುಗುಳ್ನಗೆ ಹೊತ್ತು ನಡೆದ
ನಾನೆಂದೂ ಕುಡಿಯೊಡೆಯಲ್ಲ
ಬೆಚ್ಚನೆಯ ಕತ್ತಲನು ಕಟ್ಟುತ ಒಳ ಸೋತೆ
ನಾನೇಕೆ ಎಲ್ಲ ಕತ್ತರಿಸುವ ಖಡ್ಗವಾಗಲಿಲ್ಲ?”[೯೫]

ಹೀಗೆ ಲೇಖಕಿಯ ಬದುಕು ಪರಿಚಯವಾಗುವುದರೊಂದಿಗೆ ಹೆಣ್ಣಿನ ಪರಿಸ್ಥಿತಿಯನ್ನು ಅರ್ಥೈಸುವ ‘ಕ್ಷಣಿಕವಲ್ಲದ ಕ್ಷಣಗಳು’ ಲೌಕಿಕ ಬದುಕಿಗೆ ಮುಖಾಮುಖಿಯಾಗುವ ಪ್ರಯತ್ನ ಹೊಂದಿದೆ ಮತ್ತು ಮಹಿಳಾ ಜಗತ್ತಿನ ನೈಜ ಚಿತ್ರಣ ಪ್ರಕಟಿಸುತ್ತದೆ.

ಮಹಿಳೆ ತನ್ನ ಮೇಲೆ ಜರುಗುವ ಎಲ್ಲ ರೀತಿಯ ಆಕ್ರಮಣಗಳನ್ನು ಮೀರಿ ತನ್ನದೇ ಲೋಕದಲ್ಲಿ ಬದುಕಲು ಬಯಸುತ್ತಾಳೆ. ಮಹಿಳಾ ಪರವಾದ ಕಾವ್ಯ ರಚನೆಯ ಉದ್ದೇಶವು ಕೂಡ ಆಕೆಯ ಅಸ್ತಿತ್ವದ ಜಗತ್ತನ್ನು ಪ್ರವೇಶಿಸುವುದೇ ಆಗಿದೆ. ಮತ್ತು ಸಾಮಾಜಿಕವಾಗಿ ಚಿಂತಿಸುವ ಯಾವುದೇ ಬರವಣಿಗೆಯ ಆಶಯವು ಇದೆ ಆಗಿರುತ್ತದೆ. ಮಾನವರು ಎಂದ ಮೇಲೆ ಎಲ್ಲರ ಆಸೆ ಆಕಾಂಕ್ಷೆಗಳಿಗೆ ಸಮಾನವಾದ ಗೌರವ ಇರಬೇಕು. ಆದರೆ ಗಂಡಸಿನ ಏಕಸ್ವಾಮ್ಯ ಅಧಿಕಾರದ ಮುಂದೆ ಎಲ್ಲವೂ ಗೌಣ, ಅದಕ್ಕಾಗಿಯೇ ಮಹಿಳೆ ತನ್ನ ಸ್ವತಂತ್ರಯುತ ಬದುಕಿಗೆ ಯಾವುದು ಅಡ್ಡ ಬರುತ್ತಿದೆಯೋ. ಅದರ ವಿರುದ್ಧ ನಿಲ್ಲಲು ತಯಾರಾಗಿದ್ದಾಳೆ.

“ನಿರ್ಭಯವಾಗಿ
ನಿಶ್ಚಿಂತೆಯಿಂದಿರಿ
ನೀವು ಕತ್ತೆತ್ತದಿರುವವರೆಗೆ
ನಿಮ್ಮ ಕಣ್ಣಾಗಿ ಕಾಯುವ ಗಂಡುಗಳು
ನಿಮ್ಮ ಸುತ್ತ ಇರುತ್ತಾರೆ.”[೯೬]

ಸ್ತ್ರೀಯನ್ನು ಮುಕ್ತವಾಗಿ ಬೆಳೆಯಲು ಪುರುಷ ವರ್ಗ ಬಿಡುತ್ತಿಲ್ಲ. ಅವಳ ಹೆಜ್ಜೆಗೂ ಹದ್ದಿನ ಕಣ್ಣಿರಿಸಿ ಸಂಶಯ ಭಾವನೆಯಿಂದ ನೋಡುತ್ತಿದೆ. ಇದು ಕೇವಲ ಪುರುಷರ ದಬ್ಬಾಳಿಕೆ ಎನ್ನುವುದಕ್ಕಿಂತ. ಇಂತಹ ಪರಿಸ್ಥಿತಿ ನಿರ್ಮಾಣ ಮಾಡಿರುವ ಸಾಮಾಜಿಕ ನಿಯಮಗಳನ್ನು ದೋಷಿಸಬೇಕಾಗುತ್ತದೆ.

---

೯೫ ಕ್ಷಣಿಕವಲ್ಲದ ಕ್ಷಣಗಳು–ಎಸ್.ಮಾಲತಿ–ಪುಟ–೧
೯೬ ಇತಿಗೀತಿಕೆ–ವಿಜಯಾ ದಬ್ಬೆ – ಪುಟ– ೬೧

ಇಪ್ಪತ್ತೊಂದನೆಯ ಶತಮಾನದ ಆದಿಯಲ್ಲಿ ನಿಂತು ಇಪ್ಪತ್ತನೆಯ ಶತಮಾನದ ಮಹಿಳೆ ಸ್ವಾತಂತ್ರ್ಯ ಸಮಾನತೆಗಾಗಿ ಅವಳು ನಡೆಸಿದ ಹೋರಾಟಗಳನ್ನು ಅವಲೋಕಿಸಿದಾಗ ರಾಷ್ಟ್ರದ ಸ್ವಾತಂತ್ರ್ಯದೊಂದಿಗೆ ಅವಳು ತನ್ನ ಸ್ವಾತಂತ್ರ್ಯವನ್ನು ಗಳಿಸಿಕೊಂಡಿರುವದನ್ನು ಕಾಣುತ್ತೇವೆ. "ಭಾರತೀಯ ಮಹಿಳೆ ಸ್ತ್ರೀ-ಪುರುಷ ಸಮಾನತೆಯನ್ನು ವಾಸ್ತವದಲ್ಲಿ ದಕ್ಕಿಸಿಕೊಂಡದ್ದು ಅತ್ಯಲ್ಪವಾದರೂ ಆ ಕುರಿತ ವ್ಯಾಪಕ ಚರ್ಚೆಗಳು ನಡೆದು ಹೋರಾಟಕ್ಕೆ ಪೀಠಿಕೆ ಹಾಕಿದ ದಿನಗಳವು. ಭಾರತದ ಸುಧಾರಣವಾದಿ ಚಳವಳಿ ರಾಷ್ಟ್ರೀಯವಾದಿ ಚಳವಳಿಗಳ ಜೊತೆಗೆ ಆಧುನಿಕತೆ ಪಾಶ್ಚಾತ್ಯೀಕರಣಗಳು ಸ್ತ್ರೀಯರ ಸಾಂಪ್ರದಾಯಿಕತೆಯ ಸರಳುಗಳನ್ನು ಸ್ವಲ್ಪವಾದರೂ ಸಡಿಲಿಸಿತೆಂಬ ಮಾತು ಸತ್ಯಕ್ಕೆ ದೂರವಾದುದೆನ್ನಲ್ಲ."[೯೭] ಮಹಿಳಾ ಹೋರಾಟಗಳು ಕೇವಲ ಸಿಟ್ಟು, ಸೇಡು, ತಿರಸ್ಕಾರಗಳಿಂದ ಗಟ್ಟಿಯಾಗುವುದಿಲ್ಲ. ಬದಲಾಗಿ ಸಮಸ್ಯೆಗಳ ಆಳವಾದ ಅಧ್ಯಯನ, ಅರಿವು, ಚಿಂತನ ಮಂಥನಗಳಿಂದ ಹೋರಾಟಗಳು ಜನಪರ ನಿಲುವು ಪಡೆಯುತ್ತ ತನ್ನ ಹೋರಾಟದ ಹಾದಿಯನ್ನು ತಲುಪಬೇಕಾದ ಗುರಿಯನ್ನು ಸ್ಪಷ್ಟಪಡಿಸಿಕೊಳ್ಳುತ್ತ ಸಾಗಬೇಕಾಗಿದೆಯೇ ವಿನಃ ಯಾವುದೋ ಕ್ಷಣಿಕ ಭಾವನೆಗಳು ಹೋರಾಟದ ದಿಕ್ಕು-ದೆಸೆಗಳನ್ನು ನಿರ್ದೇಶಿಸಬಾರದು. ಒಂದು ವೇಳೆ ಹಾಗಾದರೆ ಅಂತಹ ಸಂಘಟನೆಗಳು, ಹೋರಾಟಗಳು ಈ ನೆಲದಲ್ಲಿ ಗಟ್ಟಿಯಾಗಿ, ಆಳವಾಗಿ ಬೇರೂರಿ ನಿಲ್ಲಲು ಸಾಧ್ಯವಾಗುವದಿಲ್ಲ. ಮಹಿಳಾ ಚಳವಳಿಗಳು ಪುರುಷ ವಿರೋಧಿ ಚಳುವಳಿಯಾಗಿಯಾಗಲಿ ಅಥವಾ ಸ್ತ್ರೀಯರನ್ನೇ ಪ್ರತ್ಯೇಕಿಸುವ ಚಳವಳಿಯಾಗಿ ರೂಪುಗೊಂಡರೆ, ಅದು ಎಂದಿಗೂ ಸಮಾಜದಲ್ಲಿ ಆರೋಗ್ಯ ಪೂರ್ಣ ಪರಿಸ್ಥಿತಿಯನ್ನು ನಿರ್ಮಿಸಲಾರದು.

ಅದಕೋಸ್ಕರ ಕವಯತ್ರಿ ಹೆಣ್ಣು ಹೋರಾಟ ಮಾಡುವವರೆಗೆ ಈ ಪುರುಷ ಸಮಾಜ ಸುಮ್ಮನಿರುವುದಿಲ್ಲ. ನೀವು ಧೈರ್ಯದಿಂದ ಇದ್ದರೆ ಏನಾದರೂ ಸಾಧಿಸಲು ಸಾಧ್ಯ. ವಿಜಯಾ ದಬ್ಬೆಯವರ 'ನೀವು ಕತ್ತೆತ್ತದಿರುವರೆಗೆ ನಿಮ್ಮ ಕಣ್ಣಾಗಿ ಕಾಯುವ ಗಂಡುಗಳು ನಿಮ್ಮ ಸುತ್ತ ಇರುತ್ತಾರೆ' ಎಂಬ ಮಾತನ್ನು ಸಾರ್ವಜನಿಕವಾಗಿ ಯೋಚಿಸಿದಾಗ ಸತ್ಯವೆನಿಸದೇ ಇರದು. ಹೆಣ್ಣಿಗೆ ಧೈರ್ಯ, ಸಾಹಸ ಒಂದಿದ್ದರೇ ಮಾತ್ರ ಪುರುಷ ಸಮಾಜದಿಂದ ಮುಕ್ತಿ ಹೊಂದಲು ಸಾಧ್ಯ.

ಹೆಣ್ಣಿನ ಭಾವನೆಗಳನ್ನೂ ತೆರೆದಿಡುವ ವಿಜಯಾ ದಬ್ಬೆ ಮಹಿಳಾವಾದಿ ಚಿಂತಕರಲ್ಲಿ ಪ್ರಮುಖರು. ಅವರ ಪ್ರತಿ ಕವನದ ಹಿಂದೆ ಹೆಣ್ಣಿನ ಕುರಿತಾದ ಕಳಕಳಿ ಅಪಾರವಾದುದು. ಮಹಿಳೆ ತಾನು ನಂಬಿದ ಮೌಲ್ಯ-ಆದರ್ಶಗಳನ್ನು, ರೀತಿ-ನಿಯಮಗಳನ್ನು ಏಕಮುಖ ಸಮಾಜದಲ್ಲಿ

---

೯೭ ಬಿತ್ತಕಕೆ–ಡಾ.ಕೆ. ಷರೀಫಾ – ಪುಟ–೩೫

ಗಾಳಿಗೆ ತೂರಿದ್ದು ವ್ಯವಸ್ಥೆಯ ಅನಿವಾರ್ಯತೆ. ತನಗೆ ಮಾತಾಡುವ ಸ್ವಾತಂತ್ರ್ಯವೇ ಇರದಿದ್ದಾಗ, ಆಕೆಯ ಬೇಕು-ಬೇಡಗಳಿಗೆ ಕಿವಿ ಗೊಡುವವರ್‍ಯಾರು? ತನ್ನ ಎಲ್ಲಾ ಕನಸು ಭಾವನೆಗಳಿದ್ದ ರೂಪವು ಬದಿಗೆ ಸರಿಸ ಬೇಕಾಗಿರುವುದು ಪರಿಸ್ಥಿತಿಯ ಒತ್ತಡವಾಗಿದೆ.

"ಅಡುಗೆ ಮನೆಯಲ್ಲಿ ೧೦೦% ಮೀಸಲು
ಪಡೆದು ಕೊಳ್ಳಿರಿ ಅಲ್ಲಿ ೫೦% ಪಾಲು
ಕೊಡಿರಿ ಶಾಸನ ಸಭೆಗಳಲ್ಲಿ ಸಮಪಾಲು
ಬರಲಿ ಸಮಬಾಳು."[೯೮]

ಅಲ್ಲಮಪ್ರಭುಬೆಟ್ಟದೂರು ಅವರು ಮಹಿಳಾ ಮೀಸಲಾತಿಯು ಅಡುಗೆ ಮನೆಗೆ ಮಾತ್ರ ೧೦೦ಕ್ಕೆ ನೂರರಷ್ಟಿದ್ದರೆ ಹೇಗೆ ಎಲ್ಲದರಲ್ಲೂ ಸಮಪಾಲು ಬೇಕು. ಒಂದು ಜೀವನ ಬಂಡಿಯಾಗಲಿ, ಒಂದು ಸಮಾಜದ ಮುನ್ನಡೆಯಾಗಲಿ ಸಾಗಬೇಕೆಂದರೆ ಹೆಣ್ಣು ಗಂಡು ಜಾತಿಗಳಿಗೆ ಸಮಾನ ಅವಕಾಶಗಳು ಸಿಗಬೇಕು. ರಾಜಕೀಯದಲ್ಲಿ ೨೦ ಮಾತ್ರವಲ್ಲ ; ೫೦ ಸಿಗಬೇಕೆನ್ನುವುದು ಕವಿಯ ನಿಲುವಾಗಿದೆ.

"ಜೀವನದಿಯ ಒಣಪಾತ್ರದಲ್ಲಿಗ ಆ ಭೋರ್ಗರೆತದ ನೆನಪು
ನೋವು ನುಗ್ಗಿ ಕುತ್ತಿಗೆ ಹಿಚುಕಿದಾಗ
ಒಡಳ ನೋವಿನ ಕಿಚ್ಚು ಹುಚ್ಚೆದ್ದು ಉರಿವಾಗ
ಕೇಳ ಬಹುದೇ ? ಕೇಳಿದರೂ ಉತ್ತರ ಬಂದೀತೆ ?
ಉತ್ತರ ಇದ್ದೀತೆ ?
ವಾಸ್ತವತೆಯ ಬೆಂಕಿಯಲ್ಲಿ ಬೀಳಲಾಗದ
ಈ ಸತಿಗೆ ಈ ಸರಳ ಉತ್ತರವೂ ತಿಳಿಯುವುದಿಲ್ಲ."[೯೯]

ಬದುಕಿನ ಎಲ್ಲ ಒತ್ತಡಗಳ ಮಧ್ಯೆ ಒತ್ತುವ ಆಸೆಗಳೊಂದಿಗೆ ಬತ್ತಿದ ಜಲದ ಕಣ್ಣು ಮಹಿಳೆಯ ದುಃಖಕ್ಕೆ ಹಿಡಿದ ಕನ್ನಡಿ. ದುಃಖದಿಂದ ಉಕ್ಕಿ ಬರುವ ಕಣ್ಣೀರು ಸುರಿದು ಸುರಿದು ಬತ್ತುವ ಕ್ರಿಯೆ ಸ್ತ್ರೀ ಶೋಷಣೆಯ ನಿರಂತರತೆಯನ್ನು ದಾಖಲಿಸುವಂತದ್ದು. ಲೋಕದ ದ್ವಂದ್ವಗಳ ನಡುವೆ ಈ ಮುಗ್ಧಳ ಸ್ಥಿತಿ ಗಂಭೀರವಾದದ್ದು ವಾಸ್ತವತೆಯೊಂದಿಗೆ ಬೆಲೆ ಬೇಕಾಗಿರುವುದು ಪರಿಸ್ಥಿತಿಯ ಅನಿವಾರ್ಯವಾಗಿರುವಾಗ, ಆಕೆಯು ಅಸಹಾಯಕಳಾಗಿರುವ ಮನಸ್ಥಿತಿ ಬಹುತೇಕ ಮಹಿಳೆಯರ ಸ್ಥಿತಿಯಾಗಿದೆ.

---
[೯೮] ಗುಲಗುಂಜಿ ಜನಮುಖಿ ಕವಿತೆಗಳು–ಅಲ್ಲಮಪ್ರಭು ಬೆಟ್ಟದೂರು–ಪುಟ–೩೫

[೯೯] ಅತಿಗೀತಿಕೆ–ವಿಜಯಾದಬ್ಬೆ–ಪುಟ–೩೧

ಹೀಗೆ ಹೆಣ್ಣು ಮನಸ್ಸಿನ ಸೂಕ್ಷ್ಮ ಒಳನೋಟಗಳನ್ನು, ವಸ್ತುಸ್ಥಿತಿಯ ಹಲವು ಪದರುಗಳನ್ನು ತೆರೆದಿಡುವ ಮೂಲಕ ಸತ್ಯದ ಹುಡುಕಾಟದಲ್ಲಿರುವ ಕವಯತ್ರಿಯ ವಿಜಯಾ ದಬ್ಬೆಯವರ ಮುಖ್ಯ ಕಾಳಜಿಯು ಗಮನಾರ್ಹವಾದದ್ದು. ಮಾನವೀಯ ಸಂಬಂಧಗಳನ್ನು ಬೆಸೆಯುವ ಅವರ ಪ್ರಯತ್ನ ಹಲವು ಕವನಗಳಲ್ಲಿ ಎದ್ದು ಕಾಣುವಂತದ್ದು. ಆದರಿಂದಲೇ ದಬ್ಬೆಯವರು ಬಂಡಾಯಕ್ಕಿಂತ ಮಹಿಳಾ ಪರ ಚಿಂತಕರಲ್ಲಿಯೇ ಹೆಚ್ಚಾಗಿ ಗುರುತಿಸಿಕೊಳ್ಳುತ್ತಾರೆ.

ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಆಜ್ಞೆಯಂತೆ ಪಾಲಿಸಿಕೊಳ್ಳುವ ಮೌಲ್ಯಗಳು ಗಂಡಿನ ಪರವಾಗಿಯೇ ವಾದಿಸುತ್ತವೆ. ಎಲ್ಲಿಯವರೆಗೆ ಮೌಲ್ಯಗಳನ್ನು ಅರ್ಥೈಯಿಸುವ ರೀತಿ ಬದಲಾಗುವುದಿಲ್ಲವೋ ಅಲ್ಲಿಯವರೆಗೆ ಮಹಿಳೆಗೆ ಶೋಷಣೆ ತಪ್ಪಿದ್ದಲ್ಲ. ಇಂದಿಗೂ ನಿರಂತರವಾಗಿ ಅನುಸರಿಸುತ್ತ ಬಂದಿರುವ ಮಹಿಳಾ ಶೋಷಣೆಯನ್ನು ಸಮಾಜದಿಂದ ಕಿತ್ತೊಗೆಯುವ ಯತ್ನಗಳು ಸಾಹಿತ್ಯ ಚಳವಳಿಗಳ ಮೂಲಕ ನಡೆದಿವೆ. ಇಂಥ ದಬ್ಬಾಳಿಕೆಯುತ ಜೀವನದಿಂದ ರೋಸಿ ಹೋದ ಅವಳು ವ್ಯವಸ್ಥೆಗೆ ಪ್ರತಿಭಟಿಸುವ ಧೈರ್ಯ ತೋರಿದ್ದು, ಅನೇಕ ಕವಿತೆಗಳಲ್ಲಿ ವ್ಯಕ್ತವಾಗಿದೆ.

"ನಂಬಿಕೆಯ ಕಣ್ಣಲ್ಲಿ ಸುಣ್ಣ ಚೆಲ್ಲದ ಧೀರ
ದಯೆಯ ಬೆನ್ನಲ್ಲಿ ಇರಿದ ಧರ್ಮಾವತಾರಿ
ಕರುಣಾರ್ದ್ರ ಗುಂಡಿಗೆಗೆ ಗುಂಡಿಟ್ಟ ಮಹನೀಯ
ದಯವಿಟ್ಟು ಉತ್ತರಿಸು ಒಂದು ಮಾತು
ರಕ್ತ ಮಾಂಸ ಮಣ್ಣು ಮೆತ್ತಿ ರೂಪಿಸಲಿಲ್ಲ
ತುತ್ತಿನೊಳಗಿನರ್ಥವನು ಬಡಿಸಲಿಲ್ಲ
ತೊದಲು ದನಿಯಲಿ ನುಡಿಯ ಕಡೆದು ನಿಲ್ಲಿಸಲಿಲ್ಲ
ಎಡವಿದರೆ ಕೈಹಿಡಿದು ನಡೆಸಲಿಲ್ಲ
ಹೇಳಯ್ಯ ಮಹನೀಯ
ಕೊಲ್ಲುವ ಕೈಯಲ್ಲಿ ಬದುಕ ಚಿಗುರಿಸಿದೆಯಾ."[೧೦೦]

ಪುರುಷಶಾಹಿ ಪ್ರಭುತ್ವವನ್ನು ಚರಿತ್ರೆಯ ಮೂಲಕ ಗ್ರಹಿಸುವ ಈ ಕವನ ಸಮಾಜದಲ್ಲಿ ಗೌರವಯುತವಾಗಿ ಮೆರೆಯುವ ಪುರುಷ ಪಾತ್ರಗಳು ತಮ್ಮ ಸ್ವಾರ್ಥಕ್ಕಾಗಿ ಮಹಿಳೆಯರನ್ನು ಬಲಿಪಶು ಮಾಡಿರುವುದನ್ನು ವಿಶ್ಲೇಷಿಸುತ್ತದೆ. ಅಲ್ಲದೆ ಕೊಲ್ಲುವ ಕೈಗಳಲ್ಲಿ ಬದುಕ ಚಿಗುರಿಸಿದೆಯಾ ಎಂದು ಕೇಳುವದು ಅನನ್ಯವಾಗಿದೆ.

---

೧೦೦ ಬಂಡಾಯ ಕಾವ್ಯ-ಸಂ.ಬರಗೂರು ರಾಮಚಂದ್ರಪ್ಪ-ಪುಟ-೨೨೮

ಮಾನವೀಯ ಸಂಬಂಧಗಳಿಗಾಗಿ ಹಂಬಲಿಸುವ ಮಹಿಳಾ ಕಾವ್ಯದಲ್ಲಿ ನೋವಿನ ಅನುಭವವೇ ಸ್ಥಾಯಿಯಾಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ಈ ನೋವಿನ ಜಿಡುಗಡೆಯನ್ನು ಪ್ರಧಾನ ಧಾರೆಯಾಗಿ ತೆಗೆದುಕೊಂಡ ಕಾವ್ಯ ಪ್ರತಿಭಟನೆ ರೂಪ ತಳೆದಿದೆ.

"ಅಯ್ಯಾ ನನಗೊಂದು ಆಸೆ
ಹಾಗೆ–ಹೀಗೆ
ಹೆಣ್ಣ ಬುಗುರಿಯಾಡಿಸುವ
ಇವುಗಳ ಕುಂಡಿಗೆ
ಒಮ್ಮೆಯಾದರೂ
ಜಾಡಿಸಿ ಒದಿಯಬೇಕು"[೧೦೧]

ಇದು ಇತಿಹಾಸದುದ್ದಕ್ಕೂ ಅನುಭವಿಸಿರುವ ನೋವಿನ ವಿರುದ್ಧದ ಪ್ರತೀಕಾರವಾಗಿದ್ದು, ಕವಯತ್ರಿಯ ಆಕ್ರೋಶ ಇಲ್ಲಿ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಂಡಿದೆ. ನವೋದಯ ಹೆಣ್ಣನ್ನು ತಾಯಿಯಾಗಿ ಕಂಡಿದ್ದರೆ, ನವ್ಯ ಭೋಗದ ವಸ್ತುವನ್ನಾಗಿ ಕಂಡಿತು. ಆದರೆ ಬಂಡಾಯ ಕಾವ್ಯ ಶೋಷಣೆಗೆ ಸಿಲುಕಿರುವ ಅಮಾಯಕಳೆಂದು ಭಾವಿಸಿ ಆಕೆಯ ಮೇಲಿನ ದೌರ್ಜನ್ಯದ ವಿರುದ್ಧ ದನಿ ಎತ್ತಿತ್ತು. ಈ ನಿಲುವನ್ನೇ ವ್ಯಕ್ತಪಡಿಸುವ ಸರ್ವಮಂಗಳಾ ಅವರ ರೋಷದ ಅಭಿವ್ಯಕ್ತಿಯ ಹಿಂದೆ ಶತಮಾನಗಳ ನೋವಿದೆ, ಪುರುಷ ವ್ಯವಸ್ಥೆಯನ್ನು ಖಾರವಾಗಿ ಪ್ರತಿಕ್ರಿಯಿಸುವ ಅವರ ಕಾವ್ಯ ಸ್ತ್ರೀ ಶೋಷಣೆಯ ಅಥೆಂಟಿಕ್‌ಗೆ ಸಾಕ್ಷಿಯಾಗಿದೆ. ಪುರುಷ ಶ್ರೇಷ್ಠತೆಯನ್ನು ಒಪ್ಪಿಕೊಂಡ ವೈದಿಕ ಸಂಸ್ಕೃತಿ ಮಹಿಳೆಯನ್ನು ಮನುಷ್ಯಳೆಂದು ಎಂದೂ ಕಂಡಿದ್ದಿಲ್ಲ. ಇದಕ್ಕೆ ಪರಂಪರೆಯ ಹಿನ್ನೆಲೆಯಲ್ಲಿ ಮೂಡಿಬಂದ ಕವಿತೆಗಳು, ಕೃತಿಗಳು ಸಾಕ್ಷಿಯಾಗಿವೆ. ಆದರೆ ಇಂದಿನ ಪರಿಸ್ಥಿತಿ ಸ್ವಲ್ಪ ಭಿನ್ನವಾಗಿದೆ. ಹಿಂದೆ ಗಂಡನ ಸಾವಿನೊಡನೆ ಚಿತೆಯೆರುವ ಪದ್ಧತಿ ಜಾರಿಯಲ್ಲಿದ್ದರೆ, ಇಂದೂ ಗಂಡನಿಂದಲೇ ಹೆಂಡತಿ ಚಿತೆಯಿರುವ ಪ್ರಸಂಗಗಳು ದಿನನಿತ್ಯ ಜರುಗುತ್ತಿವೆ. ಇದು ಸಮಕಾಲಿನ ಸಂದರ್ಭದ ದುರಂತವೆ ಸರಿ.

"ನನ್ನ ನಿನ್ನಗಳ ನಡುವೆ ತೋಡಿದ ಈ
ಗೋರಿಯಲ್ಲಿ ಸಮಾಧಿಯಾಗುತ್ತಿದ್ದೇನೆ
ನಿನ್ನುದಾಸೀನದ ತೀವ್ರ ವಿಷಾದಗಳ
ಕೆಂಡದುಂಡೆಗಳು ಇಡಿಯಾಗಿ ಸುಡು ಸುಡುವ
ಈ ನಿರ್ಭಾವ ಪ್ರೇಮ ಚಿತೆಯಲ್ಲಿ
ನಾ ನಿನ್ನ ಸತಿ ನೀ ಬದುಕಿದಾಗಲೇ
ನಿನ್ನೆದುರಿಗೆ, ಹೀಗೆ ಸತಿ ಹೋಗುತ್ತಿದ್ದೇನೆ."[೧೦೨]

---

[೧೦೧] ಅಮ್ಮನ ಗುಡ್ಡ–ಜ.ಸರ್ವಮಂಗಳ–ಪುಟ–೧೬
[೧೦೨] ಹೆಂಗ ಹೇಳಲಿ ಗೆಳತಿ–ಶಶಿಕಲಾ ವೀರಯ್ಯಸ್ವಾಮಿ–ಪುಟ–೩೮

ಬದುಕಿನ ಧಾರುಣ ಸತ್ಯವನ್ನು ಚಿತ್ರಿಸುವ 'ಸತಿ' ಕವನ ವಾಸ್ತವ ಸ್ಥಿತಿಯ ನೇರ ಅಭಿವ್ಯಕ್ತಿಯಾಗಿದೆ. ಶಶಿಕಲಾ ವೀರಯ್ಯಸ್ವಾಮಿಯವರು ಮಹಿಳೆಯ ಶೋಷಣೆಯನ್ನು ಸಾಮಾಜಿಕ ಸ್ತರದ ಮೇಲೆ ಅರ್ಥೈಯಿಸಿರುವ ರೀತಿ ತೀರ ಭಿನ್ನವಾಗಿದ್ದು ಬಹುಮುಖಿ ಚಿಂತನಗೆ ದಾರಿ ಮಾಡಿಕೊಡುತ್ತದೆ. ಹಿಂದೆ ಸಂಪ್ರದಾಯ ನಿಯಮ ಪದ್ಧತಿಗಳಿಂದ ನೊಂದು ಬೆಂದು ನಿತ್ಯ ಸಾಯುವ ಪರಸ್ಥಿತಿಗಳಿದ್ದವು. ಎಂಬುದನ್ನು ಈ ಕವಿತೆ ಧ್ವನಿಸುತ್ತದೆ. ಜತೆಗೆ ಸಮಕಾಲಿನ ವೈರುಧ್ಯಗಳ ಮೇಲು ಬೆಳಕು ಚೆಲ್ಲುತ್ತದೆ.

### ೫.೭ ಬಂಡಾಯ ಕವಿತೆಗಳಲ್ಲಿ ಮುಸ್ಲಿಂ ಮಹಿಳಾ ಸಂವೇದನೆ :

ಮುಸ್ಲಿಂ ಸಂವೇದನೆ ಎನ್ನುವುದು ಆ ಧರ್ಮ ಜನಾಂಗದ ಕುರಿತು ಸಮಗ್ರ ಪರಿಕಲ್ಪನೆ ಮೂಡಿಸುವುದಾಗಿದೆ. ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಪಾತ್ರಗಳು ಅಲ್ಲೊಂದು ಇಲ್ಲೊಂದು ಕಾಣಿಸಿಕೊಂಡಿವೆ. ಅವುಗಳು ಜಟಕಾ ಸಾಬಿಯೋ, ವೇಶ್ಯಯೋ, ಮೀನು ಮಾರುವವನೋ ಆಗಿ ಮಾತ್ರ ಅವುಗಳನ್ನು ಹೊರತು ಪಡಿಸಿದರೆ ಸಾಮಾನ್ಯ ಮುಸ್ಲಿಂ ಸಮಾಜದ ನೈಜ ಚಿತ್ರಣ ಕನ್ನಡ ಸಾಹಿತ್ಯದಲ್ಲಿ ಮೂಡಿ ಬರಲೇ ಇಲ್ಲ. ಆದ್ದರಿಂದ ಈ ಧರ್ಮದ ಸಮಾಜದ ರೀತಿ ನೀತಿಗಳು ಕನ್ನಡ ಕಾವ್ಯದಿಂದ ಅಗೋಚರವಾಗಿದ್ದ ಗುರುತರವಾದ ಕಾರ್ಯವನ್ನು ನಿರ್ವಹಿಸಿದ್ದು, ಬಂಡಾಯ ಕಾವ್ಯ ಎಂಬ ಮಾತು ತುಂಬಾ ದಿಟವಾದುದ್ದು. ಕನ್ನಡ ಕಾವ್ಯದಲ್ಲಿ ಮುಸ್ಲಿಂ ಸಂವೇದನೆ ಬಿಚ್ಚಿ ಕೊಳ್ಳುವುದೇ ಶಿಶುನಾಳ ಷರೀಫನಂತಹ ತತ್ವಪದಕಾರರಿಂದ. ತತ್ವಪದಗಳ ಮೂಲಕ ಸಮಾಜ ವಿಮರ್ಶೆಗೆ ತೊಡಗಿದ ಶರೀಫರು ತಮ್ಮ ಅದ್ಭುತ ಅನುಭವ ಲೋಕವನ್ನು ತೆರೆದಿಡುತ್ತಾರೆ. ಹಿಂದೂ ಮತ್ತು ಮುಸ್ಲಿಂ ಎರಡು ಸಂಸ್ಕೃತಿಗಳ ಸಮನ್ವಯವನ್ನು ಸಾಧಿಸಿರುವ ಅವರ ತತ್ವಪದಗಳಲ್ಲಿ ಸಮಾಜ ವಿಡಂಬನೆಯೊಂದಿಗೆ ಅವ್ಯವಸ್ಥಿತ ಪರಂಪರೆಯ ಕುರಿತ ವಿರೋಧ ಕಂಡು ಬರುತ್ತದೆ. ಚೆನ್ನೂರ ಜಲಾಲಸಾಬರು ಕೂಡ ಶರೀಫರ ಮಾರ್ಗವನ್ನೇ ಅನುಸರಿಸಿದರು. ಹೀಗೆ ಮುಸ್ಲಿಂ ತತ್ವಪದಕಾರರಿಗೆ ಆಧ್ಯಾತ್ಮಿಕತೆಯ ಅರಿವು ಕೂಡ ಇರುವುದರಿಂದ ಭಕ್ತಿ ಪ್ರಮುಖ ಪಾತ್ರವಹಿಸುತ್ತದೆ. ಆದ್ದರಿಂದ ತಮ್ಮ ಧರ್ಮದ ಎಲ್ಲಾ ಮಗ್ಗಲುಗಳು ಪರಿಚಯ ಮಾಡಿಕೊಡುವ ಕಷ್ಟ ಯಾವುದೇ ಮುಸ್ಲಿಂ ತತ್ವಪದಕಾರರು ತೆಗೆದುಕೊಂಡಿಲ್ಲ.

ಹೀಗಾಗಿ ಬಂಡಾಯ ಸಾಹಿತ್ಯದ ಮೂಲಕ ಪರಿಚಯಿಸಿಕೊಂಡ ಲೇಖಕರು ತಮ್ಮ ಧರ್ಮ, ಸಂಸ್ಕೃತಿಯಿಂದ ಅನುಭವಿಸುತ್ತಿರುವ ಕಹಿ ಅನುಭವವನ್ನು ಕಾವ್ಯದ ಮೂಲಕ

ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ರಂಜಾನ ದರ್ಗಾ, ಡಿ.ಜಿ.ರಜಿಯಾ, ಕೆ.ಷರೀಫಾರಂತಹ ಕವಿಗಳು ತಮ್ಮ ಸಮುದಾಯದ ವೈರುಧ್ಯಗಳನ್ನು ಚಿತ್ರಿಸುವುದರೊಂದಿಗೆ ಶತಮಾನಗಳಿಂದ ಅನುಭವಿಸುತ್ತ ಬಂದಿರುವ ನೋವನ್ನು ಹೊರ ಹಾಕಿದ್ದಾರೆ. ಈ ವ್ಯವಸ್ಥೆಯಲ್ಲಿಯ ಅನಾಗರಿಕ ಚಟುವಟಿಕೆಗಳನ್ನು ಖಂಡಿಸುವ ದರ್ಗಾರವರ ಧೋರಣೆ ಪ್ರತಿಭಟನೆಯನ್ನೇ ಸೂಚಿಸುತ್ತದೆ. ಅವರ 'ಬುರ್ಖಾ'ಗಳು ಸಮಕಾಲೀನ ವಿಷಮ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುವಂತಹ ಕವನವಾಗಿದ್ದು, ಬುರ್ಖಾಗಳ ಮಧ್ಯೆ ಹೆಣ್ಣು ಅನುಭವಿಸುವ ಸಂಕಟವನ್ನು ಪ್ರಸ್ತುತ ಕವಿತೆ ಕಟ್ಟಿಕೊಡುತ್ತದೆ.

"ಅಲ್ಲಲ್ಲಿ
ಜನ ಜಂಗುಳಿಯಲ್ಲಿ
..............................................
..............................................
ಕಪ್ಪು ಬುರ್ಖಾಗಳು–ಪ್ರತಿಭಟನೆಯಲ್ಲಿ
ಕೆಂಪು ಬುರ್ಖಾಗಳು ಕ್ರಾಂತಿಯಲ್ಲಿ
ಹಸಿರು ಬುರ್ಖಾಗಳು – ದಾರಿ ಸುಗಮವಿಲ್ಲ
ಹೀಗೆ ಹೀಗೇ ಸಾಗುತ್ತಲೇ ಇವೆ
ಬೇಸರವಿಲ್ಲದೆ–ಬೇಸರ ತೋರಿಸದೆ
ನೋವಿನಲ್ಲೂ ನಗುತ್ತ ಅದಕ್ಕೆ ಹೊಂದಿಕೊಳ್ಳುತ್ತ."[೧೦೩]

ಪುರುಷ ಪ್ರಧಾನ ಈ ಸಮಾಜದಲ್ಲಿ ಮಹಿಳೆ ಬುರ್ಖಾಗಳ ಅಡಿಯಲ್ಲಿ ಯಾವುದೇ ಪ್ರತಿರೋಧ ತೋರದೆ ಸಂಪ್ರದಾಯಕ್ಕೆ ಶರಣಾಗಿರುವ ಸ್ಥಿತಿ ಧ್ವನಿಸುತ್ತದೆ. ಅಸಹಾಯಕಳಾದ ಸ್ತ್ರೀ ಪರಂಪರೆ ಹೇರಿದ ಆಚರಣೆ ನಂಬಿಕೆಗಳನ್ನೇ ಸ್ಥೂಲವಾಗಿ ರೂಢಿಸಿಕೊಂಡಿರುವಲ್ಲಿ ವ್ಯವಸ್ಥೆಯ ಕ್ರೌರ್ಯ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಅದಕ್ಕಾಗಿ ಬುರ್ಖಾದೊಳಗಿನ ಧ್ವನಿ ಯಾವುದೇ ವಿರೋಧ ತೋರಿಸದಿದ್ದಾಗ ದರ್ಗಾ ತಮ್ಮ ಈ ಕವನದ ಸಾಲುಗಳ ಮೂಲಕ ಪ್ರತಿಭಟನೆಯ ಕಿಡಿ ಸಿಡಿಸಿದ್ದಾರೆ. ಇದು ಒಬ್ಬ ಮಾನವೀಯ ಅಂತಃ ಕರಣವುಳ್ಳ ಕವಿ ತೋರುವ ಸಮಾಜದೊಂದಿಗೆ ಪ್ರಕ್ರಿಯೆಯಾಗಿದೆ. ಮುಸ್ಲಿಂ ಸಮುದಾಯದ ಮಹಿಳೆಯರ ಸ್ವತಂತ್ರ್ಯತೆಗೆ ಬೆನ್ನೆಲುಬಾಗಿದೆ.

ಮುಸ್ಲಿಂ ಮಹಿಳೆಯರು ತಮ್ಮ ಸಂಪ್ರದಾಯದ ಅನೈತಿಕ ಚಟುವಟಿಕೆಗಳಿಗೆ ಸಿಲುಕಿ ಕಷ್ಟ ಅನುಭವಿಸುತ್ತಿರುವ ಸ್ಥಿತಿ ಬುರ್ಖಾಗಳ ಕವಿತೆಯ ಮೂಲಕ ಹೇಳಿದ್ದು ಗಮನಾರ್ಹ. ರಂಜಾನ

೧೦೩ ಕಾವ್ಯ ಬಂತು ಬದಿಗೆ–ಡಾ.ರಂಜಾನ ದರ್ಗಾ–ಪುಟ–೨೮

ದರ್ಗಾ ತಮ್ಮ ಸಮುದಾಯದಲ್ಲಿರುವ ಅವೈಚಾರಿಕ ನಂಬುಗೆಗಳು, ಧರ್ಮದ ಹೆಸರಿನಲ್ಲಿ ನಡೆಯುವ ಕ್ರೂರ ಕೃತ್ಯಗಳು ಸ್ವತಃ ಕಂಡುಂಡವರು ಆದ್ದರಿಂದ ಅವರ ಭಾವನೆಗಳು ಅನುಭವದ ಪ್ರತಿ ಕ್ರಿಯೆಗಳಾಗಿರುವುದುರಿಂದ ಪ್ರಮಾಣಿಕ ವಾಸ್ತವಿಕ ಚಿತ್ರಣ ಎದ್ದು ಕಾಣುತ್ತದೆ.

ಸಾಮ್ರಾಜ್ಯ ಶಾಹಿ ಜಾಗತೀಕರಣದ ಆಕ್ರಮಣದಿಂದ ನಮ್ಮ ಪುರಾತನ ಸಂಸ್ಕೃತಿ ನಾಶವಾಗುತ್ತಿದೆ. ಎಂಬ ವಾದ ಸಾರ್ವತ್ರಿಕವಾಗಿ ಕೇಳಿ ಬರುತ್ತಿರುವಂತದ್ದು ಹಲವು ಶತಮಾನಗಳ ಚರಿತ್ರೆಯಿರುವ ಭಾರತೀಯ ಸಂಸ್ಕೃತಿ ಮನುಷ್ಯ ಸಮಾಜದ ಜೀವಂತಿಕೆಯನ್ನು ಎತ್ತಿ ಹಿಡಿಯುವಂತದ್ದು. ಅದು ನಶಿಸಿ ಹೋಗದಂತೆ ಕಾಪಾಡಿಕೊಳ್ಳುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ಆದರೆ ಸಂಸ್ಕೃತಿ, ಸಂಪ್ರದಾಯ ಎಂದೂ ಮನುಷ್ಯನ ಮುಕ್ತ ಬದುಕಿಗೆ ಕಂಟಕವಾಗಿರಬಾರದು. ಸಂಸ್ಕೃತಿ ಯಾವಾಗಲೂ ಹರಿಯುವ ನೀರಿನೊಂದಿಗೆ ಗುರುತಿಸಿಕೊಂಡಿರುವಂತದ್ದು. ಕಾಲ ಕಾಲಕ್ಕೆ ಮನೋಧರ್ಮಗಳಿಗೆ ತಕ್ಕಂತೆ ಪರಿವರ್ತನಾ ಶೀಲವಾಗಿರುತ್ತದೆ. ಹಾಗೇ ಸಂಪ್ರದಾಯ ಕೂಡ ಹಳೆಯ ಜಾಡನ್ನು ಬಿಟ್ಟು ವೈಜ್ಞಾನಿಕ ಮನೋಭಾವದೊಂದಿಗೆ ವಿನೂತನ ದಿಕ್ಕಿನೆಡೆಗೆ ಸಂಚರಿಸಿದರೆ ಅದಕ್ಕೊಂದು ಗೌರವಯುತ ಅರ್ಥವಿರುತ್ತದೆ. ಆದರೆ ಭಾರತದಲ್ಲಿ ಸಂಸ್ಕೃತಿ ಉಳಿಸಿಕೊಳ್ಳುವ ನೆಪದಲ್ಲಿ ಮೂಢ ಸಂಸ್ಕೃತಿಗೆ ಜೋತು ಬಿದ್ದಿರುವುದು ನಮ್ಮ ಅಜ್ಞಾನವಂತಿಕೆಯ ಕುರುಹು ಆಗಿದೆ. ಇಂಥ ಸಂಸ್ಕೃತಿಯ ಮೂಲಭೂತ-ತನಕ್ಕೆ ಒಳಗಾಗಿರುವ ಮುಸ್ಲಿಂ ಸಮುದಾಯವನ್ನು ಪರಿಚಯಿಸುವ ಆಶಯ ಕೆ. ಷರೀಫಾ ಅವರದು. ಇದುವರೆಗೆ 'ಬಿಡುಗಡೆಯ ಕವಿತೆಗಳು', 'ನೂರೇನಳ ಅಂತರಂಗ', 'ಪಾಂಚಾಲಿ', 'ಮುಮ್ತಾಜಳ ಮಹಲು', ಕೃತಿಗಳನ್ನು ಪ್ರಕಟಿಸಿರುವ ಷರೀಫಾ ರವರು ಮಹಿಳೆಯರ ತವಕ ತಲ್ಲಣಗಳನ್ನು ಅತ್ಯಂತ ಅರ್ಥವತ್ತಾಗಿ ಅಭಿವ್ಯಕ್ತಿಸಿದ್ದಾರೆ.

"ಇದು ಬುರ್ಖಾ
ಹಲವಾರು ಶತಮಾನಗಳಿಂದ
ನಾನು ಮರುಮಾತಿಲ್ಲದೆ
ಮೌನವಾಗಿ
ಹೊತ್ತು ಬಂದ ಬುರ್ಖಾ."[೧೦೪]

ಇಸ್ಲಾಂ ಸಂಸ್ಕೃತಿಯಲ್ಲಿ ಕಂಡು ಬರುವ ಬುರ್ಖಾ ಪದ್ಧತಿ ಮಹಿಳೆಯ ಸ್ವಾತಂತ್ರ್ಯಯುತ ಬದುಕಿಗೆ ಮಾರಕವಾಗಿರುವಂಥದ್ದು. ಈ ಪೋಷಾಕು ಪದ್ಧತಿಯ ವಿರುದ್ಧ ಲೇಖಕಿಯರ ದೊಡ್ಡ ಪ್ರತಿಭಟನೆಯೇ ಇದೆ. ಧರ್ಮದ ಕಟ್ಟಳೆಯಲ್ಲಿ ಶೋಷಿಸಲ್ಪಡುವ ಮಹಿಳೆ ಮುಕ್ತವಾಗಿ

---

[೧೦೪] ಬಿಡುಗಡೆಯ ಕವಿತೆಗಳು–ಲೇ.ಕೆ.ಷರೀಫಾ–ಪುಟ–೧೧

ಓಡಾಡುವಂತಿಲ್ಲ. ಸಾಮಾಜಿಕ ಅಧಿಕಾರವನ್ನು ಪಡೆದಿರುವ ಪುರುಷ ಸ್ತ್ರೀಯನ್ನು ಒಂದು ಸೀಮಿತ ವರ್ತುಲದಲ್ಲಿಯೇ ವ್ಯವಹರಿಸುವಂತೆ ಧಾರ್ಮಿಕ ಚೌಕಟ್ಟನ್ನು ರೂಪಿಸಿದ್ದಾನೆ. ಈ ಬದುಕಿನ ಸಂಕೀರ್ಣತೆಯಲ್ಲಿ ಜೀವಿಸಬೇಕಾದ ಅನಿವಾರ್ಯ ಪರಿಸ್ಥಿತಿ ಅವಳದು. ಇಂಥ ಅಮೌಲಿಕ ಸಂಸ್ಕೃತಿಯನ್ನು ವಿರೋಧಿಸುವ ಮಾನಸಿಕ ಸಿದ್ಧತೆ 'ಇವರೇ ನನ್ನವರು' ಕವಿತೆಯಲ್ಲಿ ವ್ಯಕ್ತವಾಗಿದೆ. ಈ ಬುರ್ಖಾ ಸುತ್ತ ಹೆಣೆಯಲ್ಪಟ್ಟ ಅನೇಕ ಕವಿತೆಗಳು ಸ್ತ್ರೀವಾದಿ ಮನೋಧರ್ಮವನ್ನೇ ಸೂಚಿಸುತ್ತವೆ. ಇವರದೇ 'ಬುರ್ಖಾ ಪ್ಯಾರ್‌ಡೈಸ್' ಕವಿತೆಯಲ್ಲಿ ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಬುರ್ಖಾ ಹೇಗೆ ವ್ಯಾಪಾರದ ಹಣ ಗಳಿಕೆಯ ವಸ್ತುವಾಗಿದೆ ಎಂಬುದರ ತಲಸ್ಪರ್ಶಿ ಚಿತ್ರಣ ಕಂಡು ಬರುತ್ತದೆ.

ಷರೀಫಾ ಅವರ ಕಾವ್ಯದಲ್ಲಿ ಪ್ರಧಾನವಾಗಿ ಗುರತಿಸಿಕೊಳ್ಳುವುದು ಸಾಮಾಜಿಕ ಮನೋಧರ್ಮ. ಸಮಾಜದಲ್ಲಿಯ ಹಲವು ವೈರುಧ್ಯಗಳಿಗೆ ಸ್ಪಂದಿಸುವ ಅವರು ಧರ್ಮ ಮತ್ತು ಸಂಸ್ಕೃತಿಯಲ್ಲಿಯ ಕ್ರೂರ ಸತ್ಯಗಳನ್ನು ಹೊರಗೆಡವಿದ್ದಾರೆ. ಸಾಮಾಜಿಕ ಪರಿಸರದಲ್ಲಿ ಸಾಂಸ್ಕೃತಿಕ ಬೇರುಗಳಿರುವುದರಿಂದ ಅದರ ಆಳವನ್ನು ಕೆದಕುವ ಯತ್ನವಿದೆ. ಅವರ 'ಮಮ್ತಾಜಳ ಮಹಲು' ಜಗತ್ಪ್ರಸಿದ್ಧವಾದ ತಾಜಮಹಲನ್ನು ಕುರಿತು ಬರೆದಿರುವಂತ ಪದ್ಯ. ಮೊಗಲ್ ದೊರೆ ಶಹಾಜಹಾನ ತನ್ನ ಹೆಂಡತಿಯ ಪ್ರೀತಿಯ ನೆನಪಿಗಾಗಿ ನಿರ್ಮಿಸಿದ ತಾಜ ಮಹಲು ಬಡವರು ಸಾಮಾನ್ಯರ ರಕ್ತ ಬೆವರಿನ ಮೇಲೆ ಕಲೆ ಎತ್ತಿರುವಂತಹದ್ದು. ಮತ್ತು ಅದರ ಹಿಂದೆ ಅನೇಕ ಅಸಹಾಯಕ ಮಹಿಳೆಯರ ನರಳುವಿಕೆಯ ಧ್ವನಿಯಿದೆ.

"ಸುಂದರ ತಾಜಮಹಲೇ
ನಿನ್ನ ಹಕೀಕತ್ತು ಏನೆಂದು
ಎಲ್ಲರಿಗೂ ಗೊತ್ತು
ನಿನ್ನ ಪ್ರೇಮ ಸ್ಮಾರಕದ
ಮುಸುಕಿನ ಮರೆಯಲ್ಲಿ
ತಲೆದಿಂಬಿನಲ್ಲಿ ಇಂಗಿಹೋದ ಕಂಬನಿಗಳೆಷ್ಟು?
ನಿಟ್ಟುಸಿರಿಟ್ಟ ಬೇಗಮಂ
ಉಕ್ಕಿದ ಹರೆಯ ಬಚ್ಚಿಡಲು
ಬಿಕ್ಕಿದ ಜನಾಂಗಗಳೆಷ್ಟೋ

ಇಲ್ಲಿ ಚರಿತ್ರೆಯ ಹಿಂದಿನ ಸತ್ಯವನ್ನು ಪರಿಚಯಿಸಲಾಗಿದೆ ತಮ್ಮ ಪ್ರೀತಿಯ ಉಡುಗೊರೆಯಾಗಿ ಕಟ್ಟಿಸಿದ ಭವ್ಯ ಈ ಮಹಲುಗಳ ಹಿಂದೆ ಅಸಹಾಯಕರ ಕಣ್ಣೀರಿದೆ.

ಮಹಿಳೆಯರ ನೋವಿದೆ. ಹೀಗೆ ಅಸಂಖ್ಯಾತ ಜನರ ದುಃಖದ ಸೇತುವೆ ಮೇಲೆ ನಿಂತಿರುವ ತಾಜ ಮಹಲನ್ನು ಕವಯಿತ್ರಿ.

ಅನೇಕ ಖೂನಿ ಹಕಿಕತುಗಳಿಂದ
ಸುತ್ತುವರೆದ ನಿನ್ನ ಬಾದಶಹನ
ತಾಜಮಹಲು ಪ್ರೀತಿಯ ಪ್ರತೀಕ
ಹೇಗಾದೀತು ಹೇಳು ಮುಮ್ತಾಜ."[೧೦೫]

ಎಂದು ಖಾರವಾಗಿ ಪ್ರಶ್ನಿಸುತ್ತಾರೆ. ರಾಜರುಗಳು ತಮ್ಮ ಪ್ರತಿಷ್ಠೆಗಾಗಿ ನಿರ್ಮಿಸಿದಂತಹ ಕಟ್ಟಡಗಳು ಪ್ರೀತಿಯ ಪ್ರತೀಕ ಹೇಗಾದವು ? ಎಂಬ ಷರೀಫಾ ಅವರ ಸವಾಲು ಇಡೀ ಚರಿತ್ರೆಯನ್ನು ವಿಮರ್ಶಿಸುವುದಾಗಿದೆ. ಅಲ್ಲದೆ ಇಂತಹ ಅಸಂಖ್ಯಾತ ಕಟ್ಟಡಗಳು ಅಮಾನವಿಯತೆಯ ತಾಣಗಳಾಗಿವೆ ಎಂದು ಸೂಚಿಸುತ್ತಾರೆ.

ಬಂಡಾಯ ಸಂದರ್ಭದ ಬಹುತೇಕ ಮಹಿಳಾ ಲೇಖಕಿಯರು ಸ್ತ್ರೀ ಪರ ನಿಲುವಿನ ಮನೋಧರ್ಮವನ್ನೇ ಕಾವ್ಯವನ್ನಾಗಿಸಿದ್ದಾರೆ. ಅಂಥವರಲ್ಲಿ ಕೆ.ಷರೀಫಾ ತಮ್ಮ ಕಾವ್ಯದ ಮೂಲಕ ಮುಸ್ಲಿಂ ಜಗತ್ತೊಂದನ್ನು ಅನಾವರಣ ಮಾಡುವ ಮೂಲಕ ಅಲ್ಲಿಯ ಜಾತಿ ಜನಾಂಗ ಧರ್ಮದಲ್ಲಿ ಹುಟ್ಟಿದರೂ ಶೋಷಣೆಯಿಂದ ಮುಕ್ತಳಲ್ಲ. ಅದರಲ್ಲೂ ಮುಸ್ಲಿಂ ಧರ್ಮದಲ್ಲಿ ಹೆಚ್ಚಿನ ನೋವನ್ನು ಅನುಭವಿಸುತ್ತಿರುವ ಮಹಿಳಾ ಸಮಾಜ ಉಸಿರುಗಟ್ಟುವ ವಾತಾವರಣದಲ್ಲಿ ಬದುಕುತ್ತಿದೆ. ಇಂಥದ್ದೇ ಮಹಿಳೆಯ ಕೊರಗಿನ ದನಿಯನ್ನು ಇಡೀ ಮುಸ್ಲಿಂ ಸಮುದಾಯವನ್ನು ಪ್ರತಿಕ್ರಿಯಿಸುವ ರೀತಿಯಲ್ಲಿ ಅಭಿವ್ಯಕ್ತಗೊಂಡಿದೆ.

ಮುಸ್ಲಿಂ ಸಂವೇದನೆಯ ಮೂಲಕ ಗಮನ ಸೆಳೆಯುವ ಇನ್ನೋರ್ವ ಕವಿ 'ನಿಸಾರ್ ಅಹ್ಮದ್', ಹೊಸದುರ್ಗ ಚರಿತ್ರೆ ಮತ್ತು ಮುಸ್ಲಿಂ ಜಗತ್ತನ್ನು ಕಟ್ಟಿಕೊಡುವ 'ಬುರ್ಖಾದ ಒಳಗೆ ಮತ್ತು ಹೊರಗೆ' ಕವನ ದುಷ್ಟರ ರಾಜ್ಯಾಡಳಿತ ಮಧ್ಯೆ ನಲುಗುವ ಬದುಕನ್ನು ಬಿಂಬಿಸುತ್ತದೆ.

---

[೧೦೫] ಮುಮ್ತಾಜಳ ಮಹಲು-ಲೇ.ಕೆ.ಷರೀಫಾ-ಪುಟ-೫

"ಬೂದಿ ಮುಚ್ಚಿದ ಕೆಂಡ
ಒಳಗೊಳಗೆ ಅತ್ತು ಸತ್ತ
ಅಡಾ ಬಿದ್ದ ಕನಸುಗಳ
ಶವ ಸಂಸ್ಕಾರಕ್ಕೆ
ಧರ್ಮ ಗ್ರಂಥದ ವಾಸನೆಯಲ್ಲೇ
ಬಂದೂಕಿನ ಬಾಯಿಯಲ್ಲಿ
ಹಾಡು ಹೇಳುವ ಮಿಂಡ."[೧೦೬]

ತಾಲಿಬಾನರ ಕ್ರೂರ ವ್ಯವಸ್ಥೆಯಲ್ಲಿ ಸಾಮಾನ್ಯರ ಕನಸುಗಳ ಸಂಸ್ಕಾರವಾಗುತ್ತಿರುವುದು. ಬಂದೂಕು, ಬಾಂಬಗಳ ಭಾಷೆಯಲ್ಲೆ ಆಡಳಿತ ವ್ಯವಹರಿಸುತ್ತಿರುವುದು ಪ್ರತಿ ಜೀವಿಯ ಬದುಕು ಬುರ್ಖಾದೊಳಗಿನ ಹೆಣ್ಣಿನ ಸ್ಥಿತಿಯಾಗಿದೆ. ಒಟ್ಟಾರೆ ಮೂಲಭೂತವಾದಿಗಳ ಕೈಯಲ್ಲಿ ಸಾಮಾನ್ಯರ ಬದುಕು ನರಕವಾಗಿರುವ ಪರಿಕಲ್ಪನೆ ಇಲ್ಲಿದೆ. ಜನಸಾಮಾನ್ಯರ, ಬಡವರ, ದಲಿತರ ಮತ್ತು ಮಹಿಳೆಯರ ನೋವುಗಳಿಗೆ ಸ್ಪಂದಿಸುವ ಆಸಕ್ತಿ ತೋರಿದ್ದು ಬಂಡಾಯ ಸಂದರ್ಭದ ಲೇಖಕರು. ಶೋಷಕ ವರ್ಗದ ವಿರುದ್ಧ ಬಂದು ಸಂಘಟಿತ ಶಕ್ತಿ ಹೋರಾಡಿದ್ದು ಕೂಡ ಅಂದಿನ ಮನೋಧರ್ಮ. ಈ ಬದ್ಧತೆಯಿಂದಲೇ ಬರೆದಿರುವಂತ ನಜೀರ ಚಂದಾವರಂತಹ ಬರಹಗಾರ ಅಮಾಯಕ, ದುರ್ಬಲರ, ಅಸಹಾಯಕ ಸಂಕಟಗಳಿಗೆ ಆಪ್ತವಾಗಿ ಸಂವಾದಿಸುತ್ತಾರೆ. ಮೀನುಗಾರ ಮಹಿಳೆಯ ದಿನ ನಿತ್ಯದ ಕಾಯಕವನ್ನು ಪರಿಚಯಿಸಿರುವ 'ಮತ್ಸ್ಯಕನ್ಯೆ ಬುಟ್ಟಿಯಲ್ಲಿ' ಕವಿತೆ ದುಡಿಮೆಯ ಬದುಕಿನ ತಾಪತ್ರಯವನ್ನು ಚಿತ್ರಿಸುತ್ತದೆ.

"ಮತ್ಸ್ಯ ಕನ್ಯೆ ರಾತ್ರಿ
ಕೊಳೆಯುವ ಕನಸುಗಳಲಿ
ಕನವರಿಸಿ ತುಂಬುತ್ತಾಳೆ
ಅದೇ ಸತ್ತ ದಿನಗಳ
ಬುಟ್ಟಿಯಲಿ"?[೧೦೭]

ಮೀನುಗಾರ ಬದುಕನ್ನು ಕಟ್ಟಿಕೊಡುವ ಈ ಮೇಲಿನ ಕವಿತೆ ಮೂಲತಃ ಭಾರತದ ದುಡಿಯುವ ಜನರ ಕರುಣಾಜನಕ ಸ್ಥಿತಿಯನ್ನು ಚಿತ್ರಿಸುತ್ತದೆ. ನಸುಕಿನಿಂದ ಮತ್ತೊಂದು ನಸುಕಿನವರೆಗೆ ನಡೆಯುವ ಮೀನು ಮಾರುವ ಮಹಿಳೆಯ ಕ್ರಿಯೆ ಅರ್ಥಪೂರ್ಣ ನೆಲೆಯಲ್ಲಿ ಮೂಡಿ ಬಂದಿರುವುದರೊಂದಿಗೆ ನಜೀರ ಚಂದಾವರರ ವಾಸ್ತವನುಭೂತಿಗೆ ಸಾಕ್ಷಿಯಾಗಿದೆ.

---

೧೦೬ ಕವಿತೆ-೧೯೯೬-ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು-ಪುಟ-೪೪

೧೦೭ ಬಂಡಾಯ ಕಾವ್ಯ-ಸಂ.ಬರಗೂರು ರಾಮಚಂದ್ರಪ್ಪ-ಪುಟ-೧೪೫

'ಮೌನ ನೆರಳಲ್ಲಿ' ಮತ್ತು 'ಅಮೀನಾಳ ಹೆಜ್ಜೆಗಳು' ಕವನ ಸಂಕಲನಗಳನ್ನು ಪ್ರಕಟಿಸಿರುವ ಹಮೀದ್ ಮಂಜೇಶ್ವರ ತಮ್ಮ ಧರ್ಮದಲ್ಲಿಯ ಕುರುಡ ನಂಬಿಕೆಗಳಿಗೆ ದನಿ ನೀಡುವ ಅವರು ಸಂಪ್ರದಾಯದ ಚೌಕಟ್ಟಿನಲ್ಲಿ ನಲುಗಿದ ಮಹಿಳೆಯ ಮನಸ್ಥಿತಿಯನ್ನು 'ಆಯಿಷಾ ಮತ್ತು ಬದುಕು' ಕವಿತೆಯಲ್ಲಿ ದಾಖಲಿಸಿದ್ದಾರೆ.

"ಚಿಕ್ಕಂದಿನಲ್ಲಿ ಕುಂಟಬಿಲ್ಲೆ ಆಡಿದ ಜತೆಗಾತಿಯರು
ಇಂದು ದೊಡ್ಡ ಪುಸ್ತಕದ ಜತೆ ಬಸ್ಸು ಹತ್ತುತ್ತಾರೆ
ಪೇಟೆಯ ಕಾಲೇಜಿಗೆ
ಆಯಿಷಾಳಿಗೂ ಆಸೆಯಿದೆ, ಹಳತಾಗುತ್ತಿದೆ
ಸೀರೆಯ ಬಣ್ಣದೊಂದಿಗೆ."[೧೦೮]

ಚಿಕ್ಕಂದಿನಿಂದಲೇ ಎಲ್ಲಾ ಗೆಳತಿಯರೊಡನೆ ಕೂಡಿ ಬೆಳೆದ ಆಯಿಷಾ ದೊಡ್ಡವಳಾದ ಮೇಲೆ ಅವರೊಡನೆ ಕಾಲೇಜಿಗೆ ಹೋಗಲಾರದ ನೋವು ಆಕೆಯಲ್ಲಿ ಮಡುಗಟ್ಟಿದೆ. ಎಲ್ಲರಂತೆ ಆಕೆಗೂ ಮುಕ್ತವಾಗಿ ಬೆರೆಯುವ ಹೆಚ್ಚಿನ ವಿದ್ಯಾಭ್ಯಾಸ ಕಲಿಯುವ ಆಸೆಯಿದೆ. ಆದರೆ ಧಾರ್ಮಿಕ ಮತ್ತು ಕೌಟುಂಬಿಕ ಚೌಕಟ್ಟು ನಿರ್ಮಿಸಿದ ಸೀಮಿತ ಆವರಣ, ಅದರಾಚೆ ಬರದ ಸ್ಥಿತಿ ಈ ಮೇಲಿನ ಪದ್ಯದಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ಮುಸ್ಲಿಂ ಯುವತಿಯ ತಳಮಳ ಎಲ್ಲರಂತೆ ಬದುಕುವ ಹಂಬಲ ಮತ್ತು ಎಲ್ಲವನ್ನು ಸಹಿಸಿಕೊಳ್ಳುವ ಅಸಹಾಯಕ ಪ್ರಜ್ಞೆ ಪರಿಣಾಮಕಾರಿಯಾಗಿ ತೆರೆದಿಡುವುದು ಈ ಕವಿತೆಯ ವಿಶೇಷವಾಗಿದೆ.

ಕನ್ನಡ ಕಾವ್ಯ ಪರಂಪರೆಯಲ್ಲಿ ಮುಸ್ಲಿಂ ಕವಿಗಳು ರಚಿಸಿದ್ದೆ ಅಪರೂಪ. ಅಂಥದರಲ್ಲಿ ಡಿ.ಬಿ. ರಜಿಯಾ ಅವರ ಕಾವ್ಯ ಪ್ರವೇಶ ಮಹತ್ವದ್ದೆನಿಸಿಕೊಳ್ಳುತ್ತದೆ. ಮುಸ್ಲಿಂ ಮೂಲದಿಂದ ಬಂದ ಕೆಲವು ಬಂಡಾಯ ಕವಿಗಳು ತಮ್ಮ ಸಮಾಜದೊಳಗಿನ ಕಂದಾಚಾರಗಳನ್ನು ಸ್ತ್ರೀ ಶೋಷಣೆಯ ವಿಚಾರಗಳನ್ನು ಪರಿಚಯಿಸುವ ಯತ್ನ ಮಾಡಿದ್ದಾರೆ. ಆದರೆ ಡಿ.ಬಿ.ರಜಿಯಾ ಅವರ ಕಾವ್ಯ ಮುಸ್ಲಿಂ ಸಂಸ್ಕೃತಿಯಿಂದ ಹುಟ್ಟಿಕೊಂಡರೂ ಕೂಡ ಮುಸ್ಲಿಂ ಸಂವೇದನೆಗಳಾಗಿ ರೂಪಗೊಂಡಿಲ್ಲ. ಕವಿ ಮನಸ್ಸಿಗೆ ನಿಲುಕುವ ಎಲ್ಲವನ್ನು ಕಾವ್ಯವಾಗಿಸಿದ್ದಾರೆ. ಸಾಮಾಜಿಕ ಪರಿಸರವನ್ನು ಕಟ್ಟಿ ಕೊಡುವ ಅವರ ಕವಿತೆಗಳು ಮಧುರ ಭಾವನೆ ಉಕ್ಕಿಸುವ ಭಾವಗೀತವಾಗಿವೆ ಹೊರತು, ಅವು ಯಾವುದೇ ಮತ ಧರ್ಮಕ್ಕೆ ಅಂಟಿಕೊಳ್ಳುವ ಮನೋಭೂಮಿಕೆಗೆ ಪಡೆದಿಲ್ಲ. ಕಾವ್ಯಾಭಿವ್ಯಕ್ತಿಯ

[೧೦೮] ಮೌನದ ನೆರಳಲ್ಲಿ ಲೇ: ಹಮೀದ ಮಂಜೇಶ್ವರ -ಪುಟ-೧೫

ಸೊಗಸುಗಾರಿಕೆಯನ್ನು ನೋಡಿದಾಗ ಅತಿ ಸುಂದರವಾಗಿ ಭಾವನೆಗಳ ಪೋಣಿಸುವಿಕೆಯ ಕಲೆ ಅವರಲ್ಲಿದೆ. 'ಕಣಜ' ಎಂಬ ಕವಿತೆಯ ಸಾಲುಗಳು ನೋಡಿದಾಗ

"ಮುಳ್ಳು ಬೇಲಿಯಲ್ಲಿ ಮೈ ತುರಿಸಿದಂತೆ
ನೋಯಿಸುತ್ತವೆ
ಕೆಲ ನೆನಪುಗಳು
ಮಲ್ಲಿಗೆ ವನದಲ್ಲಿ
ಅಡ್ಡಾಡುವಾಗ ತೂರಿ ಬರುವ
ಘಮ ಘಮ ವಾಸನೆಯಂತೆ
ಮನದಲ್ಲಿ ಹುಲುಸಾಗಿ
ನವಿರೇಳಿಸುತ್ತೇವೆ
ಮತ್ತೆ ಕೆಲ ನೆನಪುಗಳು."[೧೦೯]

ರಜಿಯಾ ಅವರ ಸಾಮರ್ಥ್ಯದ ಬಗ್ಗೆ ಬೇರೆ ಹೇಳಬೇಕಾಗಿಲ್ಲ. ಸಾವೆಂಬುದೇ ಇದರ ಈ ನೆನಪುಗಳು ತಂಗಾಳಿಯಂತೆ ಎಬ್ಬಿಸಿದರೆ, ಮತ್ತೊಮ್ಮೆ ಹಿತವಾಗಿ ಅಸ್ಪಷ್ಟವಾಗಿ ಕಾಣುತ್ತೇವೆ. ಸದಾ ಜೀವಂತಿಕೆಯಿಂದಿರುವ ನೆನಪುಗಳು ಮನಸ್ಸಿನ ಒಳ ಕಣಜದಲ್ಲಿ ಉಸಿರಾಡುತ್ತಲೇ ಇರುತ್ತವೆ.

ಮುಸ್ಲಿಂ ಮಹಿಳೆಯ ಭಾವನೆಗಳ ಅಭಿವ್ಯಕ್ತಿ ನೀಡುವ ಸೂಕ್ಷ್ಮ ಮನಸ್ಸಿನ ಕವಯತ್ರಿ ರಜಿಯಾ ಬಳಬಟ್ಟ 'ಮೆಹಂದಿ' ಎಂಬ ಸಂಕಲನದ ಮೂಲಕ ಕಾವ್ಯ ಕ್ಷೇತ್ರವನ್ನು ಪ್ರವೇಶಿಸಿರುವ ರಜಿಯಾ ಹೆಣ್ಣಿನ ಒಳತೋಟಿಗಳನ್ನು ದಾಖಲಿಸಿದ್ದಾರೆ. ಈ ಮೂಲಕ ಗಮನ ಸೆಳೆಯುವ ಮೆಹಂದಿ ಕವಿತೆಯಲ್ಲಿ ಗಂಡನ ಪ್ರೀತಿಯಿಂದ ವಂಚಿತಳಾದ ಹೆಣ್ಣಿನ ಅಳಲು ವ್ಯಕ್ತವಾಗಿದೆ.

"ನನ್ನ ಹಸ್ತದ ಮೆಹಂದಿ ಬಣ್ಣ
ಮಾಸುವಷ್ಟರಲ್ಲಿಯೇ ನಿನ್ನ ಪ್ರೀತಿ
ಹಳಿಸಿ ಹೋಗಿತ್ತು
ಯಾರಿಗೆ ಹೇಳಲಿ ?
ವ್ಯವಹಾರ ಪ್ರೀತಿಯಾಗುವುದಿಲ್ಲೆಂದು
ಮನಸ್ಸು ಕೂಡಿಸುವುದಿಲ್ಲವೆಂದು ."[೧೧೦]

ಇಲ್ಲಿ ಗಂಡು-ಹೆಣ್ಣಿನ ಸಂಬಂಧಗಳಲ್ಲಿ ಕಂಡು ಬರುವ ಮನಸ್ತಾಪವನ್ನು ವಿವರಿಸಲಾಗಿದೆ. ಹೀಗೆ ಸ್ತ್ರೀ ಬದುಕಿನಲ್ಲಿ ಕಾಣಿಸಿಕೊಳ್ಳುವ ಹಲವು ನೋವಿನ ಅನುಭವಗಳನ್ನು ರಜಿಯಾ ಅವರ

---

[೧೦೯] ಕಳೆದು ಹೋಗುತ್ತೇವೆ-ಲೆ.ಡಿ.ಜಿ. ರಜಿಯಾ-೫೬

[೧೧೦] ಮೆಹಂದಿ-ಲೇ. ರಜಿಯಾ ಬಳಬಟ್ಟ-ಪುಟ-೪೨

ಕಾವ್ಯದುದ್ದಕ್ಕೂ ಗುರುತಿಸಿಕೊಳ್ಳುತ್ತವೆ. ಮಹಿಳೆ ಹೆಜ್ಜೆ ಹೆಜ್ಜೆಗೂ ಹೋರಾಡುತ್ತಲೇ ಬದುಕಬೇಕಾದ ಪರಿಸ್ಥಿತಿ ಇದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ ಕಡೆಗಣ್ಣಿನಿಂದಲೇ ನೋಡುತ್ತ ಬಂದ ಆಕೆಯನ್ನು ಧೈರ್ಯ, ಉತ್ಸಾಹ ಸಂಕಲ್ಪದ ಮೂರ್ತಿಯಾಗಿ ಕೆತ್ತುವ ಹೊಣೆ ಬಂಡಾಯ ಕವಿಗಳ ಹೆಗಲ ಮೇಲಿದೆ. ಈ ಹಿನ್ನೆಲೆಯಲ್ಲಿಯೇ ಬಂಡಾಯ ಕಾವ್ಯದಲ್ಲಿ ಅಭಿವ್ಯಕ್ತವಾಗುವ ನೋವಿನ ಅನುಭವ ಅಲ್ಲಿ ಕೇಳಿ ಬರುವ ವಿಶಿಷ್ಟ ದನಿ ಸ್ವಂತದ ಸೊತ್ತಾಗಿರುತ್ತದೆ.

ಸಹನೆಯ ಮೂರ್ತಿಯನ್ನಾಗಿ ಕಾಡುತ್ತ ಬಂದ ಪುರುಷ ಶಾಹಿ ವರ್ಗದ ವಿರುದ್ಧ ಪ್ರತಿಬಟಿಸುವ ಧೈರ್ಯ ಮಹಿಳೆ ಪಡೆದಿದ್ದಾಳೆ. ಕಾಲಮಾನಗಳುದ್ದಕ್ಕೂ ತಗ್ಗಿ ಬಗ್ಗಿ ನಡೆದ ಮತ್ತು ವ್ಯವಸ್ಥೆಯ ಎಲ್ಲಾ ಆಕ್ರಮಣಗಳನ್ನು ಸಹಿಸಿಕೊಂಡ ಮಹಿಳೆ ಇಂದು ಪ್ರಶ್ನಿಸುತ್ತಿದ್ದಾಳೆ.

ಇಲ್ಲಿ ಮಹಿಳೆಯ ಅಭಿವ್ಯಕ್ತಿ ಬೆಂಕಿಕೊಂಡದಿಂದ ಮೇಲೆದ್ದು ಸಮಾಜಕ್ಕೆ ತೀಕ್ಷಣ ಪ್ರತಿಕ್ರಿಯೆ ನೀಡಿರುವಂತದ್ದು. ಹೀಗೆ ಹೆಣ್ಣು ಮನಸ್ಸಿನ ಭಾವನೆಗಳಿಗೆ ಒತ್ತು ನೀಡುವ ಷರೀಫಾ ಅವರ ಕವಿತೆಗಳಲ್ಲಿ ಒಂದು ಬಗೆಯ ಬಂಡಾಯದ ತುಡಿತವನ್ನು ಗುರುತಿಸಬಹುದಾಗಿದೆ.

ಬಂಡಾಯ ಲೇಖಕಿಯರು ಬರೆಯಲು ಪ್ರಾರಂಭಿಸಿದ ಮೂಲ ಉದ್ದೇಶ ತಮ್ಮ ಅಸ್ತಿತ್ವದ ಹುಡುಕಾಟಕ್ಕಾಗಿ ಮತ್ತು ತಮ್ಮೆದುರಿನ ವಿಷಮ ಸ್ಥಿತಿಯನ್ನು ಪ್ರಶ್ನೆ ಮಾಡುವ ಹಟಕ್ಕಾಗಿ. ಏಕೆಂದರೆ ಇಡೀ ಸ್ತ್ರೀ ಕುಲವನ್ನು ಪ್ರತಿನಿಧಿಸುವ ಮಹಿಳಾ ಕಾವ್ಯ ಹೆಜ್ಜೆ ಹೆಜ್ಜೆಗೂ ಹೆಣ್ಣಿನ ಬಗ್ಗೆ ಕಾಳಜಿ ಮತ್ತು ಎಚ್ಚರಿಕೆ ವಹಿಸಿದ್ದು ಈ ಅರ್ಥದಿಂದಲೇ ಎಂಬುದನ್ನು ಸ್ಪಷ್ಟವಾಗಿ ಗೋಚರಿಸುತ್ತದೆ. ಅಷ್ಟರ ಮಟ್ಟಿಗೆ ಷರೀಫಾ ಅವರ ಕಾವ್ಯ ಮಹಿಳಾ ಜಗತ್ತಿನ ಕುರಿತು ತನ್ನ ನಿಲುವು ಪ್ರಕಟಿಸಿದೆ. ಅವರ ನರಳುತ್ತಿರುವ ಅಸ್ತಿತ್ವ ಹೆಣ್ಣಿನ ಅಸ್ತಿತ್ವದ ಬಗ್ಗೆ ಮಾತನಾಡುವ ಕವಿತೆ ದೀಪದಡಿಯ ಕತ್ತಲು ಮುಸುಕಿನಲಿ ಸಿಕ್ಕು ನರಳುತಿದೆ. ಅಸ್ತಿತ್ವ ಎಂಬ ನೋವಿನ ಮಾತುಗಳು ಮಹಿಳೆಯ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತವೆ. ಪ್ರತಿಯೊಂದಕ್ಕೂ ಪುರುಷನನ್ನೇ ಕೇಂದ್ರಿಕರಿಸುವ ಸಮಾಜದಲ್ಲಿ ಮಹಿಳೆಯ ದುಡಿತ ತ್ಯಾಗ, ಪರಿಶ್ರಮ ಎಲ್ಲವೂ ಗೌಣ ಅದಕ್ಕಾಗಿಯೇ ತನ್ನ ತನವನ್ನು ಕಂಡು ಕೊಳ್ಳುವ ನಿಟ್ಟಿನಲ್ಲಿ ಆಕೆಯ ಹುಡುಕಾಟ ನಿರಂತರವಾಗಿ ಮುಂದುವರೆದಿದೆ.

ಮಹಿಳೆಯ ಮೇಲೆ ನಿರಂತರವಾಗಿ ನಡೆದಿರುವ ಶೋಷಣೆ ಹಲ್ಲೆಗಳು ಮೂಲತಃ ಪುರುಷರಿಂದ ನಡೆದಿರುವುದು ಮಹಿಳೆಯ ಮೇಲಿನ ಎಲ್ಲಾ ಹಿಂಸೆಗಳಿಗೆ ಪುರುಷ ರೂಪಿತ ಸಮಾಜವೇ ಕಾರಣ. ಹೀಗಾಗಿ ಈ ವ್ಯವಸ್ಥೆಯಿಂದ ಪಾರು ಮಾಡಲು ಮತ್ತು ಅವಳನ್ನು

ಮನುಷ್ಯರಂತೆ ಕಾಣಲು ಸಮಾಜ ಮಾನವೀಯತೆಯ ಗುಣವನ್ನು ಹೊಂದಬೇಕೆಂಬ ಆಶಯ ಇಲ್ಲಿಯದಾಗಿದೆ. ಈ ಹಿನ್ನೆಲೆಯಲ್ಲಿಯೇ ಗಮನ ಸೆಳೆಯುವ ನೂರೇನಳ ಅಂತರಂಗದಲ್ಲಿ ಭಾರತದ ಕ್ರಿಕೇಟಿಗ ಅಜರುದ್ದೀನ್‌ನ ವಿಚ್ಛೇದಿತ ಹೆಂಡತಿಯ ಅಳಲು ಬಿಂಬಸಲ್ಪಟ್ಟಿದೆ.

> "ಅಲ್ಲಾಹ್‌ನಿಗೆ ಸಲ್ಲಿಸಿದ
> ವ್ಯರ್ಥ ಪ್ರಾರ್ಥನೆಗಳು
> ರೆಕ್ಕೆ ಮುರಿದ ಹಕ್ಕಿಯಂತೆ
> ಚಾರಮೀನಾರದ ಚೌಕದಲಿ
> ಮೀನಾರುಗಳನು ದಿಟ್ಟಿಸುತ್ತಾ
> ಗೋಳಿಟ್ಟು ನೂರೇನ್ನಳು."[೧೯೧]

ಮುಸ್ಲಿಂ ಧರ್ಮದಲ್ಲಿ ಸಹಜವಾಗಿ ಕಾಣುವ ತಲ್ಲಾಖ್‌ನಂತಹ ಪದ್ಧತಿ ಮಹಿಳೆಯ ಜೀವನದಲ್ಲಿ ಬಿರುಗಾಳಿಯನ್ನೇ ಎಬ್ಬಿಸುತ್ತದೆ. ಹಲವಾರು ವರ್ಷಗಳು ಕೂಡಿ ಬಾಳಿದ ದಾಂಪತ್ಯ ಜೀವನ ಕ್ಷಣಾರ್ಧದಲ್ಲಿ ಮುರಿದು ಬೀಳುವುದು ಈ ತಲ್ಲಾಖ್‌ನಂತಹ ರೂಢಿಗತ ಸಂಪ್ರದಾಯದಿಂದ, ಇಂಥ ಅನೇಕ ಮುಸ್ಲಿಂ ಸಂಸ್ಕೃತಿಯ ವಿಕೃತ ನಂಬುಗೆಗಳು ಬಯಲು ಗೊಂಡಿದ್ದು ಮುಸ್ಲಿಂ ಸಮುದಾಯದಿಂದ ಬಂದಂಥ ಲೇಖಕಿಯರ ಅಭಿವ್ಯಕ್ತಿಯಲ್ಲಿ.

ಭಾರತೀಯ ಸಮಾಜದಲ್ಲಿ ಪುರುಷನ ಆಸ್ತಿಯಾಗಿರುವ ಹೆಣ್ಣು ಹೆಚ್ಚಾಗಿ ಕಾಣಿಸಿಕೊಳ್ಳುವುದು ಭೋಗದ ವಸ್ತುವಾಗಿ. ಭೋಗಿಸುವುದಕ್ಕಾಗಿಯೇ ಹೆಣ್ಣಿದೇ ಎನ್ನುವಷ್ಟರ ಮಟ್ಟಿಗೆ ಕಾಮದ ವಸ್ತುವನ್ನಾಗಿ ಬಳಸಿಕೊಳ್ಳಲಾಗಿದೆ. ಇತಿಹಾಸದುದ್ದಕ್ಕೂ ಕಲೆ, ಸಾಹಿತ್ಯ, ಸಂಸ್ಕೃತಿಗಳು ಅವಳ ಬಾಹ್ಯ ಸೌಂದರ್ಯಕ್ಕೆ ಮೀಸಲಾದಂತೆ ಹೆಣ್ಣಿನ ಅಂಗಾಂಗಗಳ ವರ್ಣನೆ ಮಾಡಿವೆ. ವರ್ತಮಾನದ ಆಧುನಿಕ ಜಗತ್ತು ಕೂಡ ಮಹಿಳೆಯನ್ನು ವ್ಯವಹಾರದ ವಸ್ತುವನ್ನಾಗಿಯೇ ಕಂಡಿದೆ. ಜಾಹಿರಾತುಗಳಲ್ಲಿ ವ್ಯಾಪಾರದ ಸರಕನ್ನಾಗಿಸಿ ಆಕೆಯ ಅರೆನಗ್ನ ದೇಹವನ್ನು ಪ್ರದರ್ಶಿಸುತ್ತಿವೆ. ಒಟ್ಟಿನಲ್ಲಿ ಹೆಣ್ಣು ಶತಮಾನಗಳಿಂದಲೂ ಹಲವು ರೀತಿಯ ದಬ್ಬಾಳಿಕೆಗಳನ್ನು ಸಹಿಸುತ್ತಲೇ ಬಂದಿದ್ದಾಳೆ. ಆದರೆ ಇಂದು ತನ್ನ ಅಸ್ತಿತ್ವದ ಮೇಲೆ ಬೆಳೆಯಬೇಕೆಂಬ ಹಂಬಲ ಅದಮ್ಯವಾಗಿದೆ. ಇಲ್ಲಿಯವರೆಗೆ ಸಹಿಸುತ್ತ ಬಂದ ತನ್ನ ಮೇಲಿನ ಎಲ್ಲಾ ಹಿಂಸೆಗಳನ್ನು ಮೆಟ್ಟಿ ವ್ಯವಸ್ಥೆಯ ವಿರುದ್ಧ ನಿಲ್ಲುವ ಧೈರ್ಯ ತಂದು ಕೊಂಡಿದ್ದಾಳೆ.

---

[೧೯೧] ನೂರೇನಳ ಅಂತರಂಗ – ಲೇ.ಕೆ.ಷರೀಫಾ–ಪುಟ–೧೨

## ೫.೮ ಬಂಡಾಯ ಲೇಖಕರ ಕವಿತೆಗಳಲ್ಲಿ ಮಹಿಳೆ :

ಬಂಡಾಯ ಸಂದರ್ಭ ಬಂದಾಗ ಕಾವ್ಯಗಳು ನವೋದಯ ನವ್ಯ, ಪ್ರಗತಿಶೀಲ ಘಟ್ಟದಂತೆ ಹೆಣ್ಣನ್ನು ನೋಡಿ ಆ ಚಲುವಿಕೆಯನ್ನು ವರ್ಣಿಸುವುದು ಯಾವುದೋ ಒಂದು ಹೂ ಚಂದ್ರ ತಾರೆಯನ್ನು ಕುರಿತು ಬರೆದಂತೆಹವುಗಳಾಗಿದ್ದವು.ಹೀಗಾಗಿ  ಹಕ್ಕಿಗಳೂ ಕವಿತೆಗಳಲ್ಲಿ ಬಂದವು.

ಉದಾ :

"ಕರಿನರೆ ಬಣ್ಣದ ಪುಚ್ಚಗಳುಂಟು
ಬಿಳಿ–ಹೊಳೆ ಬಣ್ಣದ ಗರಿ–ಗರಿಯುಂಟು
ಕೆನ್ನನ ಹೊನ್ನನ ಬಣ್ಣ–ಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿ ಹಾಡುತಿದೆ ನೋಡಿದಿರಾ ?"[೧೧೨]

ಕವಿತೆಗಳು ಎಂದರೇ ಕೇವಲ ಮನೋರಂಜನೆಗೆ ಎಂದು ರೂಪಗೊಂಡಿದ್ದವು. ಹಾಗಾಗಿ ಆ ಸಂದರ್ಭದಲ್ಲಿಯ ಕಾವ್ಯಗಳು ಜನ ಜೀವನಕ್ಕೆ ಯಾವುದೇ ರೀತಿಯ ಸಂಬಂಧವನ್ನು ಹೊಂದಿರಲಿಲ್ಲ. ರಮ್ಯತೆ, ರೋಮ್ಯಾಂಟಿಕ್ ಇವುಗಳಲ್ಲಿ ತೇಲಿ ಹೋಗಿದ್ದವು. ಆದರೆ ಬಂಡಾಯ ಸಾಹಿತ್ಯವು ವ್ಯಕ್ತಿಗೌರವ ಪ್ರಜಾಪ್ರಭುತ್ವವಾದಿ ನೆಲೆ, ಎಡಪಂಥಿಯ ಆಲೋಚನೆಯನ್ನು ಮುಖ್ಯ ನೆಲೆಯಾಗಿ ಶೋಧಿಸುವ ಈ ಬಂಡಾಯ ಸಾಹಿತ್ಯ ಮುಖ್ಯವಾದ ಸಂವೇದನೆಗಳನ್ನು ಹುಟ್ಟು ಹಾಕಿದೆ ಅವುಗಳೆಂದರೆ.

೧) ದಲಿತ ಸಂವೇದನೆ

೨) ಸ್ತ್ರೀ ಸಂವೇದನೆ

೩) ಮುಸ್ಲಿಂ ಸಂವೇದನೆ

ಇವುಗಳ ಜೊತೆಗೆ ಬದುಕಿನ ಅಸಮಾನತೆಗಳಾದ ಜಾತಿ, ಅಸ್ಪೃಶ್ಯತೆ, ಧರ್ಮ, ಪ್ರಭುತ್ವ, ಲಿಂಗ ಭೇದಗಳನ್ನು, ವರ್ಗ ಸಂಘರ್ಷಗಳನ್ನೇ ಕುರಿತು ತನ್ನ ಬದುಕಿನ ಇರುವಿಕೆ ಮತ್ತು ಪ್ರತಿಭಟನೆಯನ್ನು ಏಕಕಾಲಕ್ಕೆ ಪ್ರತಿಭಟಿಸುತ್ತದೆ. ಹಾಗಾಗಿ ಸಮಾಜದಲ್ಲಿ ಅನ್ಯಾಯ, ಶೋಷಣೆ ದಬ್ಬಾಳಿಕೆಗಳು ಹೆಚ್ಚಾದಾಗ ಇವುಗಳಿಂದ ಬೇಸತ್ತು ಸಾಹಿತ್ಯದ ಮೂಲಕ ಜನರಿಗೆ ಈ ಹೋರಾಟ ತಲುಪಬೇಕೆಂದು  ಇವೆಲ್ಲವುಗಳನ್ನು ಹತ್ತಿಕ್ಕಲು ಕಾವ್ಯವನ್ನು ಖಡ್ಗವನ್ನಾಗಿಸಬೇಕೆನ್ನುವುದಾಗಿತ್ತು. ಅದಕ್ಕಾಗಿ ಬಸವರಾಜ ಸಬರದರು ಕಾವ್ಯವನ್ನು ಕುರಿತು.

---

೧೧೨ ಆಯ್ದ ಹೊಸಗನ್ನಡ ಕವಿತೆಗಳು–ಸಂ.ಡಾ.ಡಿ.ಜಿ.ನಾಯಕ–ಪುಟ–೯

"ಯೌವ್ವನದ ವಿಕೃತ ಭ್ರಮೆಗಳಿಗೆ
ಹಾಸಿಗೆ ಹಾಸಿ
ರತಿ ಸುಖವ ಸ್ಮರಿಸುವರು
ಇನ್ನು ಬೇಡ
ಹಗಲಿರುಳು ದುಡಿದ
ನೊಂದ ರೈತರ ದನಿಯಾಗಿ."[೧೧೩]

ರತಿ ಸುಖ ಸಲ್ಲಾಪ ಇವೆಲ್ಲ ಬಿಟ್ಟು ಕೇವಲ ನೊಂದವರ ಕುರಿತು ಕಾವ್ಯ ಬರೆಯೋಣ ಎನ್ನುತ್ತಾರೆ. ಶ್ರಮಿಕ ವರ್ಗದ ಪರವಾಗಿ ತುಡಿಯೋಣ ಎಂದು ಧ್ವನಿಸುತ್ತಾರೆ. ಹಾಗಾಗಿ ಬಂಡಾಯ ಸಾಹಿತ್ಯ ಪುರುಷ ಬರಹಗಾರರಾಗಲಿ, ಕವಯತ್ರಿಯರಾಗಲಿ ಕವಿತೆಗಳನ್ನು ಬರೆದರು. ಅವುಗಳು ದ್ವೇಷದ ವಿರುದ್ಧ ಪ್ರತಿಭಟನೆ, ನೋವು, ತುಮುಲಗಳ ಕುರಿತೇ ಬರೆದರು. ಹಾಗಾಗಿ ಸ್ತ್ರೀಯ ಸಂವೇದನೆಗಳು ಇಲ್ಲಿ ಇವೆ. ಲೇಖಕರು ಮಹಿಳೆಯರನ್ನು ಕುರಿತು ಬರೆದರೂ ಅವುಗಳು ಅಲ್ಲೊಂದು ಇಲ್ಲೊಂದು ಕಾಣಸಿಗುತ್ತವೆ. ಮಹಿಳಾ ಲೇಖಕಿಯರೇ ತಮ್ಮ ನೋವು ದುಃಖಗಳನ್ನು ದ್ವೇಷಾಸುಯೇ ಪುರುಷ ವರ್ಗದ ಮೇಲೆ ಕಾರಿದ್ದಾರೆ. ಇನ್ನೂ ಕೆಲವು ಕವನಗಳಲ್ಲಿ ಲೇಖಕರು ಮಹಿಳೆಯ ಜೊತೆಗೆ ಧ್ವನಿ ಎತ್ತುತ್ತಾರೆ. ಬಂಡಾಯವು ಮೂಲಭೂತವಾಗಿ ಜಾತಿ ಭೇದ ಲಿಂಗ ಭೇದವನ್ನು ನಿರಾಕರಿಸಿ ಹೊರಟಿತು. ಈ ಕಾರಣದಿಂದಾಗಿಯೇ ಅನೇಕ ಸ್ತ್ರೀಯರು ಅಲ್ಪಸಂಖ್ಯಾ ಸಮುದಾಯದಿಂದ ಬಂದವರೂ ತಮ್ಮ ಅನುಭವಗಳಿಗೆ ಅಭಿವ್ಯಕ್ತಿ ನೀಡಿದರು. ಸ್ತ್ರೀಯರ ಅನುಭವ ಲೋಕದ ಬಾಗಿಲೇ ಇಲ್ಲಿ ತೆರೆಯಿತು ಹಾಗೆಯೇ ಹೆಣ್ಣನ್ನು ಕುರಿತ ಬಂಡಾಯದವರ ಮನೋಭಾವವು ಸಮಾನತೆಯ ನೆಲೆಯಲ್ಲಿಯೇ ವ್ಯಕ್ತಗೊಂಡಿದೆ. ಹೆಣ್ಣು ಭೋಗದ ಸೇವೆಗೆ ಮೀಸಲಾದವಳೆಂಬ ಭಾವನೆ ಇಲ್ಲಿ ಇಲ್ಲ. ಬರಗೂರು ರಾಮಚಂದ್ರಪ್ಪನವರ 'ಮಾದಿಗರ ಹುಡುಗಿಯಲ್ಲಿ' ಅಸ್ಪೃಶ್ಯತೆಯನ್ನು ಸಾರಿ ಸಾರಿ ಹೇಳುತ್ತದೆ.

"ಗಂಗೀ ಹಳ್ಳವು ನಮ್ಮ ಪಾಲಿಗಿಲ್ಲವ್ಯಾಕೆ?
ಮನುಸರಲ್ಲವೆ ನಾವು ಮನುಸರಲ್ಲವೆ?
ಕೆಂಪಲ್ಲವೆ ನಮ್ಮ ರಕುತ ಕೆಂಪಲ್ಲವೆ? "[೧೧೪]

ಮಾದಿಗರ ಹುಡುಗಿಯ ಪ್ರಶ್ನೆ ಇದಾಗಿದೆ. ಹೊಲೆ, ಮಾದಿಗರು, ಹಳ್ಳದ, ಬಾವಿಯ ನೀರನ್ನು ಮುಟ್ಟಬಾರದು ಎಂದು ಪರಂಪರಾಗತವಾಗಿ ಬಂದುದ್ದು. ಆ ಗಂಗೀ ನಮ್ಮ ಪಾಲಿಗಿಲ್ಲವ್ಯಾಕೆ? ಎನ್ನುವ ಪ್ರಶ್ನೆ ಇಲ್ಲಿದೆ. ಅಂಬೇಡ್ಕರರವರು ತಮ್ಮ ಚಿಕ್ಕ ವಯಸ್ಸಿನಲ್ಲಿ ಶಾಲೆಗೆ

---

೧೧೩ ಮೂಡಲ ಕೆಂಪ ಮೂಡ್ಯಾವ-ಡಾ.ಬಸವರಾಜ ಸಬರದ-ಪುಟ-೩

೧೧೪ ಬರಗೂರು ರಾಮಚಂದ್ರಪ್ಪ-ಕಾಂಟೇಸಾದಲ್ಲಿ ಕಾವ್ಯ ಪುಟ- ೭೪

ಹೋದಾಗ ತರಗತಿಯಲ್ಲಿ ಅವರನ್ನು ನೀರು ಕುಡಿಯುಲು ಬಿಡದೇ ಮೇಲ್ವರ್ಗದವರೇ ಅವರಿಗೆ ನೀರು ಹಾಕುತ್ತಿದ್ದರು. ಆ ಮಡಿಕೆಯನ್ನು ಮುಟ್ಟುವ ಹಾಗಿರಲಿಲ್ಲ. ಹಾಗಾಗಿ ಇವೆಲ್ಲವುಗಳ ದೃಷ್ಟಿಯಿಂದಲೇ ಆ ಪುಟ್ಟ ಹುಡುಗಿ ಪ್ರಶ್ನಿಸುವುದರಲ್ಲಿ ಯಾವುದೇ ತಪ್ಪಿಲ್ಲವೆಂದು ಧ್ವನಿತವಾಗುತ್ತದೆ. ಹೀಗೆ ಒಂದೆಡೆ ರೋಷ, ಇನ್ನೊಂದೆಡೆ ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಡುವ ಕವಿತೆಗಳು ಇವೆ.

ಗಟ್ಟಿನಿಲುವ ಬರವಣಿಗೆಯ ಬರಗೂರು ರಾಮಚಂದ್ರಪ್ಪನವರು ವ್ಯವಸ್ಥೆಯ ಜೊತೆಗೆ ರಾಜಿಮಾಡಿಕೊಳ್ಳದ ಮನೋಭಾವದವರು. ಶೋಷಿತ ಸಮುದಾಯದ ಪರವಾಗಿ ಹೋರಾಡುವ ಅವರ ಕವಿತೆ ಅಮಾಯಕರಿಗೆ ನ್ಯಾಯ ದೊರಕಿಸುವ ನಿಟ್ಟಿನಲ್ಲಿ ಶ್ರಮಿಸುತ್ತದೆ. ಅವರ 'ಮಾದಿಗರ ಹುಡುಗಿ' ವ್ಯವಸ್ಥೆಯಲ್ಲಿಯ ಅನಾಮಿಕ ಸಂಸ್ಕೃತಿಯನ್ನು ಮೀರಿನಿಲ್ಲುವಂತಹದ್ದು. ಸಮಾಜದಲ್ಲಿಯ ಸನಾತನ ಮೌಲ್ಯಗಳ ವಿರುದ್ಧ ಪ್ರತಿಭಟಿಸುವ ಈ ಕೃತಿ ಆಳವಾಗಿ ಬೇರೂರಿರುವ ಅನೈತಿಕತೆಯ ಬುಡಮೇಲು ಮಾಡುವ ಉದ್ದೇಶ ಹೊಂದಿದೆ. "ಮಾನವೀಯ ಸಂಪ್ರದಾಯಗಳ ಮೊಸಳೆ ಹಿಡಿತದಲ್ಲಿ ನಲುಗುತ್ತಿರುವ ಹರಿಜನ ಅಸಹನೀಯ ಬದುಕಿನ ವಾಸ್ತವ ದುರಂತ ಚಿತ್ರವನ್ನು ಮೇಲ್ಜಾತಿಯವರ ಕ್ರೂರ ದಬ್ಬಾಳಿಕೆಗೆ ಅನ್ಯಾಯವಾಗಿ ಬಲಿಯಾಗುವ ಹರಿಜನರ ಮನದ ತುಡಿತಗಳನ್ನು ಮಾದಿಗರ ಹುಡುಗಿ ಕವನ ಅನನ್ಯ ರೀತಿಯಲ್ಲಿ ಸೆರೆಹಿಡಿದಿದೆ. ಇಲ್ಲಿಯ 'ಪುಟಕ್ಕ ಫ್ಯೂಡಲ್' ವ್ಯವಸ್ಥೆಯೊಳಗಿನ ಪೊಳ್ಳುತನಗಳನ್ನು ಬಯಲು ಮಾಡುತ್ತಾ ವಾಸ್ತವ ಸತ್ಯವನ್ನು ಕಂಡುಕೊಳ್ಳುತ್ತಾ ಆಕೆಯ ಮೂಲಕ ವ್ಯಕ್ತಗೊಂಡ ಬಂಡಾಯ ಹಾಗೂ ಸತ್ಯಾನ್ವೇಷಣೆಯ ಕಡೆಗೆ ಹೆಜ್ಜೆ ಇಟ್ಟ ರೀತಿ ಇವು ಬದುಕಿನ ಬದಲಾವಣೆಯ ಸಂಕೇತಗಳಾಗಿವೆ."[೧೧೮]

ಬರಗೂರರು ಬದುಕನ್ನು ಗಂಭೀರವಾಗಿ ಪರಿಗಣಿಸಿದ್ದಾರೆ. ಅದರಲ್ಲೂ ತಿರಸ್ಕೃತ ಸಮಾಜದಲ್ಲಿ ಬದುಕುತ್ತಿರುವ ಜನರ ಮಾನಸಿಕ ತುಮುಲವನ್ನು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಸಮಾಜದಲ್ಲಿ ಉಳ್ಳವರ ದುರ್ಬಲ ವರ್ಗದವರ ಮೇಲೆ ನಡೆಸುವ ಬಲಪ್ರಯೋಗ ಮಾನವೀಯ ಸಂಬಂಧಗಳಿಗೆ ಧಕ್ಕೆಯನ್ನುಂಟು ಮಾಡುತ್ತದೆ. ಇದರಿಂದ ಮನುಷ್ಯರ ಮಧ್ಯದಲ್ಲಿ ಬಿರುಕುಗಳು ನಿರ್ಮಾಣವಾಗಿ ವರ್ಗ-ವೈಷಮ್ಯಕ್ಕೆ ಸಹಾಯಕವಾಗಿದೆ. ಗುಲಾಮಿ ಸಂಸ್ಕೃತಿಯ ಇಂಡಿಯಾದಲ್ಲಿ ಅನುಚಿತವಾಗಿ ನಡೆದುಕೊಂಡು ಬಂದಿದೆ. ಮಾನವನ ಬೌದ್ಧಿಕತೆಯ ಮೇಲೆ ಆಕ್ರಮಣ ಮಾಡುವ ಈ ಪದ್ಧತಿ ಬದುಕಿನ ಕ್ರಿಯಾಶೀಲತೆಯನ್ನು ನಿಷ್ಕ್ರಿಯಗೊಳಿಸುತ್ತದೆ. ಮತ್ತು ಮನುಷ್ಯನನ್ನು ಮಾನಸಿಕವಾಗಿ. ದೈಹಿಕವಾಗಿ ಶೋಷಿಸುವಂತಹ ಅಸ್ತ್ರ ಕೂಡ ಈ ಗುಲಾಮಿತನದಲ್ಲಿದೆ.

---

[೧೧೮] ಇಪ್ಪತ್ತನೆ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು- ಸಂ- ಬಸವರಾಜ ಸಬರಾದ ಪುಟ-೧೭೪

ಅದಕ್ಕೆ ಚೆನ್ನಣ್ಣ ವಾಲೀಕಾರ ಅಮೃತಮತಿಯ ಒಡಲಾಳದ ಹಾಡು ಕವಿತೆಯಲ್ಲಿ ತಾಯಿ ನನಬ್ಯಾನಿ ಯಾರ ಮುಂದ ನಾ ಹೇಳಿಕೊಂಡು ಹಾಡಿ ಅಳಲಿ ಮಂದಿ ಬಡಿದಂಥ ರಾಡಿ ನಾ ಎಲ್ಲಿ ತೊಳಕೊಂಡ ಪದ ಕಳಕೊಲಿ. ಕ್ವಾಣದ್ಯಾಯಾಂವ ಮ್ಯಾಲಿನ್ಸ್ವಣ್ಣಾವ ಕೂಡಕೊಂಡ್ನಾಯೇನ ಮಾಡಲಿ ಬತ್ತಿ ಹೋದಂತಹ ಈ ಚಲ್ಸಿನದಿಂದ ಸಿಂದಿ ನಾ ಹ್ಯಾಂಗ್ ಪಡೆಯಲಿ ಎಲ್ಲ ಮುಗದಂತಹ ಕಾಲಿಯಾದಂತ ಚಿಂತೆ ಬಿಟ್ಟಂಥ ಮನದಲ್ಲಿ ಬೆದಿಗೆ ಬಂದಥಪ ಭೂಮಿಗ್ಸುಕ್ಕವ ಹಾಕ್ಟೆ ನಾ ಹ್ಯಾಂಗ ಕೂಡಲಿ ಹಸಿದ ಹುಲಿಹೊಟ್ಟೆಗನ್ನ ಸಿಗದಕ್ಕ ಹಾರಿಕೊಂಡೆ. ನಾ ಕೊಳದಲ್ಲಿ ಕಳವು ಕೊಲೆ ಸುಲಿಗೆ ಜಗಳ ಮನದಲ್ಲಿ ನಡಿತಾವ್ಯಾಕೆಂದು ಹೇಳಲಿ.

“ನರವು ಸತ್ತಂಥ ನಾಲಿಗೆಟ್ಟಂಥ ಗಂಡನಿಂದೇನು ಕೇಳಲಿ
ಹೆಜ್ಜೆ ಕುಂತಂಥ ಹಲ್ಲು ಬಿದ್ದಂಥ ಎತ್ತಿ ನಿಂದ್ಯಾಂಗ ಊಳಲಿ”[೧೧೬]

ಹೆಣ್ಣು ಯಾವ ಕಾಲಕ್ಕೂ ದಲಿತರಲ್ಲಿ ದಲಿತಳು ,ಅಸ್ಪೃಶ್ಯರಲ್ಲಿ ಅಸ್ಪೃಶ್ಯಳು. ಪುರುಷ ಪ್ರಧಾನ ಸಮಾಜ ತನ್ನ ಸ್ವಾರ್ಥ ಕೇಂದ್ರಿತ ಭೋಗ- ದಾಹ-ಸುಖದ ತೃಪ್ತಿಗಾಗಿ ಅವಳ ಆಸೆ, ಅನಿಸಿಕೆಗಳನ್ನು ಸಂವೇದನೆ, ಸ್ಪಂದನಗಳನ್ನು ಅರಿಯದೆ ಕಾಲಾನುಕಾಲದಿಂದ ತುಳಿಯುತ್ತ ಬಂದ ಪರಿಣಾಮ ಅಮೃತಮತಿಯಂಥ ಸ್ತ್ರೀಯರು ತಮ್ಮ ಒಡಲಾಳದ ಹಾಡು ಹಾಡಿಕೊಳ್ಳಬೇಕಾಗಿರುವುದು. ಗಂಡನ ಅಲಕ್ಷಕ್ಕೊಳಗಾದ ಅಮೃತಮತಿ ಮಾವುತನ ಸಂಗೀತದಲ್ಲಿ ತೃಪ್ತಿ ಕಾಣಲು ಹೋಗಿ ಜಾರಿ ಬೀಳುವ ಚಿತ್ರ ಇಲ್ಲಿ ಬಂದಿದೆ.

“ಹೇಗೆ ಹೇಳಲಿ ನಾನು
ನನ್ನ ಒಳಗಿನ ನೋವು
ಮನಸ್ಸಿನ ಸುತ್ತೆಲ್ಲ ಮುಳ್ಳು ಬೇಲಿ
ಆಚೆ ಈಚೆಯ ಬನವು
ಬಾಡಿ ಹೋಗಿವೆಯಲ್ಲಿ.”[೧೧೭]

ತನ್ನ ಸ್ಥಿತಿಗೆ ಕಾರಣವಾದ ಪರಿಸ್ಥಿತಿಯನ್ನು ಬಿಚ್ಚುತ್ತಾ ನಡೆಯುತ್ತಾಳೆ. ಅಗಸನ ಮಿಥ್ಯ ಮಾತಿಗೆ ಅಡವಿಗಟ್ಟಿದರೆಂದು ಸುಳ್ಳು ಸುದ್ದಿ ಹಬ್ಬಿದೆ. ನಿಜವಾದ ಸತ್ಯ ನುಡಿದರೆ ಲೋಕ ಅದನ್ನು ಮಿಥ್ಯ ಎನ್ನುವುದು ಏಕೆಂದರೆ ಮಿಥ್ಯ ಸತ್ಯದ ವೇಷದಲ್ಲಿ ವಿಜೃಭಿಸುತ್ತದೆ. ಹೆಣ್ಣಿನ ಶೋಷಣೆಗೆ ಪುರುಷ ಸಮಾಜವು ಕಾರಣವಾದರೂ ಹೆಣ್ಣಿಗೆ ಶತ್ರುವಾಗುತ್ತಾಳೆಂಬುದನ್ನು ಸೀತೆಯ ಸ್ವಗತದಲ್ಲಿ ಕವಿ ವ್ಯಕ್ತಪಡಿಸಿರುವರು. ಸಂಶಯದ ಸುಳಿಯಲ್ಲಿ ಸಿಕ್ಕ ಶ್ರೀರಾಮನು ತಾಯಿಯ ಮಾತನ್ನು ಕೇಳಿ

---

೧೧೬ ಬಂಡೆದ್ದ ದಲಿತರ ಜೀದಿ ಹಾಡುಗಳು - ಚೆನ್ನಣ್ಣ ವಾಲೀಕಾರ ಪುಟ-೯
೧೧೭ ಕೆಂಡ ಸಂಪಿಗೆ ವಿಮರ್ಶೆ-ಎಸ್.ಆರ್.ಚನ್ನವೀರಪ್ಪ-ಪುಟ-೧೨

ಕಾಡಿಗಟ್ಟುವನು. ಈ ದೃಷ್ಟಾಂತ ಕೇವಲ ರಾಮಾಯಣ ಕಾಲಕ್ಕೆ ಮಾತ್ರ ಸೀಮಿತವಲ್ಲ. ಅದು ಎಲ್ಲ ಕಾಲ ದೇಶಗಳಲ್ಲಿ ನಡೆಯುವಂಥದ್ದೆಂಬ ಸಾರ್ವತ್ರಿಕ ಸತ್ಯವನ್ನು ಎತ್ತಿ ತೋರಿಸಿರುವರು. ಸ್ತ್ರೀ ಸಂವೇದನೆಗೆ ಕವಿ ಸಬರದ ಅವರು ಬಳಸಿಕೊಳ್ಳುವ ಭಾಷೆ-ಲಯ ಛಂದಸ್ಸನ್ನು ಜನಪರ ಸಾಹಿತ್ಯದಿಂದ ಪಡೆದುಕೊಳ್ಳುತ್ತಾರೆ. ಸಬರದ ಅವರ ಕಾವ್ಯದ ಬಗೆಗೆ ಬರೆಯುತ್ತಾ ಎಸ್.ಆರ್.ಚನ್ನವೀರಪ್ಪ ಅವರು ಮಹಿಳಾ ಸಂವೇದನೆಯನ್ನು ಬಹುಸೂಕ್ಷ್ಮವಾಗಿ ವಿಂಗಡಿಸಿ ತೋರುತ್ತ ಮಹಿಳೆಯ ಮನೋಭೂಮಿಕೆಯಲ್ಲಿರುವ, ಇರಬಹುದಾದ ಅಸ್ತಿತ್ವದ ಹುಡುಕಾಟ ಆತಂಕ, ದುಗುಡ, ಪರ್ಯಾಯಗಳ ಘೋಷಣೆ, ಸಾಧ್ಯತೆಗಳ ಕಂಡುಕೊಳ್ಳುವಿಕೆ, ಪುರುಷನ ವ್ಯಕ್ತಿತ್ವದ ರೂಪಿಕೆಯಲ್ಲಿರುವ ಸ್ತ್ರೀ ಸಾಮರ್ಥ್ಯ ಇವೇ ಆಶಯಗಳು ಪ್ರಧಾನವಾಗಿ ಕಾಣುವವು. ಎಂದು ಅಭಿಪ್ರಾಯ ಪಡುತ್ತಾರೆ.

"ತುಟಿಯಲ್ಲಿ ಹೂವೆದೆಯು ಹನಿ ಬಳಕು
ಕಣ್ಣು ತುಂಬಿ ಸಮುದ್ರ ಬೇವ ತುಳುಕು
ಕಾರ್ತಿಕ ಕತ್ತಲೆಯ
ಪುಟ್ಟ ಹಣತೆಯ ತೆಳು ಬೆಳಕು
ಹಲವು ಒಲವ ಕನಸು ಕವಿತೆಗಳ
ಬಿತ್ತಿದ್ದಳು
ಒಬ್ಬಳಿದ್ದಳು
ಒಬ್ಬಳಿದ್ದಳು
ಕುರುಡುಗಾಳಿ
ಮೂಕ ಕವಿತೆ
ಬೆಳಕ ಗೋರಿ
ಇಷ್ಟು ಬರಿ ಇಷ್ಟು ನನ್ನ ಪುಟ್ಟ ಜಗತ್ತಿನ
ಕಣ್ಣುಗಳಷ್ಟು ಕಿತ್ತು ಹೋದಳು
ಒಬ್ಬಳಿದ್ದಳು."[೧೧೮]

ಒಬ್ಬಳಿದ್ದಳು ತುಟಿಯಲ್ಲಿ ಹೂವೆದೆಯು ಪುಟ್ಟ ಹಣತೆಯಂತೆ ಕನಸು ಬಿತ್ತಿದಳು ಎಂದು ಪ್ರೀತಿಯನ್ನು ಸೂಚಿಸುತ್ತದೆ. ಆದರೆ ಅದರಲ್ಲಿಯೇ ಕುರುಡು ಗಾಳಿ, ಗೋರಿ, ಕಣ್ಣುಗಳಷ್ಟು ಕಿತ್ತು ಹೋದಳು ಎಂಬುದು ದುಃಖವನ್ನು ಸೂಚಿಸುತ್ತದೆ. ಕವಿ ಪ್ರೀತಿ-ಅಗಲಿದ ಬಗೆಯನ್ನು ಒಂದೇ ಕವನದಲ್ಲಿ ಹೇಳುತ್ತಾನೆ. ಒಂದೆಡೆ ಸಂತೋಷ ಇನ್ನೊಂದೆಡೆ ದುಃಖ ಕೊಡುವಿಕೆ, ಅಗಲುವಿಕೆ ಎರಡನ್ನು ಸೂಚಿಸುತ್ತದೆ. ಮುಂದುವರೆದು ಕನ್ನಡ ಕಾವ್ಯ ಕನ್ಯೆಯೋರ್ವಳ ಚೆಲುವು, ಬಿಂಕ ಬಿನ್ನಾಣವನ್ನು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ.

---

[೧೧೮] ವಿಷಾದಯೋಗ-ಸತೀಶ ಕುಲಕರ್ಣಿ-ಪುಟ-೬೮

"ಟೋಪು ಸೆರಗಿನ ಸೀರೆ
ತುಂಬು ಸೆರಗು
ಕೈತುಂಬ ಬಳೆ
ಹಣೆಗೆ ಕುಂಕುಮ
ನಡು ತೋಳಿಗೆ ವಂಕಿ
ಮೂಗಿಗೆ ನತ್ತು
ಕಾಲಿಗೆ ಕಡಗ ಕಾಲುಂಗರ
ಚೈನ್, ಗೆಜ್ಜೆಸರ
ಕಿವಿಗೆ ಬೆಂಡೋಲೆ
ನಡುವಿಗೆ ಬಳಸಿದ ಡಾಬು
ಇಷ್ಟಲಂಕರಿಸಿಕೊಂಡು
ಸುತ್ತ ಯಾರನ್ನೂನೋಡದೆ
ತನ್ನಲ್ಲೆ ತಾನು ಮಗ್ನವಾಗಿ
ಎದೆಯುಬ್ಬಿಸಿ ಹೊರಟಿದ್ದಳು
ಗರತಿ ಗಂಗವ್ವ."[೧೯೯]

ಭಾರತೀಯ ನಾರಿಯ ಗುಣ ವಿಶೇಷಗಳನ್ನು ಕವಿ ಅಲ್ಲಮಪ್ರಭು ಬೆಟ್ಟದೂರ ಅವರು 'ಕನ್ನಡ ಕಾವ್ಯ-ಕನ್ಯೆ'ಯಲ್ಲಿ ಬಳೆ, ಕುಂಕುಮ, ಸೀರೆ ಇವೆಲ್ಲವುಗಳು ಕನ್ನಡ ಕಾವ್ಯಕ್ಕೆ ಸಿಂಗರಿಸಿ ಪ್ರಸಿದ್ಧಳೆನಿಸಿದ ಕನ್ನಡ ತಾಯಿಯ ಗುಣ ವಿಶೇಷಗಳನ್ನು ಚಿತ್ರಿಸುತ್ತಾರೆ. ಕನ್ನಡ ಕಾವ್ಯ ಕನ್ನಿಕೆಯ ವರ್ಣನಾತ್ಮಕತೆ ಇದರಲ್ಲಿದೆ. ಬಂಡಾಯ ಸಂದರ್ಭದಲ್ಲಿ ಹೈದರಾಬಾದ್ ಕರ್ನಾಟಕ ಭಾಗದ ಕಾಶಿನಾಥ ಅಂಬಲಗೆ ಅವರು ತಮ್ಮ ಕವನ 'ಜೀವದ ಗೆಳತಿ'ಯಲ್ಲಿ ಹೀಗೆ ಹೇಳುತ್ತಾರೆ.

"ನಿಲ್ಲು ನಿಲ್ಲೇ ಜೀವದ ಗೆಳತಿ
ಅಲ್ಲೇ ನಿಲ್ಲು ಜೀವನದ ಗೆಳತಿ,
ನಿನ್ನ ಸ್ಮೃತಿಗಳ ಕಟಿ ರೊಟ್ಟಿಯ ಮೇಲೆ
ಒಂದಿಷ್ಟು ಬೆಣ್ಣೆಗಳ ಮಾಧುರ್ಯ
ಪುಂಡಿಪಲ್ಲೆ ಶೇಂಗಾ ಚಟ್ನಿ ಸವರುತ್ತೇನೆ
ಮುಳ್ಳುಗಳ ಜಾಲದಲಿ ಸಿಕ್ಕಿರುವ
ನಿನ್ನ ಸೆರಗು ಎಚ್ಚರದಿಂದ ಬಿಡಿಸಿ
ಅಲ್ಲೊಂದಿಷ್ಟು ಚುಕ್ಕೆ ಚಂದ್ರಾಮರ ಬೆಳಕು
ಮುಗ್ಧ ಮಗುವಿನ ಕನಸುಗಳ ಸೆಳಕು
ಕಟ್ಟಿ ಉಡಿತುಂಬಿ ಕಳಿಸಿಕೊಡುತ್ತೇನೆ."[೨೦೦]

---

[೧೯೯] ಆಧುನಿಕ ಕವಿತೆಗಳ ಸಂಗ್ರಹ-ಸಂ.ಡಾ.ಚಿತ್ಕಳಾ.ಜೆ.ಮಠಪತಿ-ಪುಟ-೪೫

[೨೦೦] ಹಾಡುಗಳು ಉಳದಾವ-ಡಾ.ಕಾಶಿನಾಥ ಅಂಬಲಗೆ-ಪುಟ-೩೨

ಗಂಡು ಹೆಣ್ಣುಗಳಿಬ್ಬರಿಗೂ 'ಪ್ರೇಮ' ಎಂಬ ಪದದ ಅರ್ಥ ಬೇರೆ ಬೇರೆ ಅವರಿಬ್ಬರ ನಡುವಿನ ಇರುವ ತಪ್ಪು ಗ್ರಹಿಕೆಗೆ ಇದೂ ಒಂದು ಕಾರಣ. ಬೈರನ್ ರವರು 'ದ ಗಸೇನ್ಸ್' ಕೃತಿಯಲ್ಲಿ "ಗಂಡಿಗೆ ಪ್ರೇಮ ಜೀವನದ ಒಂದು ಭಾಗ ಮಾತ್ರ. ಆದರೆ ಹೆಣ್ಣಿಗೆ ಅದು ಇಡೀ ಜೀವನದ ಅಸ್ತಿತ್ವ"[೧೨೧] ಎನ್ನುತ್ತಾರೆ.

ಆದರೆ ಕಾಶಿನಾಥ ಅಂಬಲಗೆ ಅವರು ಜೀವದ ಗೆಳತಿಯ ನೆನಪುಗಳ ಸವಿಯನ್ನು ಹೈದ್ರಾಬಾದ ಕರ್ನಾಟಕದ ಊಟಗಳಲ್ಲಿ ಅತಿ ಮಹತ್ವದ ಊಟ ಕಟ ರೊಟ್ಟಿ ಪುಂಡಿಪಲ್ಲೆ ಶೇಂಗಾ, ಚಟ್ನಿ ಅವೆಲ್ಲದರ ಜೊತೆಗೆ ಬೆಣ್ಣೆ ಉಪಮೆ, ಉಪಮಾನಗಳನ್ನು ಬಳಸಿ ತಮ್ಮ ಗೆಳತಿಗೆ ಆಸರೆಯಾಗುತ್ತೇನೆ ಎನ್ನುವ ಮಾತು ಈ ಕವನದಲ್ಲಿದೆ. ಪ್ರೀತಿಯ ಪ್ರತಿಬಿಂಬವನ್ನು ಪ್ರಭಾವಕಾರಿಯಾಗಿ ವಿವರಿಸುತ್ತಾ ಸಮಾಜ ಪ್ರೀತಿಯನ್ನು ಯಾವ ರೀತಿ ಸ್ವೀಕರಿಸುತ್ತದೆ. ಎಂಬುದು ಟೀಕಾತ್ಮಕ ಭಾವನೆಗಳು ಸ್ತ್ರೀವಾದಿ ಹಿನ್ನೆಲೆಯಲ್ಲಿ ಕಂಡಾಗ ಓಗೆ ಎನ್ನುವ ಅಭಿಪ್ರಾಯವು ಪ್ರತಿನಿಧಿಸುತ್ತದೆ.

"ಕತ್ತಲೆಯ ನೆತ್ತಿಗೆ ಹೂವಿತ್ತು
ಎಲ್ಲೆಲ್ಲೋ ತಿರುಗಿ ಪಶ್ಚಿಮ ದಾಟಿ
ಪೂರ್ವದ ಕ್ವಾಟಿ ಮುಟ್ಟಿದಳು ತಟ್ಟಿದಳು
ಒಂದೊಂದಾಗಿ ಮೆಟ್ಟಿದಳು
ಈ ಕನಸಿನ ರಾಣಿ
ಹಸಿದ ನಾಲಿಗೆ ಕುಸಿದ ಮನಸ್ಸು
ಬತ್ತಿದೆದೆ ಕೊಳೆತ ಯೋನಿ
ಹೊಕ್ಕುಳಲ್ಲಿ ಹೂವಿತ್ತು
ನರನಾಡಿಗಳಲ್ಲಿ ನಂಜಿತ್ತು
ಫಲಿಸಿತು ಪಾಪದ ಫಲ
ಸ್ಖಲಿಸಿ ಕಣ್ಣಜಲ"[೧೨೨]

ಭಾರತೀಯ ಸಂಸ್ಕೃತಿಯಲ್ಲಿನ ಲೈಂಗಿಕ ಒಲವನ್ನು ಎತ್ತಿ ಹಿಡಿಯುತ್ತವೆ. ಪುರೋಹಿತಶಾಹಿ, ರಾಜ್ಯಶಾಹಿ ವ್ಯವಸ್ಥೆಯಲ್ಲಿ ಆ ಲೈಂಗಿಕ ಒಲವು ಒಮ್ಮುಖವಾದಾಗ, ಸಹಜವಾಗಿಯೇ ಸ್ತ್ರೀಯರು ಲೈಂಗಿಕ ದಮನಕ್ಕೊಳಗಾದರು.

---

೧೨೧ ಸಿಮೋನ್ ದ ಬೊವಾ ದ ಸೆಕೆಂಡ್ ಸೆಕ್ಸ್-ಡಾ.ಎಚ್.ಎಸ್.ಶ್ರೀಮತಿ-ಪುಟ-೪೦೭

೧೨೨ ದೃಷ್ಟಿ-ಡಾ.ಪ್ರಭೂ ಖಾನಾಪುರೆ-ಪುಟ-೧೦

"ಓಸರಿಸುತ್ತೋಯ್ಯ ನೇಕಾಂತದೊಳೆಮ್ಮ
ಬೇಸರಿಸದೆ ಬಿನ್ನವಿಸುವುದು
ತನುಮನಗಳ ತನ್ನ ಬಸಗೈದು ದೈನ್ಯವ
ಕೊನರಿಸಿ ತಂಪುಗೊಳಿಸುವುದು."[೧೩೩]
(ಹೊನ್ನಮ್ಮನ ಹದಿ ಬದೆಯ ಧರ್ಮ)

ಎಂದು ಹಲವು ಬಗೆಯಲ್ಲಿ ಹೊನ್ನಮ್ಮ ಭೋದಿಸಿದ ಹದಿಬದೆಯ ತತ್ವಗಳು, ಭಾರತೀಯ ಪುರುಷಶಾಹಿ ತತ್ವಗಳ ಪ್ರತಿ ಬಿಂಬಗಳಾಗಿವೆ. ಅವುಗಳು ದಾಂಪತ್ಯ ಜೀವನ ಮುಖವಾಡದಲ್ಲಿ ಲೈಂಗಿಕ ಶೋಷಣೆಯನ್ನು ವ್ಯವಸ್ಥಿತವಾಗಿ ಪೋಷಿಸಿಕೊಂಡು ಬಂದಿವೆ. 'ಪತಿ'ಯ ಕಾಮನೆಯನ್ನು ಈಡೇರಿಸುವುದು. 'ಸತಿಧರ್ಮ'ವಾದರೆ ಗಂಡನ ಮುಖವಾಡವಿಲ್ಲದ ವಿವಾಹ ಬಾಹಿರ ಕಾಮನೆಯನ್ನು ತೃಪ್ತಿಗೊಳಿಸುವುದು ಲೈಂಗಿಕ ದಾಸಿಯ ಕರ್ತವ್ಯ ಹಾಗೂ ಧರ್ಮವಾಗಿದೆ.

"ದೀರ್ಘ ತಪಸ್ಸಿನಲ್ಲಿದ್ದ ಶಿವನು ಲೈಂಗಿಕವಾಗಿ ಜಡವಾಗಿದ್ದನು. ಅಂಥವನನ್ನು ಪಾರ್ವತಿ ಜಾಗೃತಗೊಳಿಸಿ ಷಣ್ಮುಖನನ್ನು ಪಡೆದಳು. ಅವನಿಂದಲೇ ಇಡೀ ಜಗತ್ತನ್ನು ದುಷ್ಟಶಕ್ತಿಗಳಿಂದ ವಿಮುಕ್ತಗೊಳಿಸಿದಳು. ಇದೇ ಹಿನ್ನೆಲೆಯಲ್ಲಿ ಪುರುಷ ದೇವರನ್ನು ಸದಾ ಜಾಗೃತರನ್ನಾಗಿಸಲು ದೇವಾಲಯದಲ್ಲಿ ಕನ್ಯೆಯರನ್ನು ಅರ್ಪಿಸುವ ಸಂಪ್ರದಾಯ ಪ್ರಾರಂಭವಾಯಿತು ಎಂದು ಪೌರಾಣಿಕ ಕಥೆ ಹೇಳುತ್ತದೆ. ಅದಕ್ಕಾಗಿಯೇ, ಕನ್ಯೆಯರನ್ನು ಅರ್ಪಿಸುವುದು ಪುಣ್ಯದ ಕಾರ್ಯ. ಅದರಿಂದ ಸ್ವರ್ಗ ಪ್ರಾಪ್ತಿ, ಆಗುತ್ತದೆಂಬ ಪೊಳ್ಳು ನಂಬಿಕೆಗಳನ್ನು ಪುರಾಣಗಳು ಸೃಷ್ಟಿಸಿ ಬೆಂಬಲಿಸಿದವು. ಎಲ್ಲ ಸ್ತ್ರೀ ಸಮುದಾಯದ ತುಳಿತ ಧಾರ್ಮಿಕ ಮೂಲದಿಂದಲೇ ನಡೆದುದು ಸ್ಪಷ್ಟವಾಗಿದೆ."[೧೩೪]

ಒಂದು ಹೆಣ್ಣಿನ ಬಾಳು ಎಂತಹದ್ದು, ವೇಶ್ಯೆಯಾಗಿ ಎಲ್ಲಿಂದಲೋ ಬಂದು ಇನ್ನೊಬ್ಬರಿಗೆ ತನ್ನ ಸುಖ ಕೊಡಬೇಕು. ಅವಳ ಮೈ ಕೈ ಎಲ್ಲವೂ ಕೊಳೆತು ಹುಳುತು ನಾರುತ್ತಿದ್ದರೂ ಅವೆಲ್ಲವೂಗಳ ಸಹನೆ ಅವಳಲ್ಲಿರುವುದು.

---
[೧೩೩] ಪಾತರದವರು – ಶೈಲಜ ಹಿರೇಮಠ – ಪುಟ –೨೫
[೧೩೪] ಪಾತರದವರು – ಶೈಲಜ ಹಿರೇಮಠ – ಪುಟ –೨೫, ೨೬

“ಏ ಗುಲಾಬಿ
ಸಮಯವೆಲ್ಲಿದೆ ಹೇಳು
ನಿನ್ನ ಮೇಲೆ ಕವಿತೆ ಬರೆಯುವಷ್ಟು
ನಾನೀಗ
ನಿನ್ನ ಬೆಳಸಿದವರ
ಕೈಗೆ ನಟ್ಟಿರುವ
ಮುಳ್ಳು ತೆಗೆಯುತ್ತಿವೆ
ನನ್ನ ಕವನದ ಚೂರುಗಳು
ಬರೆಸುತ್ತಿವೆ
ನಿನ್ನ ಹೊರ ತೆಗೆ ತೆಗೆದು
ಕಪ್ಪಾದವರ ಮೈಯ ಬೆವರನ್ನು.”[೧೨೫]

“ವಸ್ತುಗಳನ್ನು ನೋಡುವ ಕ್ರಮಗಳಲ್ಲಿಯೇ ಒಂದು ಪಲ್ಲಟವನ್ನುಂಟು ಮಾಡುವುದೇ ಹೊಸ ಪಂಥಗಳ ಉದ್ದೇಶವಾಗಿರುತ್ತದೆ. ಇದನ್ನು ಅಂಟಿಕ್ಲಾಕ್ ಚಿಂತನ ಎನ್ನುತ್ತಾರೆ. ರೂಢಿಗತ ನೋಟ, ಭಾವನೆ-ಪೂರ್ವ ಗ್ರಹಗಳನ್ನು ಹೊಸ ಕಾವ್ಯ ಬದಲಿಸುತ್ತದೆ. ಹಾಗಾಗಿ ಅದು ಕ್ರಾಂತಿಕಾರಕ ಅನಿಸಿಕೊಳ್ಳುತ್ತದೆ. ‘ಗುಲಾಬಿ’ಯ ಮೇಲಿದ್ದು ರಸಿಕನ ಗಮನವನ್ನು ಕವಿ ಇಲ್ಲಿ ತನ್ನ ಅದನ್ನು ಸಿಟ್ಟು ಬೆಳೆಸಿದವರ ಬೆವರಿನ ಕಡೆ ಸೆಳೆಯುತ್ತಿದ್ದಾನೆ.”[೧೨೬]

ನವ್ಯ, ನವೋದಯ ಸಂದರ್ಭದಲ್ಲಿ ಕೇವಲ ವಸ್ತುಗಳನ್ನು ಹೆಣ್ಣನ್ನು ವರ್ಣಿಸುತ್ತಾ ಸಾಹಿತ್ಯ ಸೃಷ್ಟಿಯಾಗುತ್ತಿತ್ತು. ಅದು ಕೇವಲ ಸಾಹಿತ್ಯಗಳಿಗೇ ಅನ್ವಯವಾಗುತ್ತಿತ್ತು. ಜನ ಸಾಮಾನ್ಯರಿಗೆ ತಲುಪುತ್ತಿರಲಿಲ್ಲ. ಹೀಗಾಗಿ ಬಂಡಾಯ ಕವಿಗಳು ಇವುಗಳನ್ನು ವಿರೋಧಿಸಿದರು. ಗುಲಾಬಿ ಹೆಣ್ಣಿನ ವರ್ಣನೆಯಿಂದ ಶೋಷಣೆ, ಅನ್ಯಾಯಗಳಂತಹ ವಿಷಯಗಳನ್ನು ಹೋಗಲಾಡಿಸಲು ಸಾಧ್ಯವಿಲ್ಲ. ಆದ್ದರಿಂದ ಆ ಗುಲಾಬಿ ಬೆಳಸಿ ಕೈಗೆ ಮುಳ್ಳ ಚುಚ್ಚಿದಾಗ ಆಗುವ ಅನುಭವ ಅವರ ಶ್ರಮದ ಕುರಿತು ಬರೆಯೋಣ ಎಂದು ಜೊತೆಗೆ ಇದರ ಹಿಂದಿರುವ ಶ್ರಮ ಅತಿ ಮಹತ್ವದ್ದು. ಅವುಗಳ ಬಗ್ಗೆ ಬರೆಯೋಣ ಎಂದು ಕವಿ ಹೇಳುತ್ತಾರೆ. ಶೋಷಣೆಯ ವಿರುದ್ಧ ಪ್ರತಿಭಟಿಸುವುದೇ ಇಲ್ಲಿನ ಮುಖ್ಯ ವಿಷಯಗಳಾಗಿದ್ದವು.

---

[೧೨೫] ಹೊಕ್ಕುಳಲ್ಲಿ ಹೂಪಿದೆ – ರಂಜಾನ ದರ್ಗಾ-ಪುಟ-೩೧

[೧೨೬] ದಲಿತ-ಬಂಡಾಯ ಕಾವ್ಯ ಮತ್ತು ವಿಚಾರವಾದಗಳು-ಡಾ.ಪ್ರಹ್ಲಾದ ಅಗಸನ ಕಟ್ಟೆ-ಪುಟ-೨೧೯

"ಸುಣ್ಣ ಬಳಿಯದ ಮಹಲು
ಅದರ ಭುಜದ ಮೇಲೆ ಕೂಲಿಕಾರರ ಬಣ್ಣ ಬಣ್ಣದ ಸಾಲು
ಮಣ್ಣು ಇಟ್ಟಿಗೆಯಾಗಿ ಬಳಿಕ ಕಟ್ಟಡವಾಗಲು
ಇಷ್ಟಿಷ್ಟೆ ಏರಿದ ಎತ್ತರದ ಜೀವಂತ ಸೀಮಾರೇಖೆ
ಕೈಯಿಂದ ಕೈಗೆ ಹಾರುವ ಬಾಣಲಿಯೊಂದು
ರೆಕ್ಕೆ ಮೂಡದ ಮಣ್ಣು ತುಂಬಿದ ಹಕ್ಕಿ
ಬಾವಲಿಗಳ ಸಿಡಿ ಮಿಡಿಯ
ಕೂಗುಗಳ ಕರೆಗಳ ಮಧ್ಯೆ
ಸುಡು ಮರಳ ರಾಶಿಯ ಹರ ಹರಕು ನೆರಳಲ್ಲಿ
ಅರೆತೆರದ ಕಣ್ಣುಗಳ ಕಂದನಿಗೆ
ಹಾಲನೂಡುವ ಅಮ್ಮ
ನಿನ್ನ ಗರ್ಭದ ಗುಪ್ತ ಸಾಮ್ರಾಜ್ಯಗಳಲ್ಲಿ
ನಗರ ನಾಡುಗಳೆಷ್ಟು ಹೊರಳುತ್ತಿವೆ."[೧೨೭]

ದುಡಿವ ಜನಗಳ ಶೋಷಣೆಯ ಜೊತೆಗೆ ನಾಗರಿಕತೆಯನ್ನು ಪ್ರತಿಬಿಂಬಿಸುತ್ತ ಪ್ರಕೃತಿ ಧತ್ತವಾದ ಮಾತುಗಳನ್ನಾಡುತ್ತಾರೆ. ದಬ್ಬಾಳಿಕೆ ಮಾಡುವವರನ್ನು ಬಾವಲಿಗಳಿಗೆ ಹೋಲಿಸಿ ಹಾಲನ್ನು ಕುಡಿಸುವ ಅಮ್ಮನಿಗೆ ಕವಿ ನಿನ್ನ ಗರ್ಭದ ಗುಪ್ತ ಸಾಮ್ರಾಜ್ಯದಲ್ಲಿ ಇನ್ನೂ ಎಷ್ಟು ನಗರ-ನಾಡುಗಳು ಇವೆ ಎಂದು ಕೇಳುತ್ತಾರೆ. ಇನ್ನೊಬ್ಬ ಕವಿ ತನ್ನ ಗೆಳತಿಗೆ ಹೀಗೆ ಹೇಳುತ್ತಾರೆ.

"ಮುಗುಳ ನಗೆ ನಕ್ಕಾಗ
ಮೂಡಣವು ಬಿರಿದಾಗ
ಮಲ್ಲಿಗೆಯ ಮಕರಂದ ಮುತ್ತಿ ತಲ್ಲೆ !
ಗಲ್ಲ ಗಲ್ಲಕೆ ಮುಟ್ಟಿ
ತುಟಿಯು ತಾಕುವ ಮೊದಲೆ
ಹಸಿರು ಹಾಸಿದ ಬಳ್ಳಿ ಬಾಡಿತಲ್ಲೇ !
ಹಾಲುಗೆನ್ನೆಯ ಮೇಲೆ
ಕಣ್ಣೀರು ಹನಿಯೇಕೆ
ಕಣ್ಣು ಕವಿತೆಗಳಲ್ಲಿ."[೧೨೮]

ಗೆಳತಿಯ ಕುರಿತು ಕವಿ ಮುಗುಳು ನಗೆಯಿಂದ ಮೂಡಣವು ಕೆಂಪಾಯಿತು ಎನ್ನದೇ ಬಿರಿದಾಗ ಎನ್ನುತ್ತಾರೆ. ಪ್ರೀತಿಯೆನ್ನುವುದರ ಸಂಕೇತಗಳು ಎಲ್ಲವು ಮುಗಿದು ಹೋಗುತ್ತಿವೆ. ಜೀವನದಲ್ಲಿ ಎಲ್ಲವೂ ಹಾಳಾಗುತ್ತಿದೆ. ಅದಕ್ಕೆ ಗೆಳತಿ ಹಾಗಾಗುವುದು ಬೇಡ ಕವಿಯ ಹೃದಯ

---

೧೨೭ ಬಂಡಾಯ ಕಾವ್ಯ - ಸಂ. ಬರಗೂರು ರಾಮಚಂದ್ರಪ್ಪ - ಪುಟ- ೨೨೩
೧೨೮ ಸಬರದ ಕವಿತೆಗಳು-ಡಾ॥ ಬಸವರಾಜ ಸಬರದ-ಪುಟ-೨೮

ಭಾವನೆಗಳ ಪ್ರತಿಬಿಂಬ ಈ ಕವಿತೆಯಲ್ಲಿರುವುದು ಸಬರದ ಹಣ್ಣು, ವ್ಯಯ್ಯಾರ ಇವೆಲ್ಲವುಗಳ ಕುರಿತು ಬರೆಯುವುದು ಬೇಡವೆಂದರೂ ಅಲ್ಲೊಂದು ಇಲ್ಲೊಂದು ಕವಿತೆಗಳು ಕಂಡು ಬರುತ್ತವೆ.

"ಬಂಡಾಯ ಲೇಖಕ ಸೌಂದರ್ಯವನ್ನು ನಿರ್ಧರಿಸುವ ಅಂಶಗಳೇನೆಂಬುದನ್ನು ತಿಳಿದಿರುವುದರಿಂದ, ಸೌಂದರ್ಯ ನಿರೂಪಣೆಯಲ್ಲಿ ವಿವೇಚನಾ ಪೂರ್ಣವಾದ ಔಚಿತ್ಯ ಜ್ಞಾನವನ್ನು ಹೊಂದಿರುತ್ತಾನೆ, ಹೊಂದಿರಬೇಕಾಗುತ್ತದೆ. ಹೂವು-ಹಣ್ಣು-ತಾರೆಗಳ ಬಗ್ಗೆ ಬರೆಯುವುದಿಲ್ಲ ಎಂದು ಹೇಳುವುದಿಲ್ಲ. ಆತ ಅಶೋಕ ವೃಕ್ಷದ ಬುಡಕ್ಕೆ ಪಾದದಿಂದ ಒದ್ದು ಚಿಗುರು - ಹೂ ಬರಿಸುತ್ತಿದ್ದ ಚೆಲುವೆಯರ ಬಗ್ಗೆ ಬರೆಯುವ ಕವಿ ಸಮಯವಲ್ಲ. ಆತನದು ನೆಲದ ಮೇಲೆ ಎಂದಿಗೂ ಪಾದವೂರದೆ, ಪಾದರಕ್ಷೆಯೊಳಗೆ ಅವಿತು ಕೆಂಪಾಗಿರುವ ಪಾದಗಳ ವರ್ಣನೆ ಆತನ ಕಾಯಕವಲ್ಲ. ಸೌಂದರ್ಯವನ್ನು ದೈವೀಕರಿಸದೆ, ಮಾನವೀಕರಿಸುವ ಸೌಂದರ್ಯವನ್ನು 'ಅತಿ ಮಾನವ'ರಿಗೆ ಮಿತಿಗೊಳಿಸದೆ, ಎಲ್ಲರಲ್ಲೂ ಸಮಾನವಾಗಿ ವಿಸ್ತರಿಸುವ ದೃಷ್ಟಿ ಆತನದು ಎಲ್ಲರ ಬದುಕನ್ನೂ ಸುಂದರವಾಗಿಸುವ ಪ್ರಯತ್ನಗಳಲ್ಲಿ ಸಾಹಿತ್ಯವೂ ಒಂದು ಅಸ್ತ್ರ ಆತನ ಕೈಯಲ್ಲಿ ಪೋಲಿಸರನ್ನೂ, ಅಧಿಕಾರಿಗಳನ್ನು ಮನುಷ್ಯರನ್ನಾಗಿಸುವವ 'ಬಂದೂಕಿನ ಬಾಯಿಯಲ್ಲಿ ಗುಬ್ಬಿ ಗೂಡು ಕಟ್ಟುವ' ಹೊಸ ನಾಡಿನ ಸೃಷ್ಟಿಯತ್ತ ಆತನ ನಡೆ."[೧೨೯] ಇದೆ ಹೊಸ ಕನಸಿನತ್ತ ಅವನ ತುಡಿತ ಮಿಡಿತವಿದೆ.

ದುಡ್ಡು ತೆತ್ತು ಅಭಿಷೇಕ ಕಲಶಕೊಂಡುಕೊಂಡ ಹೆಳವನಿಗೆ ಗೊಮ್ಮಟನ ತಲೆಗೆ ಅದನ್ನು ಹೊಯ್ಯುವ ಭಾಗ್ಯ ಒದಗಲಿಲ್ಲ ಎಂಬ ಸಂಗತಿಯನ್ನು ಶ್ರವಣ ಬೆಳಗೊಳದ ಮಸ್ತಕಾಭಿಷೇಕದ ವೇಳೆ ಪತ್ರಿಕೆಗಳು ಪ್ರಕಟಿಸಿರುವುದನ್ನು ಓದಿದ್ದೇವೆ. ಆ ಹೆಳವನ ಚಿತ್ರವನ್ನೂ ನೋಡಿದ್ದೇವೆ. ಈ ದೇಶದ ಇಂದಿನ ಸ್ಥಿತಿಯಲ್ಲಿ ಆ ಹೆಳವ ನಮ್ಮ ಪೂಜಾ ಪ್ರಭುತ್ವಕ್ಕೆ ಒದಗಿರುವ ದುರವಸ್ಥೆಯ, ದುರಂತ ವಸ್ತು ಪ್ರತಿರೂಪವಾಗಿದ್ದಾನೆ. ನಾವಿಂದು ಗುರಿ ಎಟುಕಿಸದೆ ಕಾಲು ಮೋಟಾಗಿಸಿಕೊಂಡ ಪ್ರಜಾಪ್ರುತ್ವದ ಮುನ್ನಡೆಗೆ ಕಸುವು ತುಂಬಬೇಕಾಗಿದೆ. ನಮ್ಮೆಲ್ಲಾ ಸಾಂಸ್ಕೃತಿಕ ಚಳವಳಿಗಳು ಈ ಕುಂಟನ್ನು ಬಲಪಡಿಸಬೇಕಾಗಿದೆ. ಮಸ್ತಕಾಭಿಷೇಕಕ್ಕೆಲ್ಲ ಸ್ವಾಭಿಮಾನಿಯಾದ, ಸ್ವಾವಲಂಬಿಯಾದ ಸುಂದರವಾದ ಹೊಸ ನಾಡನ್ನು ನಿರ್ಮಿಸಬಲ್ಲ, ಪ್ರಜ್ಞಾಶೀಲ ನಾಗರಿಕ ಪುರುಷನ ನಿರ್ಮಾಣಕ್ಕಾಗಿ. ಅನೇಕ ರೀತಿಯ ಸಮಾಜಿಕ ಅನಿಷ್ಟಗಳನ್ನು ಹೋಗಲಾಡಿಸಿ ಹೊಸದೊಂದು ಸಮಾಜದ ನಿರ್ಮಾಣವಾಗಬೇಕಿದೆ.

---

[೧೨೯] ಕನ್ನಡ ಬಂಡಾಯ ಸಾಹಿತ್ಯ-ಸಂ.ಸರಜೂಕಾಟ್ಕರ-ಪುಟ-೫೪. ೫೫

ಸಾಹಿತ್ಯಕ್ಕೂ ಮತ್ತು ಸಮಾಜಕ್ಕೂ ಇರುವ ಸಂಬಂಧ ಕುರಿತು ಅದರಲ್ಲೂ ಕಾವ್ಯ ರಚಿಸುವ ಕವಿಗಳ ಮೇಲೆ ಸಮಾಜ ಬೀರುವ ಪ್ರಭಾವವೇನು? ಯಾವ ಬಗೆಯ ಪ್ರೇರಣೆಗಳಿಂದ ಕವಿಗಳು ಕವಿತೆಗಳನ್ನು ರಚಿಸುತ್ತಾರೆ. ಕವಿತೆಗಳು ಸಮಾಜ ಮುಖಿಯಾಗಿದೆಯೋ ಸಾಮಾಜಿಕ ನ್ಯಾಯದ ಪರವಾಗಿದೆಯೋ ಅದರ ವಿನ್ಯಾಸ ಯಾವ ಬಗೆಯೆಂಬುದನ್ನು ಪ್ರತಿಯೊಂದು ಕಾಲಘಟ್ಟದ ಚಾರಿತ್ರಿಕ ನೆಲೆಗಳನ್ನು ಹಿನ್ನೆಲೆಯಾಗಿರಿಸಿಕೊಂಡು ಪರಿಶೀಲಿಸುವ ಕುತೂಹಲದಿಂದ ಹೊರಟ ಅಧ್ಯಯನದ ಫಲವಾಗಿ ಕೆಲವರು ಪ್ರಮುಖ ಅಂಶಗಳನ್ನು ಗುರತಿಸಲು ಸಾಧ್ಯವಾಗುತ್ತದೆ. ಅವುಗಳನ್ನು ಪ್ರಧಾನವಾಗಿ ವರ್ಗ ಸಂವೇದನೆ, ಜಾತಿ ಸಂವೇದನೆ, ಸ್ತ್ರೀ ಸಂವೇದನೆ ಹಾಗೂ ವಿಡಂಬನೆ ಎಂದು ವರ್ಗೀಕರಿಸಿ ನೋಡಿದ್ದಾಗಿದೆ.

ಈ ರೀತಿಯ ವರ್ಗೀಕರಣದಲ್ಲಿ ಕವಿಗಳು ತಮ್ಮನ್ನು ಶೋಧಿಸಿಕೊಳ್ಳುವ ಬದುಕಿನ ಅಂತರ್ಯವನ್ನು ಒಡೆಯುವ ನೆಲೆಯಲ್ಲಿ ಅನುಸಂಧಾನ ನಡೆಸುತ್ತಾರೆ. ಇದಕ್ಕೂ ಕೂಡ ವರ್ತಮಾನ ಸಮಾಜವೇ ಬಿತ್ತಿಯಾಗಿರುತ್ತದೆಯೆಂಬುದನ್ನು ಮರೆಯುವಂತಿಲ್ಲ. ಕವಿಗಳು ತಾವು ಬದುಕುತ್ತಿರುವ ವ್ಯವಸ್ಥೆ ಮತ್ತು ವ್ಯವಸ್ಥೆಯ ಅಂಗವಾದ ವರ್ಗ–ವರ್ಣ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಒಳಸುಳಿಗಳನ್ನು ಶೋಧಿಸಿ, ಹೆಕ್ಕಿ ತೆಗೆದು ಚಿತ್ರಿಸುತ್ತಲೇ ಅವುಗಳ ಸುಧಾರಣೆಗೂ ತಕ್ಕ ಮಟ್ಟಿಗೆ ಹೋರಾಡುತ್ತಾರೆ. ಬಂಡಾಯ ಮನೋಧರ್ಮದ ಕವಿಗಳು ಸಾಮಾಜಿಕತೆಗೆ ಬದ್ಧರಾಗಿಯೂ ಜೀವನ ಸತ್ಯಗಳನ್ನು ಬದುಕಿನ ಒರೆಗಲ್ಲಿಗೆ ಹಚ್ಚಿ ಶೋಧಿಸಿಕೊಂಡು ನಡೆಯುವ ತಣ್ಣನೆಯ ಹೃದಯವನ್ನು ಮುಂದಿಡುತ್ತಾರೆ.

ಅಧ್ಯಾಯ-೬

# ಸಮಾರೋಪ

ಕನ್ನಡ ಸಾಹಿತ್ಯದ ಸುದೀರ್ಘ ಪರಂಪರೆಯಲ್ಲಿ ದಲಿತ-ಬಂಡಾಯ ಸಾಹಿತ್ಯ ಅತಿ ಮಹತ್ವದ ಚಾರಿತ್ರಿಕ-ಸಾಂಸ್ಕೃತಿಕ ದಾಖಲೆಗಳನ್ನು ನಿರ್ಮಾಣ ಮಾಡಿ ಸಾಹಿತ್ಯ ಮತ್ತು ಸಮಾಜಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದೆ. ಅದರಲ್ಲಿಯೂ ಕನ್ನಡ ಸಾಹಿತ್ಯದ ಕಾವ್ಯ ಪ್ರಕಾರವು ಕಾಲದಿಂದ ಕಾಲಕ್ಕೆ ತನ್ನ ಸಮಕಾಲೀನ ಒತ್ತಡಗಳಿಗೆಲ್ಲಾ ಸಮರ್ಥವಾಗಿ ಸ್ಪಂದಿಸುತ್ತ ಬಂದಿದೆ. ಕಾವ್ಯ ಪ್ರಕಾರದ ಈ ಕಾರ್ಯ ಪರಂಪರೆಗೆ ಮತ-ಧರ್ಮ-ಜಾತಿ ಮುಂತಾದ ಆಯಾ ಕಾಲಘಟ್ಟದ ವಿಚಾರಗಳು ಮುಖಾಮುಖಿಯಾಗಿವೆ. ಈ ಹಿನ್ನೆಲೆಯಲ್ಲಿ 'ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಅಸ್ತಿತ್ವದ ನೆಲೆಗಳು' ಎಂಬ ನನ್ನ ಈ ಮಹಾಪ್ರಬಂಧದ ಅಧ್ಯಯನದ ಫಲಿತಗಳನ್ನು ಈ ಕೆಳಕಂಡಂತೆ ಕಂಡುಕೊಂಡಿದ್ದೇನೆ.

ಹತ್ತೊಂಬತ್ತನೆಯ ಶತಮಾನದ ಹೊತ್ತಿಗೆ ಭಾರತವು ತನ್ನ ಪೌರಾತ್ಯ ಚಿಂತನೆಗಳಿಂದ ಪಾಶ್ಚಿಮಾತ್ಯ ಚಿಂತನೆಗಳ ಕಡೆ ಹೊರಳುತ್ತಿದ್ದಂತೆ ಭಾರತೀಯರ ಬೌದ್ಧಿಕ ಚಿಂತನೆಗಳು ಹೊಸ ನಮೂನೆಯಲ್ಲಿ ಮತ್ತು ಹಲವು ಆಯಾಮಗಳಲ್ಲಿ ಪ್ರಕಟಗೊಳ್ಳತೊಡಗಿದವು. ಸಾಹಿತ್ಯ ಎಂಬುದರ ಅರ್ಥವೇ ಭಿನ್ನವಾಗಿ ವ್ಯಾಖ್ಯಾನಗೊಳ್ಳತೊಡಗಿತು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾವ್ಯ ಎಂಬುದರ ಪ್ರಮುಖ ಉದ್ದೇಶ ಧರ್ಮ, ತತ್ವ, ನೀತಿಯನ್ನು ಹೇಳುವುದಕ್ಕೆ ಸೀಮಿತವಾಗಿದ್ದರೆ, ಹತ್ತೊಂಬತ್ತನೆಯ ಶತಮಾನದ ನಂತರ ಬಂದ ಆಧುನಿಕ ಕನ್ನಡ ಸಾಹಿತ್ಯದ ಉದ್ದೇಶ ಇವುಗಳಿಗಿಂತ ತುಂಬಾ ಭಿನ್ನವಾಗಿತ್ತು. ಅದರಲ್ಲಿಯೂ ನವೋದಯ, ಪ್ರಗತಿಶೀಲ ಮತ್ತು ನವ್ಯ ಸಾಹಿತ್ಯದ ನಂತರ ಬಂದ ದಲಿತ-ಬಂಡಾಯ ಸಾಹಿತ್ಯವು 'ಸಾಹಿತ್ಯ' ಎನ್ನುವುದನ್ನು ಸಮಾಜದಲ್ಲಿ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕೆ, ತಮ್ಮ ಹಕ್ಕನ್ನು ಪಡೆದು ಕಾಪಾಡಿಕೊಳ್ಳುವುದಕ್ಕೆ ಮುಖ್ಯವಾದ ಒಂದು ಅಸ್ತ್ರವಾಗಿ ಬಳಸಿಕೊಂಡಿತು. ಸಾಹಿತ್ಯ ಎಂಬುದರ ಉದ್ದೇಶವೇ ಬರಹ-ಅಭಿವ್ಯಕ್ತಿ ಮೂಲಕ ತಮ್ಮ ಅಸ್ಮಿತೆಯನ್ನು ಕಂಡುಕೊಳ್ಳುವುದಾಗಿತ್ತು. ಅದರಲ್ಲಿಯೂ ದಲಿತ-ಬಂಡಾಯ ಸಾಹಿತ್ಯದ ಕಾಲಘಟ್ಟದಲ್ಲಿ ಮಹಿಳಾ ಬರಹಗಾರರು ತಮ್ಮ ಕಾವ್ಯ, ಕವಿತೆ, ಕಥೆ, ಕಾದಂಬರಿ, ಆತ್ಮಕತೆ ಮುಂತಾದ ಸಾಹಿತ್ಯ ಪ್ರಕಾರದ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯಿಂದ ಶತಶತಮಾನಗಳಿಂದ ಕಳೆದು ಹೋಗಿರುವ ತಮ್ಮ ಬದುಕಿನ ನೈಜವಾದ ನೆಲೆಯನ್ನು ಅಥವಾ ಅಸ್ತಿತ್ವದ ನೆಲೆಗಳನ್ನು ಸಮರ್ಥವಾಗಿ ಶೋಧಿಸಿಕೊಳ್ಳುವ ಕೆಲಸವನ್ನು ಪ್ರಾಮಾಣಿಕವಾಗಿ ಮಾಡಿದರು. ಇದೇ ಕೆಲಸವನ್ನು ಪುರುಷ ಬರಹಗಾರರು ಮಾಡಿದ್ದರೂ ಕೂಡ ಪುರುಷ

ಬರಹಗಾರರು ಗುರುತಿಸಿ ಚಿತ್ರಿಸಿರುವ ಮಹಿಳಾ ಅಸ್ತಿತ್ವದ ನೆಲೆಗಳಿಗೂ ಮಹಿಳಾ ಕವಯತ್ರಿಯರು ಗುರುತಿಸಿ ಚಿತ್ರಿಸಿರುವ ಮಹಿಳಾ ಅಸ್ತಿತ್ವದ ನೆಲೆಗಳ ಚಿತ್ರಣದಲ್ಲಿ ತುಂಬಾ ಭಿನ್ನತೆ ಇದೆ. ಅದನ್ನು ದಲಿತ-ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಈ ಪ್ರಬಂಧದಲ್ಲಿ ಗುರುತಿಸಿದ್ದೇನೆ.

ದಲಿತ ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳನ್ನು ಗುರುತಿಸುತ್ತ ಬಹು ಮುಖ್ಯವಾದ ಸೂಕ್ಷ್ಮ ವಿಚಾರಗಳು ನಮ್ಮನ್ನು ಕಾಡಿವೆ. ಇಪ್ಪತ್ತನೇ ಶತಮಾನದ ಕನ್ನಡ ಸಾಹಿತ್ಯ ಪ್ರಮುಖವಾಗಿ ಪ್ರಗತಿಶೀಲ, ದಲಿತ-ಬಂಡಾಯ, ಮಹಿಳಾ ಚಳವಳಿ ಎಂಬ ನಾಲ್ಕು ಆಂದೋಲನವನ್ನು ಪ್ರಮುಖವಾಗಿ ಕಂಡಿದೆ. ಈ ನಾಲ್ಕು ಪರಂಪರೆಗಳಲ್ಲಿ ಯಾವುದರ ಸಾಧನೆ ಹೆಚ್ಚು, ಯಾವುದರ ಕೊಡುಗೆ ಅಷ್ಟು ಮೌಲಿಕವಾದುದಲ್ಲ. ಎಂಬ ಚಿಂತನೆಗಿಂತ; ಇವು ಕನ್ನಡ ಸಂಸ್ಕೃತಿಯನ್ನು ಮತ್ತು ಕನ್ನಡಿಗರ ಸಂವೇದನೆಯನ್ನು ಎಷ್ಟರ ಮಟ್ಟಿಗೆ ತಟ್ಟಿವೆ ಎಂಬುದು ತುಂಬಾ ಮುಖ್ಯವಾದದು. ದಲಿತ-ಬಂಡಾಯ ಸಾಹಿತ್ಯ ಕುರಿತು ವಿದ್ವಾಂಸರ ಕೆಲ ಮಹತ್ವದ ಚರ್ಚೆಯ ಜೊತೆಗೆ ದಲಿತ ಸಾಹಿತ್ಯ ಮತ್ತು ಬಂಡಾಯ ಸಾಹಿತ್ಯ ಕುರಿತು ಕೆಲಸ ವಿದ್ವಾಂಸರು ಮಂಡಿಸಿದ ವಿಚಾರ ಹಾಗೂ ಇವೆರಡು ವಿಶಿಷ್ಟ ಸಾಹಿತ್ಯ ಪ್ರವಾಹದಲ್ಲಿ ಹರಿದು ಬಂದ ಮಹಿಳಾ ಕವಿತೆಗಳನ್ನು ಕುರಿತು ಇದುವರೆಗಿನ ಅಧ್ಯಯನದ ಸಮೀಕ್ಷೆ ಎಂಬ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ. ಆ ಮೂಲಕ ದಲಿತ-ಬಂಡಾಯ ಸಾಹಿತ್ಯದ ತಾತ್ವಿಕತೆಗಳನ್ನು ಗ್ರಹಿಸುತ್ತ ಹೋಗಿದ್ದೇನೆ. ದಲಿತ ಬಂಡಾಯದ ಆರಂಭದ ಕಾಲಘಟ್ಟದಲ್ಲಿ ಮಹಿಳೆ ಜಮೀನ್ದಾರರ, ಮೇಲಧಿಕಾರಿಗಳ, ಪುರೋಹಿತ ಶಾಹಿಗಳ, ವರ್ಗಗಳಿಂದ ಶೋಷಣೆ, ಅತ್ಯಾಚಾರಕ್ಕೊಳಗಾಗುವಳು ಎಂಬ ಸಾಮಾನ್ಯ ಮಟ್ಟದ ಚಿತ್ರಣಗಳು ಹೆಚ್ಚಾಗಿವೆ. ಕೆಲವರು ಈ ವ್ಯವಸ್ಥೆಯಿಂದ ಹೊರತು ಪಡಿಸಿಯೂ ಕೂಡ ಗಂಡನ, ಗಂಡಸರ, ಧರ್ಮ, ಪುರುಷ ಪ್ರಧಾನ ನಿರ್ಮಿತ ವ್ಯವಸ್ಥೆಯ ಸ್ವಾರ್ಥಗಳಿಗೆ ಬಲಿಯಾಗುತ್ತಿರುವುದನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ದಲಿತರಂತೆ ಎಲ್ಲ ಜಾತಿಗಳ ಮಹಿಳೆಯರೂ ಅಸ್ಪೃಶ್ಯರು, ಶೋಷಿತರೆಂಬ ಅರಿವು ದಲಿತ-ಬಂಡಾಯದ್ದು ಆಗಿದೆ. ಆ ಹಿನ್ನೆಲೆಯಲ್ಲಿ ಕವನಗಳು ವಸ್ತು ಆಶಯವನ್ನು ಪ್ರತಿಬಿಂಬಿಸುತ್ತಿವೆ. ಬಂಡಾಯ ಕವನಗಳ ಮುಖ್ಯ ದ್ರವ್ಯ, ನಮ್ಮ ಸಮಾಜ ವ್ಯವಸ್ಥೆಯ ಸಾಂಸ್ಥಿಕ ಹಾಗೂ ಸ್ಥಾವರಕಲ್ಪನೆಯ ಭಂಜನೆಯ ಮನೋಧರ್ಮದಿಂದ ಬಂದಿದೆ.

ಹಳೆಗನ್ನಡ ಕೃತಿಗಳಾದಿಯಾಗಿ ನಂತರ ಬಂದ ಅಕ್ಕಮಹಾದೇವಿ, ಸೂಳೆಸಂಕವ್ವೆ, ಹೆಳವನಕಟ್ಟೆ ಗಿರಿಯಮ್ಮ, ಸಂಚಿಹೊನ್ನಮ್ಮ ಮೊದಲಾದ ಕವಯತ್ರಿಯರ ಕಾವ್ಯ ಕೃತಿಗಳಲ್ಲಿ

ಅಭಿವ್ಯಕ್ತಗೊಂಡ ಮಹಿಳಾ ಅಸ್ತಿತ್ವದ ತಾತ್ವಿಕ ನೆಲೆಗಳನ್ನು ಸ್ಥೂಲವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ದಲಿತ ಬಂಡಾಯ ಕವನ ಸಂಪ್ರದಾಯದೊಳಗೆ ಅಳವಡುವಂಥ ಒಲವು ಸ್ತ್ರೀವಾದದ್ದು. ಸ್ತ್ರೀವಾದಿ ದೃಷ್ಟಿಕೋನ-ವಿಮರ್ಶೆ ಮತ್ತು ವೈಚಾರಿಕ ಬರಹಗಳಿಗಿಂತ ಕವಿತೆಗಳು ಹೆಚ್ಚಾಗಿ ಹೊರಬರುತ್ತಿರುವುದು ಈ ಸಂವೇದನೆಯ ಸ್ವರೂಪ ಮತ್ತು ಹಿನ್ನೆಲೆಯ ದೃಷ್ಟಿಯಿಂದ ಅರ್ಥಪೂರ್ಣವಾಗಿದೆ. ಇಲ್ಲೂ ಸರ್ವಮಂಗಳ ಮತ್ತು ವೈದೇಹಿ ಇನ್ನೂ ನವ್ಯಪರಿಧಿಯೊಳಗೇ ಸುತ್ತುತ್ತಿದ್ದಾರೆ ಎಂಬುದು ಈ ಪ್ರಬಂಧದ ಅಧ್ಯಯನದಿಂದ ಕಂಡಬಂದಿದೆ. ಇದನ್ನು ಈ ಪ್ರಬಂಧದಲ್ಲಿ ಸೋದಾಹರಣವಾಗಿ ವಿವರಿಸಿದ್ದೇನೆ.

ವಿಜಯಾ ದಬ್ಬೆ, ಶಶಿಕಲಾ ವೀರಯ್ಯ ಸ್ವಾಮಿ, ಭಾಗ್ಯ, ಎಚ್.ಎಲ್ ಪುಷ್ಪ, ಮಾಲತಿ ಪಟ್ಟಣಶೆಟ್ಟಿ, ಎಚ್.ಎಸ್. ಮುಕ್ತಾಯಕ್ಕ, ಸವಿತಾ ನಾಗಭೂಷಣರಂಥವರು ಈ ಒಲವಿನಿಂದ ಬರೆಯುತ್ತಿದ್ದರೂ ಇವರೆಲ್ಲರನ್ನು ಬರಿಯ ಸ್ತ್ರೀವಾದಿಗಳಷ್ಟೇ ಎಂದು ವರ್ಣಿಸುವಂತಿಲ್ಲ. ಇವರಲ್ಲಿ ಭಾಗ್ಯ ಮತ್ತು ಸವಿತಾರ ಸಾಧನೆ ಮಹತ್ವದ್ದೆಂದು ನನ್ನ ಅಧ್ಯಯನದ ಗ್ರಹಿಕೆಯಿಂದ ತಿಳಿದು ಬಂದಿದೆ. ಮಲ್ಲಿಕಾ ಘಂಟಿ ಅವರು ಸ್ತ್ರೀವಾದಿ ದೃಷ್ಟಿಕೋನದ ಜೊತೆಗೆ ಮಾರ್ಕ್ಸ್‌ವಾದಿ ನೆಲೆಯಲ್ಲಿ ಕಾವ್ಯ ಕೃಷಿಯಲ್ಲಿ ತೊಡಗಿದ್ದು, ಪುರುಷ ಪ್ರಧಾನ ವ್ಯವಸ್ಥೆಯ ವೈರುಧ್ಯಗಳಿಗೆ ಪರಿಣಾಮಕಾರಿಯಾಗಿ ಪ್ರತಿಕ್ರಿಯಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಬಿಂಬಿತವಾಗಿರುವ ಮಹಿಳಾ ಅಸ್ತಿತ್ವದ ನೆಲೆಗಳನ್ನು ಈ ಪ್ರಬಂಧದಲ್ಲಿ ಶೋಧಿಸಿದ್ದೇನೆ.

ಒಟ್ಟು ವ್ಯವಸ್ಥೆಯೊಂದಿಗೆ ಅಂತರ ಸಂಬಂಧ ಸಾಧಿಸಿದ ಪ್ರಾಮುಖ್ಯತೆ ದಲಿತ-ಬಂಡಾಯ ಕಾವ್ಯದ್ದಾಗಿದೆ. ಪಂಪನಿಂದ ಇಂದಿನ ದಲಿತ ಬಂಡಾಯ ಕಾವ್ಯದವರೆಗೆ ಸಾಗಿ ಬಂದ ಕಾವ್ಯ ಮನೋಧರ್ಮ ತನ್ನ ಇತಿಹಾಸದಲ್ಲಿ ಮಹತ್ವದ ತಿರುವನ್ನು ಪಡೆದಿದ್ದು, ದಲಿತ-ಬಂಡಾಯ ಸಂದರ್ಭದಲ್ಲಿಯೇ ಅನೇಕ ಹಂತಗಳನ್ನು ದಾಟ ಬಂದ ಕನ್ನಡ ಕಾವ್ಯ ಜನಪರ ಕಾಳಜಿಯನ್ನು ಇಟ್ಟುಕೊಂಡು ಪ್ರತಿಕ್ರಿಯಿಸಿದ್ದು ತುಂಬಾ ಕಡಿಮೆಯೇ ಎಂದು ಹೇಳಬೇಕು. ವಚನ, ಕೀರ್ತನಗಳಂತಹ ಕಾವ್ಯ ಮಾದರಿಗಳನ್ನು ಬಿಟ್ಟರೆ ಕನ್ನಡದ ಬಹುಪಾಲು ಕಾವ್ಯ ರಂಗುರಂಗಿನ ಮಹಲಿನಲ್ಲಿ ಕನಸು ಹೆಣೆಯುತ್ತ ಕುಂತಿದ್ದೇ ಹೆಚ್ಚು. ಆ ನಿಲೆಯಲ್ಲಿ ರಚನೆಯಾದುದ್ದೇ ಅಧಿಕ. ಇಲ್ಲಿ ಸಾಮಾಜಿಕ ಕಳಕಳಿಯ ಕುರಿತು ದಲಿತ ಶೋಷಿತರ ನೋವಿನ ಕುರಿತು ಅಂತಃಕರಣದ ದನಿಗೂಡಿಸಿದ್ದು ದಲಿತ-ಬಂಡಾಯ ಕವಿತೆಗಳು ಎಂಬುದನ್ನು ಗಟ್ಟಿಯಾಗಿ ಹೇಳುವುದರ ಔಚಿತ್ಯ ಇಲ್ಲಿ ಎದ್ದು ಕಾಣುತ್ತದೆ.

ಎಲ್ಲಾ ದೃಷ್ಟಿಯಿಂದ ದಲಿತ-ಬಂಡಾಯ ಕವಿತೆಗಳು ಕನ್ನಡವಲ್ಲಿ ಹೊಸ ಮೈಲಿಗಲ್ಲನ್ನು ನಿರ್ಮಿಸಿವೆ. ಆಕೃತಿ ಮತ್ತು ಆಶಯ ಎರಡರಲ್ಲಿಯೂ ನಿಚ್ಚಳವಾಗಿ ಹೊಸತನವನ್ನು ಸಾಧಿಸಿವೆ. ಈ ಹಿನ್ನೆಲೆಯಲ್ಲಿ ಕನ್ನಡ ಕಾವ್ಯ ದಲಿತ-ಬಂಡಾಯ ಕಾಲಘಟ್ಟದಲ್ಲಿ ತನ್ನ ಅಭಿವ್ಯಕ್ತಿ ಕ್ರಮವನ್ನು ವಸ್ತುಭಾಷೆಯಲ್ಲಿ ಸಂಪೂರ್ಣವಾಗಿ ಸ್ಥಿತ್ಯಂತರ ಕಂಡಿತು. ಅಷ್ಟೆ ಅಲ್ಲದೇ. ಬಹುದೊಡ್ಡ ಪ್ರಮಾಣದಲ್ಲಿ ವೈಚಾರಿಕತೆಯನ್ನು ಬೆಂಬಲಿಸಿತು. ಕೆಳಸಮುದಾಯದ ಸಾಂಸ್ಕೃತಿಕ ಲೋಕವನ್ನು ಪ್ರತಿಭಟನೆಯ ಧ್ವನಿಯಲ್ಲಿ ಪುನರ್‌ನಿರ್ಮಿಸಿತು. ನಮ್ಮ ಒಟ್ಟು ಆಧುನಿಕ ಕನ್ನಡ ಕಾವ್ಯ ಪರಂಪರೆಯಲ್ಲಿಯೇ ಈ ಮಟ್ಟದ ಪ್ರತಿಭಟನೆ ತುಂಬ ಅಪರೂಪ. ದಲಿತ-ಬಂಡಾಯ ಕವಿತೆಗಳ ವಿಶೇಷ ಸಾಧನೆಯೆಂದರೆ, ದಲಿತರಿಗೆ ಮತ್ತು ಶೋಷಿತ ಸಮುದಾಯದ ಅಧೋಜಗತ್ತನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದು, ಇದರಿಂದಾಗಿ ದಲಿತ-ಬಂಡಾಯ ಕವಿತೆಗಳು ದಲಿತರ ಸ್ವಾಭಿಮಾನದ ಪ್ರತೀಕವಾಗಿ ಕಂಡು ಬಂದವು. ಆ ಮೂಲಕ ಕನ್ನಡದೊಳಗೆ ಹೊಸ ಅನುಭವ ಲೋಕವೊಂದು ತೆರೆದುಕೊಂಡಿತು. ಬಹುಶಃ ವಚನ ಸಾಹಿತ್ಯವನ್ನು ಬಿಟ್ಟರೆ ಪ್ರತಿಭಟನೆಯ ದನಿ ಗಟ್ಟಿಯಾಗಿ ಮತ್ತು ಪ್ರಾಮಾಣಿಕವಾಗಿ ಕಂಡು ಬಂದದ್ದು ದಲಿತ-ಬಂಡಾಯ ಸಾಹಿತ್ಯ ಸಂದರ್ಭದಲ್ಲಿಯೇ ಹೀಗಾಗಿ ಇಡಿಯಾದ ಕಾವ್ಯವನ್ನು ನೋಡುವ ಗ್ರಹಿಸುವ ಹೊಸ ವಿಧಾನಗಳೇ ದಲಿತ-ಬಂಡಾಯ ಸಂದರ್ಭದಲ್ಲಿ ಚಾಲ್ತಿಗೆ ಬಂದವು. ನಮ್ಮ ವಿಮರ್ಶೆಯ ಮಾನದಂಡಗಳೆಲ್ಲ ಹೊಸ ಅರ್ಥವಂತಿಕೆಯನ್ನು ಪಡೆದುಕೊಂಡವು. ಒಟ್ಟಾರೆಯಾಗಿ ಹೇಳಬೇಕಾದರೆ ದಲಿತ-ಬಂಡಾಯ ಕವಿತೆಗಳು ಅಂತಃ ಸತ್ವದಿಂದ ಬದುಕನ್ನು ಕಾಣುವ ವಿಧಾನದಲ್ಲಿಯೇ ಮುಖ್ಯ ಪಲ್ಲಟಗಳನ್ನು ತಂದಿದೆ.

ದಲಿತ-ಬಂಡಾಯ ಕವಿತೆಗಳ ಮುಖ್ಯ ಶಕ್ತಿಯಿರುವುದು ಅದರ ಪ್ರತಿಭಟನಾತ್ಮಕ ಮನೋಧರ್ಮದಲ್ಲಿ ಪ್ರತಿಭಟನೆ ಮನುಷ್ಯ ಜೀವಂತಿಕೆಯ ಸಂಕೇತವೆಂದು ಈ ಕವಿತೆಗಳು ನಂಬಿವೆ. ಹೀಗಾಗಿಯೇ ಬಂಡವಾಳಶಾಹಿ ಪ್ರಭುತ್ವ ಸಾಮಾಜಿಕ ಅನಿಷ್ಟಗಳ ವಿರುದ್ಧ ಪ್ರತಿಭಟನೆಯ ಹಲವು ಮಾದರಿಗಳು ಕಾಣಿಸಿಕೊಂಡಿವೆ.

ಹೊಸಗನ್ನಡ ಕಾವ್ಯ ಪರಂಪರೆಯಲ್ಲಿಯೇ ಇಷ್ಟು ದೊಡ್ಡ ಪ್ರಮಾಣದ ಪ್ರತಿಭಟನೆ ಕಂಡು ಬಂದಿದ್ದು, ಬಹುಶಃ ದಲಿತ-ಬಂಡಾಯದ ಸಂದರ್ಭದಲ್ಲಿಯೇ. ಅಸಮಾನತೆಯ ಹಿನ್ನೆಲೆಯಿಂದ ಬಂದ ಬಹುತೇಕ ದಲಿತ ಬಂಡಾಯ ಕವಿಗಳಿಗೆ ಇದು ಅನಿವಾರ್ಯವಾದ ಅಭಿವ್ಯಕ್ತಿಯಾಗಿತ್ತು. ಈ ಅಭಿವ್ಯಕ್ತಿ ಒಂದು ಸೂಕ್ತವಾದ ಕಾವ್ಯವನ್ನು ಕನ್ನಡಕ್ಕೆ ದಕ್ಕಿಸಿದೆ. ದಮನಿತ ಲೋಕದ ಜೀವನಾನುಭವ ಅತ್ಯಂತ ನೋವಿನ ನೆನಪುಗಳನ್ನು ಇಟ್ಟುಕೊಂಡಿರುವಂಥದ್ದು. ಇವರ ಅನನ್ಯ

ಸಂಸ್ಕೃತಿ ಎಂಥ ಕಡುಕಷ್ಟದಲ್ಲೂ ಬದುಕುವ ವಿಶ್ವಾಸವನ್ನು. ಇಂಥ ನೆನಪು ಮತ್ತು ವಿಶ್ವಾಸವನ್ನು ದಲಿತ-ಬಂಡಾಯ ಕವಿತೆಗಳು ತೀವ್ರವಾಗಿ ಚಿತ್ರಿಸಿವೆ.

ಪಾಶ್ಚಾತ್ಯರಲ್ಲಿ ಸ್ತ್ರೀವಾದಿ ಚಿಂತನೆ ಪ್ರಾರಂಭವಾಗಿ ಹಲವಾರು ದಶಕಗಳೆ ಕಳೆದಿವೆ. ಆದರೆ ಕನ್ನಡದೊಳಗೆ ಇದರ ನಿಜವಾದ ಚರ್ಚೆ ಆರಂಭವಾದದ್ದು ಸ್ವಲ್ಪ ತಡವಾಗಿದೆ ಎಂಬುದು ಗಮನಿಸಬೇಕಾದ ಅಂಶ. ಆದರೆ ಈ ಚರ್ಚೆಗೆ ಗಟ್ಟಿಯಾದ ಧ್ವನಿಯನ್ನು ತಂದುಕೊಟ್ಟದ್ದು, ದಲಿತ ಬಂಡಾಯ ಕಾಲಘಟ್ಟದಲ್ಲಿ ಹೀಗಾಗಿ ದಲಿತ-ಬಂಡಾಯ ಕಾವ್ಯ ಪೌರಾಣಿಕ, ಐತಿಹಾಸಿಕ ಸ್ತ್ರೀ ಪಾತ್ರಗಳ ಬದುಕಿನ ವೈರುಧ್ಯಗಳನ್ನು ಪ್ರತಿಭಟನಾತ್ಮಕವಾಗಿ ಅಭಿವ್ಯಕ್ತಿಸಿದ್ದನ್ನು ಕಾಣುತ್ತೇವೆ.

ದಲಿತ ವರ್ಗದ ಹೆಣ್ಣು ಅದರಲ್ಲೂ ಕೆಳವರ್ಗದ ಹೆಣ್ಣೆಂದರೆ ಶೋಷಣೆಗೆ ಒಳಗಾದವಳೇ ಯೌವ್ವನ ತುಂಬಿದ ಹೆಣ್ಣು ಸಾಹುಕಾರನ ಸ್ವತ್ತಾಗುತ್ತಾಳೆ. ದಲಿತ ಕವಿತೆಗಳು ತಮ್ಮ ರೋಷ, ಆಕ್ರೋಶ, ದ್ವೇಷಗಳನ್ನು ಕೇವಲ ಗಂಡು ಜಾತಿಗೆ ಮಾತ್ರ ಸೀಮಿತವೆಂದು ತಿಳಿಯದೇ ಹೆಣ್ಣನ್ನು ಕೇಂದ್ರವಾಗಿಟ್ಟುಕೊಂಡು, ಒಂದು ಸಂದರ್ಭದಲ್ಲಿ ತಾಯಿ, ಅಕ್ಕ, ಮಗಳು, ಹೆಂಡತಿ, ಪ್ರೇಯಸಿ ಇವೆಲ್ಲ ಸ್ಥಾನಮಾನ ಕೊಟ್ಟಿರುವರು. ತಮಗೆ ಎಷ್ಟೋ ನೋವು, ತಳಮಳ, ಆತಂಕಗಳಿದ್ದರೂ ಒಂದು ಕ್ಷಣ ಹೆಣ್ಣಿನ ಬಗ್ಗೆ ಇರುವ ಪ್ರೀತಿಯನ್ನು ವ್ಯಕ್ತಪಡಿಸುತ್ತಾರೆ. ಅದಕ್ಕೆ ಉದಾಹರಣೆ ಸಿದ್ಧಲಿಂಗಯ್ಯನವರು 'ಸುಟ್ಟಾವು ಬೆಳ್ಳಿ ಕಿರಣ' ಹೆಣ್ಣಿನ ಪ್ರೀತಿಯ ಪ್ರತೀಕವಾದುದಾಗಿದೆ. ದಲಿತ ಸಾಹಿತ್ಯ ಸಂದರ್ಭದಲ್ಲಿ ಪ್ರೀತಿ-ಪ್ರೇಮ ಕೆಲವು ಅಂಶಗಳು ಕಾಣಸಿಗುತ್ತವೆ.

ಬಂಡಾಯ ಕವಿತೆಗಳು ಹೆಚ್ಚಾಗಿ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಮುಸ್ಲಿಂ ಎಲ್ಲಾ ಅಂಶಗಳನ್ನು ಒಳಗೊಂಡಿದೆ. ಬಂಡಾಯ ಕವಿಗಳು ಪ್ರಮುಖವಾಗಿ ಅನ್ಯಾಯ, ಅತ್ಯಾಚಾರವನ್ನು ಖಂಡಿಸಿ, ಕವನಗಳ ಮೂಲಕ ಸಿಡಿದೆದ್ದರು. ಸುಕನ್ಯಾ ಮಾರುತಿ, ವಿಜಯಶ್ರೀ ಸಬರದ, ಬಿ.ಟಿ. ಲಲಿತಾ ನಾಯಕ, ಎಚ್.ಎಸ್. ಮುಕ್ತಾಯಕ್ಕನಂತಹವರು ಪರಂಪರೆ, ಮೌಢ್ಯತೆ, ಪೌರಾಣಿಕತೆ ಇವೆಲ್ಲವುಗಳನ್ನು ಕೇಂದ್ರವಾಗಿಟ್ಟುಕೊಂಡು ಸಿಡಿದೆದ್ದರು. ಕವಿತೆ ರಚಿಸಿದರು. ಆ ಮೂಲಕ ಪ್ರತಿಧ್ವನಿಸಿದರು. ಆದರೆ ಈ ಕುರಿತು ಕವಿಗಳು ಪ್ರತಿಕ್ರಿಯಿಸಿದ್ದು, ಅಭಿವ್ಯಕ್ತಿಸಿದ್ದು, ಪ್ರಮಾಣದಲ್ಲಿ ಸ್ವಲ್ಪ ಕಡಿಮೆಯೇ ಎಂದು ಹೇಳಬೇಕು.

ದಲಿತ-ಬಂಡಾಯದ ಮಹಿಳಾ ಕವಿತೆಯ ಧೋರಣೆಗಳು ವಿಭಿನ್ನವಾಗಿದ್ದು, ಅದು ತನ್ನ ಭಾಷೆಯನ್ನು ಕೂಡ ಬೇರೊಂದು ರೀತಿಯಲ್ಲಿ ಹದಗೊಳಿಸಬೇಕಾಯಿತು. ಅದಕ್ಕಾಗಿ ಅದು ಗ್ರಾಮೀಣ ಭಾಷಾ ಶೈಲಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿತು. ಶಿಷ್ಟ ಭಾಷೆಯನ್ನು ಸ್ವಲ್ಪ

ಗೌಣಗೊಳಿಸಿಕೊಂಡಿತು. ಅಸಮಾನದಿಂದ ನೋಡಿತು. ದಲಿತ-ಬಂಡಾಯ ಕಾವ್ಯ ಅಂಥ ಜಗತ್ತಿನಿಂದಲೇ ತನ್ನ ನುಡಿಗಟ್ಟನ್ನು ಸ್ವೀಕರಿಸಿಕೊಂಡಿದ್ದು ಮಹತ್ವದ ಸಂಗತಿಯಾಗಿದೆ.

ಈ ಹಿಂದಿನ ಕಾವ್ಯದಲ್ಲಿ ಮಹಿಳಾ ಪರ ಆಶಯಗಳು ಇರಲಿಲ್ಲವೆಂದಲ್ಲ. ಆದರೆ ದಲಿತ-ಬಂಡಾಯ ಕಾವ್ಯದಲ್ಲಿ ಇದರ ಪ್ರಮಾಣ ಹೆಚ್ಚು ಹೆಚ್ಚಾಗಿವೆ. ಸಂಪ್ರದಾಯದ ಮೌಢ್ಯತೆಯನ್ನು ಅಲ್ಲಗಳೆಯುವ ಅಧಿಕಾರ ಶಾಹಿಯ ಕುತಂತ್ರವನ್ನು ಬಯಲಿಗೆಳೆಯುವ ಈ ಕವಿತೆಗಳು ಪ್ರಗತಿಪರವಾದ ಸಮುದಾಯ ನಿಷ್ಠವಾದ ಆಶಯಗಳನ್ನು ಮಂಡಿಸಿವೆ.

ದಲಿತ-ಬಂಡಾಯ ಕವಿತೆಗಳಲ್ಲಿ ಮಹಿಳಾ ಪರ ವಿಶಿಷ್ಟತೆ ಮತ್ತು ಪ್ರಸ್ತುತತೆಯನ್ನು ಅಧ್ಯಯನ ಮಾಡಲು ಈ ಸಂಶೋಧನಾ ಮಹಾ ಪ್ರಬಂಧದಲ್ಲಿ ಪ್ರಯತ್ನಿಸಿದ್ದೇನೆ. ಮುಖ್ಯವಾಗಿ ದಲಿತ-ಬಂಡಾಯ ಕವಿತೆಗಳು ಮಹಿಳೆಯನ್ನು ವಿಭಿನ್ನ ನೆಲೆಗಳಲ್ಲಿ ಹೇಗೆ ವಿಶಿಷ್ಟಪೂರ್ಣವಾಗಿ ಅಭಿವ್ಯಕ್ತಿಸಿವೆ ಎಂಬುದನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಅನುಸಾರವಾಗಿ ವಿವೇಚನೆಗೆ ಒಳಪಡಿಸಿದ್ದೇನೆ. ಅಲ್ಲದೇ ಮಹಿಳೆಯ ಸಾಮಾಜಿಕ ಬದುಕಿನ ಸ್ಥಿತ್ಯಂತರಗಳ ಸೂಕ್ಷ್ಮ ವಿವೇಚನೆಯನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದ್ದು, ಮಹಿಳೆಯರ ಅಧೋ ಜಗತ್ತಿನ ತಲಸ್ಪರ್ಷ ಅಧ್ಯಾಯವನ್ನು ವಿಭಿನ್ನ ನೆಲೆಗಳಿಂದ ಶೋಧಿಸುವ ಕಾರ್ಯವನ್ನು ಇಲ್ಲಿ ಕೈಗೊಂಡಿದ್ದೇನೆ.

*********

## ಪರಾಮರ್ಶನ ಗ್ರಂಥಗಳು


೧) ಅಂಜನಪ್ಪ ಬಿ.ಹೆಚ್. (ಡಾ.) - ಮಹಿಳೆ ಮತ್ತು ದುಡಿಮೆ - ದೇಸಿ ಪುಸ್ತಕ ಬೆಂಗಳೂರು - ೨೦೦೯

೨) ಅರ್ಜುನ ಗೊಳಸಂಗಿ (ಡಾ.) - ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ - ವಿಮೋಚನಾ ಪ್ರಕಾಶನ ಅಥಣಿ-೨೦೦೦

೩) ಅರ್ಜುನ ಗೊಳಸಂಗಿ (ಡಾ.) (ಸಂ.) - ದಲಿತಜ್ಞ, ದಲಿತ ಸಾಹಿತ್ಯ ಪರಿಷತ್ತು, ರಾಜ್ಯಘಟಕ, ಗದಗ-೨೦೦೦

೪) ಅರ್ಜುನ ಗೊಳಸಂಗಿ (ಡಾ.) - ನಮ್ಮಜ್ಜಿ ಅವ್ವ ನನ್ನಾಕೆ- ದಲಿತ ಸಾಹಿತ್ಯ ಪರಿಷತ್ತು, ರಾಜ್ಯ ಘಟಕ, ಗದಗ-೨೦೧೧

೫) ಅನುಸೂಯಾ ಎಂ. ಕದಂ (ಡಾ.) - ಮಹಿಳಾ ಶೋಷಣೆಯ ನೆಲೆಗಳು - ಸಖಿ ಪ್ರಕಾಶನ ಹೊಸಪೇಟೆ - ೨೦೧೧

೬) ಅಮರೇಶ ನುಗಡೋಣಿ (ಡಾ.) (ಸಂ.) - ಕನ್ನಡ ಸಂಶೋಧನೆಯ ವೈಧಾನಿಕತೆಗಳು - ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೮

೭) ಅರವಿಂದ ಮಾಲಗತ್ತಿ - ಮೂಕನಿಗೆ ಬಾಯಿ ಬಂದಾಗ - ಶೈಲ ಪ್ರಕಾಶನ ಮುದ್ದೇಬಿಹಾಳ-೧೯೮೧

೮) ಅರವಿಂದ ಮಾಲಗತ್ತಿ - ಮೂರನೇ ಕಣ್ಣು - ಶೈಲ ಪ್ರಕಾಶನ ಮುದ್ದೇಬಿಹಾಳ-೧೯೯೬

೯) ಅಲ್ಲಮಪ್ರಭು ಬೆಟ್ಟದೂರು - ಇದು ನನ್ನ ಭಾರತ - ಸಂಕ್ರಮಣ ಪ್ರಕಾಶನ ಧಾರವಾಡ-೧೯೭೭

೧೦) ಅಲ್ಲಮಪ್ರಭು ಬೆಟ್ಟದೂರು - ಗುಲಗಂಜಿ - ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ ಗುಲಬರ್ಗಾ - ೨೦೦೯

೧೧) ಆಮೂರ ಜಿ.ಎಸ್. - ಅಮೃತವಾಹಿನಿ - ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು - ೨೦೦೦

೧೨) ಉಷಾ - ತೊಗಲು ಬೊಂಬೆಯ ಆತ್ಮಕತೆ - ಪುಸ್ತಕ ಚಿಲುಮೆ ಮೈಸೂರು- ೧೯೯೮

೧೩) ಉಷಾ, ಎಂ. (ಡಾ.) - ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ - ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾಲಯ-೨೦೦೫

| | | | |
|---|---|---|---|
| ೧೪) | ಕಮಲಾ ಎಂ.ಆರ್. | – | ಶಕುಂತಲೋಪಾಖ್ಯಾನ – ಕಲ್ಯಾಣಿ ಪ್ರಕಾಶನ, ಬೆಂಗಳೂರು–೧೯೯೮ |
| ೧೫) | ಕಾಶಿನಾಥ ಅಂಬಲಗೆ | – | ಹಾಡುಗಳು ಉಳದಾವ – ಪ್ರಗತಿ ಪ್ರಕಾಶನ ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರಗಿ–೨೦೦೭ |
| ೧೬) | ಕುವೆಂಪು, ಮಾಸ್ತಿ (ಸಂ.) | – | ಕುಮಾರವ್ಯಾಸ ಮಹಾಕವಿಯ ಕರ್ನಾಟಕ ಭಾರತ ಕಥಾ ಮಂಜರಿ – ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು – ೨೦೦೦ |
| ೧೭) | ಕುವೆಂಪು | – | ರಾಮಾಯಣ ದರ್ಶನ – ಪುಸ್ತಕ ಪ್ರಾಧಿಕಾರ ಕನ್ನಡ ಭವನ ಬೆಂಗಳೂರು – ೨೦೦೪ |
| ೧೮) | ಗವಿಸಿದ್ಧ. ಎನ್. ಬಳ್ಳಾರಿ | – | ಈ ಮಣ್ಣು ಅಪ್ಪಿಕೊಳ್ಳುವ ಮುನ್ನ – ಲೋಹಿಯಾ ಪ್ರಕಾಶನ, ಬಳ್ಳಾರಿ–೨೦೦೪ |
| ೧೯) | ಚನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ | – | ಗರತಿಯ ಹಾಡು – ಜೈ ಕರ್ನಾಟಕ ಗ್ರಂಥಮಾಲೆ ಧಾರವಾಡ – ೧೯೩೧ |
| ೨೦) | ಚಂದ್ರಶೇಖರ ಟಿ.ಆರ್. (ಡಾ.) (ಸಂ.) | – | ದಲಿತ ಅಧ್ಯಯನ – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೦೫ |
| ೨೧ | ಚಿತ್ಕಳಾ ಜೆ. ಮಠಪತಿ (ಡಾ.) (ಸಂ) | – | ಆಧುನಿಕ ಕವಿತೆಗಳ ಸಂಗ್ರಹ – ನಿರ್ದೇಶಕರು, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ–೨೦೦೯ |
| ೨೨) | ಚಿನ್ನಸ್ವಾಮಿ ಸೋಸಲೆ. ಎನ್ (ಡಾ.) | – | ದಲಿತರ ಬದುಕು ಮೆಲಕು– ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೨೦೦೯ |
| ೨೩) | ಚೆನ್ನಣ್ಣ ವಾಲೀಕಾರ– | – | ಬಂಡೆದ್ದ ದಲಿತರ ಬೀದಿ ಹಾಡುಗಳು – ವಿ.ಎಸ್. ಭಾವಿಕಟ್ಟಿ ಕಾರ್ತಿಕೆಯ ಪ್ರಕಾಶನ ಮುಖ್ಯ ರಸ್ತೆ, ಗುಲಬರ್ಗಾ–೧೯೯೯ |
| ೨೪) | ದಿನಕರ ದೇಸಾಯಿ | – | ಚೌಪದಿಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು – ೨೦೧೧ |
| ೨೫) | ದೇವನೂರ ಮಹಾದೇವ | – | ಕುಸುಮ ಬಾಲೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಭವನ ಜೆ.ಸಿ. ರೋಡ್ ಬೆಂಗಳೂರು – ೨೦೧೧ |

೨೬) ಧರಣಿದೇವಿ ಮಾಲಗತ್ತಿ - ಮಾನಿಷಾದ - ಲಕ್ಷ್ಮೀ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್ ಕಾಳಮ್ಮ ದೇವಸ್ಥಾನದ ರಸ್ತೆ, ಮೈಸೂರು-೨೦೦೯

೨೭) ಜವರಯ್ಯ. ಮ.ನ. (ಡಾ.) - ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ - ಸಿದ್ಧಾರ್ಥ ಗ್ರಂಥ ಮಾಲೆ ಕುವೆಂಪು ನಗರ ಮೈಸೂರು-೧೯೯೪

೨೮ ಜೀನದತ್ತ (ಡಾ.) ಹಡಗಲಿ, ಬಸವರಾಜ (ಡಾ.), ಬಿರಾದಾರ (ಸಂ.) - ವಿಮರ್ಶೆ, ಸಂಶೋಧನೆ, ಸಂಸ್ಕೃತಿ ಮಹಿಳಾ ಸಾಹಿತ್ಯ - ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ - ೨೦೧೩

೨೯ ಜೋಗನ್ ಶಂಕರ್ (ಡಾ.) ಮಹೇಶ ತಿಪ್ಪಶೆಟ್ಟಿ (ಡಾ.) ಮಲ್ಲಿಕಾ ಘಂಟಿ (ಡಾ.) ವೆಂಕಟಗಿರಿ ದಳವಾಯಿ (ಸಂ.) - ಕಪ್ಪು ಕಾಲಿನ ಕಡಗ - ಬಾಬುರಾವ ಮುಡಬಿ ಅಭಿನಂದನಾ ಸಮಿತಿ ಬೆಂಗಳೂರು - ೨೦೧೨

೩೦) ನಾಯಕ.ಡಿ.ಬಿ (ಡಾ.) (ಸಂ.) - ಆಯ್ದ ಹೊಸಗನ್ನಡ ಕವಿತೆಗಳು - ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ -೨೦೦೫

೩೧) ನಾಯಕ ಡಿ.ಬಿ. (ಡಾ.) - ವಡ್ಡಾರಾಧನೆ ಕತೆಗಳು - ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ೨೦೦೬

೩೨) ನಾಗಾರ್ಜುನ ಹಾ. ಮ. (ಡಾ.) (ಸಂ.) - ಸ್ತ್ರೀವಾದಿ ಚಿಂತನೆಗಳು - ದೇಸಿ ಪುಸ್ತಕ ವಿಜಯ ನಗರ, ಬೆಂಗಳೂರು - ೨೦೧೧

೩೩) ನೀಲಾ ಕೆ. - ಮಹಿಳಾ ಶೋಷಣೆಯ ನೆಲೆಗಳು - ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ - ೨೦೦೫

೩೪) ಪ್ರಭು ಖಾನಾಪೂರೆ (ಡಾ.) - ದೃಷ್ಟಿ - ಕನ್ನಡ ನಾಡು ಪ್ರಕಾಶನ ಕನ್ನಡ ನಾಡು ಲೇಖಕರ ಮತ್ತು ಓದುಗರ ಸಹಕಾರ ಸಂಘ. ನಿ. ಜಿ. - ವಿ.ವಿ. ಹಾಸ್ಟೆಲ್ ಕಾಂಪ್ಲೆಕ್ಸ್ ಸೇಡಂ ರಸ್ತೆ, ಗುಲಬರ್ಗಾ-೨೦೦೮

೩೫) ಪ್ರಭು ಖಾನಾಪೂರೆ (ಡಾ.) - ಪ್ರಣತಿ - ಸುಗಲಾ ಪ್ರಕಾಶನ ಬೆಂಗಳೂರು - ೨೦೧೧

೩೬) ಪ್ರಹ್ಲಾದ ಅಗಸನ ಕಟ್ಟೆ (ಡಾ.) - ದಲಿತ-ಬಂಡಾಯ ಕಾವ್ಯ ಮತ್ತು ವಿಚಾರವಾದಗಳು - ಹರ್ಷ ಪ್ರಕಾಶನ, ಹುಬ್ಬಳ್ಳಿ-೨೦೦೪

೩೭) ಪುಷ್ಪಾ ಎಚ್.ಎಲ್ – ಅಮೃತಮತಿಯ ಸ್ವಗತ – ಅನ್ವೇಷಣಾ ಪ್ರಕಾಶನ ಬೆಂಗಳೂರು–೧೯೯೨

೩೮) ಬರಗೂರು ರಾಮಚಂದ್ರಪ್ಪ – ಸಂಸ್ಕೃತಿ ಮತ್ತು ಸೃಜನ ಶೀಲತೆ – ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು – ೧೯೮೯

೩೯) ಬರಗೂರು ರಾಮಚಂದ್ರಪ್ಪ (ಸಂ.) – ಬಂಡಾಯ ಕಾವ್ಯ – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು – ೧೯೯೦

೪೦) ಬಸವರಾಜ ಸಬರದ (ಡಾ.) – ನನ್ನವರ ಹಾಡು – ಪಲ್ಲವಿ ಪ್ರಕಾಶನ ಬೀದರ–೧೯೭೬

೪೧) ಬಸವರಾಜ ಸಬರದ – ಮೂಡಲ ಕೆಂಪ ಮಾಡ್ಯಾವ – ಪಲ್ಲವಿ ಪ್ರಕಾಶನ ಬೀದರ–೧೯೮೪

೪೨) ಬಸವರಾಜ ಸಬರದ – ಸಬರದ ಕವಿತೆಗಳು – ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು – ೨೦೦೦

೪೩) ಬಿದರಿ ಚಂದ್ರಕಲಾ – ಮಹಿಳೆ ಮತ್ತು ಶಿಕ್ಷಣ – ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ – ೨೦೦೫

೪೪) ಬಿದರಿ ಚಂದ್ರಕಲಾ (ಡಾ.) – ಮಹಿಳಾ ಬದುಕು ಹೈದ್ರಾಬಾದ ಕರ್ನಾಟಕ ಕಥನ ಸಾಹಿತ್ಯದಲ್ಲಿ – ತನುಮನು ಪ್ರಕಾಶನ ಮೈಸೂರು – ೨೦೦೯

೪೫) ಬೆಳ್ಳಿಚುಕ್ಕಿ ಪುಸ್ತಕಾಲಯ – ಹೋರಾಟದ ಹಾಡುಗಳು – ಬೆಳ್ಳಿಚುಕ್ಕಿ ಟ್ರಸ್ಟ್ – ೨೦೦೬

೪೬) ಬೇಂದ್ರೆ ದ.ರಾ. – ಒಲವೆ ನಮ್ಮ ಬದುಕು – ಕನ್ನಡ ಸಂಸ್ಕೃತಿ ಇಲಾಖೆ ಬೆಂಗಳೂರು – ೨೦೧೦

೪೭) ಭಾಸ್ಕರ ಟಿ.ಎಂ. (ಡಾ.) – ಮಾತನಾಡುವ ಎಲುಬುಗಳು – ಮರುಗು ಪ್ರಕಾಶನ – ೨೦೦೪

೪೮) ಭಾಸ್ಕರ ಟಿ.ಎಂ. (ಡಾ.) – ಅಂಬೇಡ್ಕರ ವಾದ ದಲಿತ – ಮರುಗು ಪ್ರಕಾಶನ – ಸರಸ್ವತಿ ಪುರ ಗುಲಬರ್ಗಾ – ೨೦೦೮

೪೯) ಮರುಳಯ್ಯ ಸಾ.ಶಿ. (ಡಾ.) (ಪ್ರ.ಸಂ.) – ದಲಿತ ಪ್ರಭಾ – ಚಲವಾದಿ ಮಹಾಸಭಾ ಬೆಂಗಳೂರು – ೨೦೧೦

೫೦) ಮರುಳಸಿದ್ದಪ್ಪ ಕೆ. ನಾಗರಾಜ ಕಿ.ರಂ. (ಸಂ.) – ವಚನ ಕಮ್ಮಟ – ಸ್ವಪ್ನಾ ಬುಕ್ ಹೌಸ್ ಬೆಂಗಳೂರು – ೬ನೇ ಮುದ್ರಣ –೨೦೧೫

೫೧) ಮಲ್ಲಿಕಾ ಘಂಟಿ - ಈ ಹೆಣ್ಣುಗಳೆ ಹೀಗೆ - ಯುವಲೋಕ ಪ್ರಕಾಶನ, ಗುಲಬರ್ಗಾ - ೧೯೮೯

೫೨) ಮಲ್ಲಿಕಾ ಘಂಟಿ - ರೊಟ್ಟಿ ಮತ್ತು ಹುಡುಗಿ - ಗೌತಮ ಪ್ರಕಾಶನ ಬಳ್ಳಾರಿ - ೧೯೯೯

೫೩) ಮಲ್ಲಿಕಾ ಘಂಟಿ - ತನುಕರಗದವರಲ್ಲಿ - ಗೌತಮ ಪ್ರಕಾಶನ, ಬಳ್ಳಾರಿ - ೨೦೦೦

೫೪) ಮಲ್ಲಿಕಾ ಘಂಟಿ (ಡಾ.) - ಬೆಲ್ಲದಚ್ಚು ಮತ್ತು ಇರುವೆ ದಂಡು-ವಿಕಾಸಚಂದ್ರ ಪ್ರಕಾಶನ ಬಳ್ಳಾರಿ-೨೦೦೫

೫೫) ಮಾಲತಿ ಪಟ್ಟಣಶೆಟ್ಟಿ - ಮೌನ ಕರಗುವ ಹೊತ್ತು - ನೆಲೆ ಪ್ರಕಾಶನ, ಸಿಂದಗಿ - ೧೯೮೮

೫೬) ಮಾಲತಿ ಪಟ್ಟಣಶೆಟ್ಟಿ - ಎಷ್ಟೊಂದು ನಾವೆಗಳು - ಸಾಹಿತ್ಯ ಪ್ರಕಾಶನ ಕೋವೈಕರ್ ಬೀದಿ ಹುಬ್ಬಳ್ಳಿ - ೨೦೦೯

೫೭) ಮಾಲತಿ ಸೋಮಶೇಖರ (ಡಾ.) - ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಂಸ್ಕೃತಿಕ ಹಿನ್ನೆಲೆ - ವಿಸ್ಮಯ ಪ್ರಕಾಶನ ಕುವೆಂಪು ನಗರ, ಮೈಸೂರ- ೨೦೦೨

೫೮) ಮುಕ್ತಾಯಕ್ಕ ಎಚ್.ಎಸ್ - ನಾನು ಮತ್ತು ಅವನು - ಪ್ರಶಾಂತ ಪ್ರಕಾಶನ ರಾಯಚೂರು- ೧೯೮೩

೫೯) ಮುಕ್ತಾಯಕ್ಕ ಎಚ್.ಎಸ್ - ನೀವು ಕಾಣಿರೆ ನೀವು ಕಾಣಿರೆ - ಕನ್ನಡ ಸಂಘ ಕ್ರೈಸ್ಟ್ ಕಾಲೇಜ ಬೆಂಗಳೂರು-೧೯೯೬

೬೦) ಮೊಗಳ್ಳಿ ಗಣೇಶ - ಸೂರ್ಯನನ್ನು ಬಚ್ಚಿಡಬಹುದೇ - ಶುಭದಾ ಪ್ರಕಾಶನ ಬೆಂಗಳೂರು - ೨೦೦೧

೬೧) ಮೊಗಳ್ಳಿ ಗಣೇಶ - ದೇವ ಸ್ಮಶಾನ - ಪಲ್ಲವ ಪ್ರಕಾಶನ ಚನ್ನಪಟ್ಟಣ ಬಳ್ಳಾರಿ - ೨೦೦೮

೬೨) ರಂಜಾನ್ ದರ್ಗಾ - ಕಾವ್ಯ ಬಂತು ಬೀದಿಗೆ - ಯುವ ಪ್ರಜ್ಞಾ ಪ್ರಕಾಶನ, ಹುಬ್ಬಳ್ಳಿ - ೧೯೭೮

೬೩) ರಂಜಾನ್ ದರ್ಗಾ - ಹೊಕ್ಕಳಲ್ಲಿ ಹೂವಿದೆ - ನವ ಕರ್ನಾಟಕ, ಪ್ರಕಾಶನ - ೧೯೯೬

೬೪) ರಜಿಯಾ ಬಳಬಟ್ಟಿ - ಮೆಹಂದಿ - ನ್ಯಾಷನಲ್ ಪ್ರಕಾಶನ, ಬಾಗಲಕೋಟಿ - ೧೯೯೮

೬೫) ರತ್ನಮ್ಮ ಎಫ್. ಬಾಳಪ್ಪನವರ (ಡಾ.) – ಸ್ವಾತಂತ್ರ್ಯೋತ್ತರ ಕನ್ನಡ ಕಾವ್ಯದಲ್ಲಿ ಸ್ತ್ರೀ ಸಂವೇದನೆಗಳು – ಬುಕ್‌ಲಿಂಕ್ಸ್ ಬೆಂಗಳೂರು – ೨೦೧೧

೬೬) ರಾಘವೇಂದ್ರರಾವ್. ಎಚ್.ಎಸ್. (ಸಂ.) – ಅರವಿಂದ ಮಾಲಗತ್ತಿ ಅವರ ಆಯ್ದ ಕವಿತೆಗಳು – ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು – ೨೦೦೪

೬೭) ಲಲಿತಾನಾಯಕ್ ಬಿ.ಟಿ. – ಬಿದಿರು ಮಳೆಕಂಟಿಯಲಿ – ಅಂಕಿತ ಪ್ರಕಾಶನ ಬೆಂಗಳೂರು – ೧೯೯೭

೬೮) ವಶಿಷ್ಠ – ಕವಿ ಚಕ್ರವರ್ತಿ ರನ್ನನ ಗದಾಯುದ್ಧ – ಚೇತನ ಬುಕ್ ಹೌಸ್ ಮೈಸೂರು – ೨೦೦೯

೬೯) ವಿಜಯಶ್ರೀ ಸಬರದ (ಸಂ.) – ಅಕ್ಕ – ಮಹಾಂತೇಶ ಪ್ರಕಾಶನ ಸಂಸ್ಥೆ ಗುಲಬರ್ಗಾ – ೧೯೮೯

೭೦) ವಿಜಯಶ್ರೀ ಸಬರದ (ಡಾ.) (ಸಂ.) – ಮಹಿಳೆ ಶೋಷಣೆ ಸವಾಲುಗಳು – ನಿರ್ದೇಶಕರು ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ – ೨೦೦೫

೭೧) ವಿಜಯಾ ದಬ್ಬೆ – ಇತಿ ಗೀತಿಕೆ – ರಚನಾ ಪ್ರಕಾಶನ ಮೈಸೂರು – ೧೯೯೬

೭೨) ವೀರಣ್ಣ ಸಿ. – ಕನ್ನಡ ಪ್ರತಿಭಟನೆ ಕಾವ್ಯ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೧೯೮೧

೭೩) ವೀರಣ್ಣ, ಸಿ. (ಡಾ.) – ಕನ್ನಡ ಕಾವ್ಯ ಕಂಡ ಹೆಣ್ಣು – ಶಕ್ತಿ ಮುದ್ರಣ ಮತ್ತು ಪ್ರಕಾಶನ ಬೆಂಗಳೂರು – ೧೯೯೯

೭೪) ವೆಂಕಟೇಶ.ಸಿ.ಡಿ (ಡಾ.) (ಸಂ.) – ಮಹಿಳಾ ಅಧ್ಯಯನದ ನೆಲೆಗಳು – ಶ್ರೀ ಶಿರಡಿ ಸಾಯಿ ಎಂಟರ್‌ಪ್ರೈಸಸ್ ಬೆಂಗಳೂರು – ೨೦೧೦

೭೫) ಶಶಿಕಲಾ ವಸ್ತ್ರದ – ಗುಬ್ಬಿಮನಿ – ನೆಲಮನೆ ಪ್ರಕಾಶನ ತುಮಕೂರ – ೧೯೭೯

೭೬) ಶಶಿಕಲಾ.ಎಸ್.ಡಿ. (ಡಾ.) (ಸಂ.) – ಕಾವ್ಯ ಕುಂಕುಮ – ಜ್ಯೋತಿ ಪ್ರಕಾಶನ ಮೈಸೂರು – ೨೦೦೯

೭೭) ಶಶಿಕಲಾ ವೀರಯ್ಯ ಸ್ವಾಮಿ – ಹೆಂಗ ಹೇಳಲೇ ಗೆಳತಿ – ನೆಲೆಮನೆ ಪ್ರಕಾಶನ ಮೈಸೂರು – ೧೯೮೯

೭೮) ಶಶಿಕಲಾ ವೀರಯ್ಯ ಸ್ವಾಮಿ ಸುಕನ್ಯಾ ಮಾರುತಿ (ಸಂ.) – ಪ್ರಣಯಿನಿ – ನೆಲೆ ಪ್ರಕಾಶನ ಸಿಂದಗಿ – ೧೯೯೬

೭೯) ಶಿವಾನಂದ ಎಸ್. ವಿರಕ್ತಮಠ (ಡಾ.) – ಮಹಿಳೆ ಮತ್ತು ಧರ್ಮ – ಕನ್ನಡ ವಿಶ್ವವಿದ್ಯಾಲಯ ಹಂಪಿ – ೨೦೧೦

೮೦) ಶಿವಪ್ರಕಾಶ ಎಸ್.ಎಚ್. – ಇರಾವತಿ ಕರ್ವೇ – ಯುಗಾಂತರ, ಓರಿಯಂಟ್, ಲಾಂಗ್‌ಮನ್, ಲಾಂಗ್‌ಮನ್ ಲಿಮಿಟೆಡ್ ಮಹಾತ್ಮಾಗಾಂಧಿ ರಸ್ತೆ ಬೆಂಗಳೂರು – ೧೯೯೬

೮೧) ಶ್ರೀಕಂಠಯ್ಯ ತಿ.ನಂ. – ಗಿರಿಜಾ ಕಲ್ಯಾಣ – ಪ್ರತಿಭಾ ಪ್ರಕಾಶನ ಮೈಸೂರು – ೧೯೮೦

೮೨) ಶ್ರೀಮತಿ ಎಚ್.ಎಸ್. (ಡಾ.) – ಸ್ತ್ರೀವಾದ – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೩

೮೩) ಶ್ರೀಮತಿ ಎಚ್.ಎಸ್. (ಡಾ.) – ಸಿಮೋನ್ ದ ಬೊವಾ ದ ಸೆಕೆಂಡ್ ಸೆಕ್ಸ್ – ಕೆ.ಬಿ. ಪ್ರಗತಿ ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು – ೨೦೧೧

೮೪) ಶೇಖರ (ಡಾ.) (ಸಂ.) – ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಹಿಳಾ ಪರ ಕಾಳಜಿಗಳು – ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು –೨೦೦೭

೮೫) ಶೇಷಗಿರಿರಾವ ಎಲ್.ಎಸ್. – ಹೊಸಗನ್ನಡ ಸಾಹಿತ್ಯ ಚರಿತ್ರೆ – ಸ್ವಪ್ನ ಬುಕ್ ಹೌಸ್ ಬೆಂಗಳೂರು –೨೦೦೯

೮೬) ಶೈಲಜಾ ಹಿರೇಮಠ – ಪಾತರದವರು – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ – ೧೯೯೯

೮೭) ಷರೀಫಾ . ಕೆ. – ನೂರೆನ್‌ಳ ಅಂತರಂಗ – ನಿಶಾತ್ ಪ್ರಕಾಶನ ಹರಿಹರ – ೧೯೯೭

೮೮) ಷರೀಫಾ ಕೆ. – ಮುಮ್ತಾಜಳ ಮಹಲು – ನವಕರ್ನಾಟಕ ಪ್ರಕಾಶನ – ೨೦೦೧

೮೯) ಷರೀಫಾ ಕೆ. (ಡಾ.) (ಸಂ.) – ಹೊಸ ಶತಮಾನದ ಕಾವ್ಯ – ಕನ್ನಡ ಸಾಹಿತ್ಯ ಪರಿಷತ್ ಪಂಪ ಮಹಾಕಾವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೨೦೧೧

೯೦) ಸದಾಶಿವ ದೊಡಮನಿ – ನೆರಳಿಗೂ ಮೈಲಿಗೆ – ದಲಿತ ಸಾಹಿತ್ಯ ಪರಿಷತ್ತು ರಾಜ್ಯ ಘಟಕ ಗದಗ – ೨೦೦೯

೯೧) ಸತೀಶ ಕುಲಕರ್ಣಿ – ವಿಷಾದ ಯೋಗ – ವೈಶಾಖ ಪ್ರಕಾಶನ ಬೆಂಗಳೂರು – ೧೯೯೪

೯೨) ಸತ್ಯಾನಂದ ಪಾತ್ರೋಟ – ಜಾಜಿ ಮಲ್ಲಿಗೆ – ಸಮತಾ ಪ್ರಕಾಶನ, ಬಾಗಲಕೋಟೆ – ೧೯೯೦

೯೩) ಸತ್ಯಾನಂದ ಪಾತ್ರೋಟ – ಕಲ್ಲಿಗೂ ಗೊತ್ತಿರುವ ಕಥೆ – ಸಮತಾ ಪ್ರಕಾಶನ, ಬಾಗಲಕೋಟೆ – ೧೯೯೪

೯೪) ಸಣಕಲ್ಲ ಕು. ಕೆ.ಜಿ. (ಸಂ.) – ಮಹಿಳಾ ಕಾವ್ಯ ಸಂಗ್ರಹ – ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ–೨೦೧೨

೯೫) ಸರಸ್ವತಿ ದು. – ಹೆಣೆದರೆ ಜೇಡನಂತೆ – ಇಳಾ ಪ್ರಕಾಶನ ಬೆಂಗಳೂರು–೧೯೯೭

೯೬) ಸರಸ್ವತಿ ದು. – ಜೀವಸಂಪಿಗೆ – ಅಭಿನವ ಮೊದಲನೇ ಮುಖ್ಯ ರಸ್ತೆ, ಮಾರೇನ ಹಳ್ಳಿ ವಿಜಯ ನಗರ, ಬೆಂಗಳೂರು–೨೦೦೬

೯೭) ಸರಜೂ ಕಾಟ್ಕರ್ – ಅವ್ವ – ಲೋಹಿಯಾ ಪ್ರಕಾಶನ ಬಳ್ಳಾರಿ – ೨೦೦೧

೯೮) ಸರಜೂ ಕಾಟ್ಕರ್ (ಡಾ.) – ಕಾವ್ಯ ಕಾರ್ತಿಕ – ಪ್ರಕಾಶನ ಗಿರಿಮಲ್ಲನವರ್ ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೆಳಗಾವಿ – ೨೦೦೩

೯೯) ಸರಜೂ ಕಾಟ್ಕರ್. (ಸಂ.) – ಕನ್ನಡ ಬಂಡಾಯ ಸಾಹಿತ್ಯ – ಅಕಾಡೆಮಿ ನವದೆಹಲಿ – ೨೦೧೨

೧೦೦) ಸರ್ವಮಂಗಳ ಎಂ. ಕುದರಿ (ಡಾ.) – ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿ – ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ–ವಿಜಾಪುರ – ೨೦೧೨

೧೦೧) ಸರ್ವಮಂಗಳ – ಅಮ್ಮನ ಗುಡ್ಡ – ಋಜುವಾತು ಪ್ರಕಾಶನ ಮೈಸೂರು – ೧೯೮೮

೧೦೨) ಸಿದ್ಧಲಿಂಗಯ್ಯ (ಡಾ.) – ನನ್ನ ಜನಗಳು ಮತ್ತು ಇತರ ಕವಿತೆಗಳು – ಕನ್ನಡ ಸಂಸ್ಕೃತಿ ಇಲಾಖೆ ಬೆಂಗಳೂರು – ೧೯೯೭

೧೦೩) ಸಿದ್ಧಲಿಂಗಯ್ಯ – ಮೆರವಣಿಗೆ – ಅಂಕಿತ ಪುಸ್ತಕ ಬೆಂಗಳೂರು – ೨೦೦೦

೧೦೪) ಸಿದ್ಧಯ್ಯ ಕೆ.ಬಿ. – ಅನಾತ್ಮ – ನೆಲಸಿರಿ ಪ್ರಕಾಶನ ತುಮಕೂರ – ೨೦೦೩

೧೦೫) ಸಿದ್ಧಯ್ಯ ಕೆ.ಬಿ., ಗೋವಿಂದಯ್ಯ, ನಟರಾಜ್ ಬೂದಾಳ (ಸಂ.) – ದಲಿತ ಕಾವ್ಯ – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು – ೧೯೯೬

೧೦೬) ಸುಕನ್ಯಾ ಮಾರುತಿ – ನಾನು ನನ್ನವರು – ಸಂಗ್ರಾಮ ಪ್ರಕಾಶನ ಧಾರವಾಡ – ೧೯೮೫

೧೦೭) ಸುಕನ್ಯಾ ಮಾರುತಿ – ತಾಜ ಮಹಲನ ಹಾಡು – ಸಂಗ್ರಾಮ ಪ್ರಕಾಶನ, ಧಾರವಾಡ – ೧೯೯೨

೧೦೮) ಸುಧಾಕರ (ಸಂ.) – ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು – ಕನ್ನಡ ಸಂಸ್ಕೃತಿ ಇಲಾಖೆ ಬೆಂಗಳೂರು – ೨೦೧೦

೧೦೯) ಸೂಗಯ್ಯ ಹಿರೇಮಠ – ಉಂಡು ಮಲಗಿದವರು – ಧ್ವನಿ ಪ್ರಕಾಶನ, ಚಿಂಚೋಳಿ – ೧೯೮೪

೧೧೦) ಹನುಮಂತಯ್ಯ. ಎಲ್. – ಅವ್ವನ ಕವಿತೆ – ಶಕ್ತಿ ಮುದ್ರಣ ಮತ್ತು ಪ್ರಕಾಶನ ಬೆಂಗಳೂರು – ೧೯೯೯

೧೧೧) ಹನುಮಂತರಾಯ (ಡಾ.) – ಜನಪದ ಮಹಾಕಾವ್ಯಗಳಲ್ಲಿ ದಲಿತ ಸಂವೇದನೆ – ಶ್ರೀ ಅನ್ನಪೂರ್ಣ ಪ್ರಕಾಶನ, ಬೆಂಗಳೂರು – ೨೦೦೮

೧೧೨) ಹೇಮಾ ಪಟ್ಟಣಶೆಟ್ಟಿ – ಕಣ್ಣುಗಳು ಕನಸು ತುಂಬಿ – ಅನನ್ಯ ಪ್ರಕಾಶನ ಧಾರವಾಡ – ೧೯೯೩

೧೧೩) ಹೊಸೂರು ಮುನಿಶಾಮಪ್ಪ – ದಲಿತ ಜನ – ಕಿರಣ ವಾಹಿನಿ ಪ್ರಕಾಶನ ಬೆಂಗಳೂರು – ೧೯೯೧

ಇತರೆ ಆಕರಗಳು :

೧) ಆಡಿ. Ambedkar college of Arts and Commerce, Gulbarga Industry, Gulbarga-empowerment of women-New Horizons-Emerging opportunities and potentialities in Hyderabad Karnataka Region – ೨೪.೨೫-೧೦-೨೦೧೦

೨) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರ – ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಸಂಘ (ರಿ) ಬೀದರ – ರಾಜ್ಯ ಮಟ್ಟದ ಕನ್ನಡಿಗರ ಭಾಷಾ ಭಾವ್ಯಕ್ಯ ಸಾಂಸ್ಕೃತಿಕ ಸಮಾವೇಶ-೦೨-೦೮-೨೦೨೧

೩) ಕರ್ನಾಟಕ ಕೇಂದ್ರಿಯ ವಿಶ್ವವಿದ್ಯಾಲಯ ಗುಲಬರ್ಗಾ – ಎರಡು ದಿನಗಳ ರಾಷ್ಟ್ರೀಯ ಕಾರ್ಯಗಾರ – ಸ್ತ್ರೀವಾದ ಮತ್ತು ಕನ್ನಡ ಸಾಹಿತ್ಯ (೧೨,೧೩-೦೪-೨೦೧೩)

೪) Karnataka Sahitya Sangha® Bidar-National Folk LiteratureConference-Janapada Kavyagalalli Mahile- ೨೬.೨೭.೨೮-೦೩-೨೦೧೪

೫) ಸಂಶೋಧನ ಕಮ್ಮಟ – ಕನ್ನಡ ವಿಶ್ವವಿದ್ಯಾಲಯ ಹಂಪಿ-೦೨-೧೧-೨೦೧೩

೬) ಪ್ರಜಾವಾಣಿ ದಿನ ಪತ್ರಿಕೆ-೨೧-೦೧-೨೦೧೨-ಪುಟ-೭

೭) ಸಂಯುಕ್ತ ಕರ್ನಾಟಕ ದಿನಪತ್ರಿಕೆ – ೧೧-೦೪-೨೦೧೫ ಪುಟ-೮

## ವಿದ್ವಾಂಸರ ಜೊತೆ ಸಂವಾದ

| | | |
|---|---|---|
| ೧) ಡಾ. ಬಸವರಾಜ ಸಬರದ | – | ೨೦-೦೩-೨೦೧೧ |
| ೨) ಡಾ. ವಿಜಯ ಶ್ರೀ ಸಬರದ | – | ೦೩-೧೧-೨೦೧೨ |
| ೩) ಡಾ. ಮೊಗಳ್ಳಿ ಗಣೇಶ | – | ೧೦-೧೨-೨೦೧೨ |
| ೪) ಡಾ. ಮೀನಾಕ್ಷಿ ಬಾಳಿ | – | ೧೩-೧೨-೨೦೧೨ |
| ೫) ಡಾ. ಶಾಂತಾ ಅಷ್ಟಗಿ | – | ೦೧-೦೩-೨೦೧೩ |
| ೬) ಕೆ. ನೀಲಾ | – | ೧೧-೦೪-೨೦೧೪ |
| ೭) ಡಾ. ಇಂದುಮತಿ ಪಾಟೀಲ | – | ೧೦-೦೫-೨೦೧೫ |
| ೮) ಡಾ. ಪ್ರಭು ಖಾನಾಪುರೆ | – | ೧೫-೦೬-೨೦೧೫ |
| ೯) ಡಾ. ಅರ್ಜುನ ಗೊಳಸಂಗಿ | – | ೨೨-೦೪-೨೦೧೬ |